# ೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ - ರಾಜಕೀಯ ಆಶಯಗಳ ಅನುಷ್ಠಾನದ ಅಧ್ಯಯನ

(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ರಾಜ್ಯಶಾಸ್ತ್ರ ವಿಷಯದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧನಾ ವಿದ್ಯಾರ್ಥಿ
ಶ್ರೀಮತಿ ಸುಜಾತ

ಮಾರ್ಗದರ್ಶಕರು
ಡಾ. ಎ. ಶ್ರೀಧರ
ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೯

# ೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ - ರಾಜಕೀಯ ಆಶಯಗಳ ಅನುಷ್ಠಾನದ ಅಧ್ಯಯನ

(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ರಾಜ್ಯಶಾಸ್ತ್ರ ವಿಷಯದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧನಾ ವಿದ್ಯಾರ್ಥಿನಿ

**ಶ್ರೀಮತಿ ಸುಜಾತ**

ಮಾರ್ಗದರ್ಶಕರು

**ಡಾ. ಎ. ಶ್ರೀಧರ**

**ಪ್ರಾಧ್ಯಾಪಕರು**





**ಸಮಾಜ ವಿಜ್ಞಾನಗಳ ನಿಕಾಯ**

**ಅಭಿವೃದ್ಧಿ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೯

## ಸಂಶೋಧಕರ ಘೋಷಣಾ ಪತ್ರ

೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ – ರಾಜಕೀಯ ಆಶಯಗಳ ಅನುಷ್ಠಾನದ ಅಧ್ಯಯನ (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ೨೦೧೯–೨೦ನೇ ಶೈಕ್ಷಣಿಕ ಸಾಲಿನಲ್ಲಿ ವಿಭಾಗದ ಪ್ರಾಧ್ಯಾಪಕರಾದ ಡಾ. ಎ.ಶ್ರೀಧರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧವನ್ನು ಪೂರ್ಣವಾಗಿಯಾಗಲಿ, ಅಂಶಿಕವಾಗಿಯಾಗಲಿ ಯಾವುದೇ ಪದವಿಗಾಗಿ ಈ ಮೊದಲು ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 16/11/19
ಸ್ಥಳ : ಬಳ್ಳಾರಿ

Sujatha
ಶ್ರೀಮತಿ ಸುಜಾತ
ಸಂಶೋಧನಾ ವಿದ್ಯಾರ್ಥಿ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ – ರಾಜಕೀಯ ಆಶಯಗಳ ಅನುಷ್ಠಾನದ ಅಧ್ಯಯನ (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ **ಶ್ರೀಮತಿ ಸುಜಾತ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಪ್ರಸ್ತುತ ಮಹಾಪ್ರಬಂಧವಾಗಲೀ ಅಥವಾ ಯಾವುದೇ ಭಾಗವನ್ನಾಗಲೀ ಈ ಮೊದಲು ಬೇರೆ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 16/11/19
ಸ್ಥಳ : ವಿದ್ಯಾರಣ್ಯ

ಡಾ. ಟಿ. ಶ್ರೀಧರ
ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

## ೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ
## "ರಾಜಕೀಯ ಆಶಯಗಳ ಅಧ್ಯಯನ"
### (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

## ಪರಿವಿಡಿ

# ಅಧ್ಯಾಯ – ಒಂದು

## ಅಧ್ಯಯನದ ಉದ್ದೇಶ, ವಿಧಾನ ಮತ್ತು ವ್ಯಾಪ್ತಿ

# ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ವಿಧಾನ ಮತ್ತು ವ್ಯಾಪ್ತಿ

## ೧.೧. ಪ್ರಸ್ತಾವನೆ :

ಜಾಗತೀಕರಣದ ಹಿನ್ನೆಲೆಯಲ್ಲಿ ವಿಕೇಂದ್ರೀಕರಣ ಮತ್ತು ಸಮುದಾಯ ಅಭಿವೃದ್ಧಿಯ ನಿರ್ವಹಣೆಯು ಪ್ರಮುಖ ಪಾತ್ರವನ್ನು ಹೊಂದಿವೆ. ಸಮುದಾಯ ಅಭಿವೃದ್ಧಿಯ ಹೆಚ್ಚಿನ ಪ್ರಕ್ರಿಯೆಗಳು ವಿಕೇಂದ್ರೀಕೃತ ವ್ಯವಸ್ಥೆಯಲ್ಲಿ ನಂಬಿಕೆಯನ್ನಿರಿಸಿದೆ. ಪ್ರಸ್ತುತ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಬಡವರ್ಗವು ಜೀವನೋಪಾಯದ ಶೈಲಿಯನ್ನು ಕಳೆದುಕೊಳ್ಳುವ ಅಥವಾ ಬದಲಾಯಿಸಬೇಕಾದ ಅನಿವಾರ್ಯತೆಗೆ ಸಿಲುಕಿದಾಗ, ವಿಕೇಂದ್ರಿಕರಣವು ಇಂತಹ ನಿರ್ಣಯಗಳ ವಿರುದ್ಧ ಧ್ವನಿ ಎತ್ತುವ ಅವಕಾಶವನ್ನು ಒದಗಿಸಿಕೊಡುತ್ತದೆ. ವಿಶ್ವದಲ್ಲಿ ಪ್ರಜೆಗಳಿಗೆ ಆಳ್ವಿಕೆಯ ಹಕ್ಕು ನಿರಂತರ ಹೋರಾಟದಿಂದಲೇ ಲಭ್ಯವಾಗಿದೆ. ನಿರುಂಕುಶ ಪ್ರಭುತ್ವದ ಹಿಡತದಿಂದ ಬಿಡುಗಡೆಯಾಗಿ, ಪ್ರಜೆಗಳ ಸರ್ಕಾರ ಸ್ಥಾಪಿಸಲು ಅನೇಕ ಹೋರಾಟ, ಚಳುವಳಿಗಳು ನಡೆದವು. ಇದರ ಪ್ರತಿಫಲವಾಗಿಯೇ ಭಾರತ ಕೂಡ ಸ್ವತಂತ್ರವಾಯಿತು.

ಜಾಗತೀಕರಣದ ನೆಲೆಗಟ್ಟಿನಲ್ಲಿ ಭಾರತದ ಸಾಮಾಜಿಕ-ಆರ್ಥಿಕ ಸ್ಥಿತಿಗತಿಗಳನ್ನು ಅವಲೋಕಿಸಿದಾಗ, ವಿಕೇಂದ್ರೀಕರಣವು ಬಡವರ ಮತ್ತು ಮಹಿಳೆಯರ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದೆ. ಅಂತೆಯೇ ಬಡವರ್ಗದ ಧ್ವನಿ ಹಾಗೂ ಕಾಳಜಿಗಳನ್ನು ಪೂರೈಸುವಲ್ಲಿ ವಿಕೇಂದ್ರೀಕರಣವು ಸಹಕರಿಸುತ್ತದೆ. ಮಹಾತ್ಮ ಗಾಂಧಿ ಕಂಡುಕೊಂಡಂತೆ, ಜಾಗತಿಕ, ಪ್ರಾದೇಶಿಕ ಹಾಗೂ ದೇಶಗಳ ಮಟ್ಟದಲ್ಲಿ ಈ ರೀತಿಯ ಧ್ವನಿಗಳಿಗೆ ಆಶಾದಾಯಕವಾದ ಕೆಲಸವನ್ನು ವಿಕೇಂದ್ರೀಕರಣ ಮಾಡುತ್ತಿದೆ.[೧]

**ಭಾರತದಲ್ಲಿ ವಿಕೇಂದ್ರೀಕರಣದ ಉಗಮ ಮತ್ತು ಬೆಳವಣಿಗೆ**

ಭಾರತದಲ್ಲಿ ಪಂಚಾಯತಿ ರಾಜ್ ವ್ಯವಸ್ಥೆ ಬಹಳ ಹಿಂದಿನಿಂದಲೂ ಬೆಳೆದುಬಂದಿರುವ ಒಂದು ಪದ್ಧತಿ. ಅಂದು ಪ್ರತಿ ಹಳ್ಳಿಗಳಲ್ಲೂ ಪಂಚಾಯಿತಿಗಳಿದ್ದು, 'ಪಂಚರು' ಪಂಚಾಯತಿಗಳ ಮುಖ್ಯಸ್ಥರಾಗಿರುತ್ತಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಅವರು ಪ್ರಬಲವಾಗಿದ್ದರು. ಅಂತಹವರಿಗೆ ಮಾತ್ರ ವಂಶಪಾರಂಪರ್ಯವಾಗಿ ಪಂಚರಾಗಿ ಅಧಿಕಾರ

ನಡೆಸಲು ಅವಕಾಶವಿತ್ತು. ಈ ಪಂಚರು ಮೇಲ್ವರ್ಗ, ಮೇಲ್ಜಾತಿಗೆ (ಗೌಡ, ಶಾನಭೋಗರು, ಬ್ರಹ್ಮಣರು) ಸೇರಿದವರಾಗಿದ್ದು, ಪಂಚಾಯಿತಿಯ ಕಾರ್ಯ-ಕಲಾಪ ಮತ್ತು ಅಧಿಕಾರಿಗಳನ್ನು ಹೊಂದಿದ್ದರು, ಆದರೆ ದುರ್ಬಲ ವರ್ಗದವರಿಗೆ (ಕೆಳಜಾತಿ), ಮಹಿಳೆಯರಿಗೆ ಯಾವುದೇ ರೀತಿಯ ಅವಕಾಶಗಳನ್ನಾಗಲಿ, ಸೌಕರ್ಯಗಳಾಗಲಿ ಇರುತ್ತಿರಲಿಲ್ಲ. ಅಧಿಕಾರ ಚಲಾಯಿಸುವ ಹಕ್ಕು ಸೀಮಿತ ವರ್ಗಕ್ಕೆ ಮಾತ್ರ ಇತ್ತು. ಗ್ರಾಮದ ಅಭಿವೃದ್ಧಿ, ಜನರ ವ್ಯಾಜ್ಯ, ಸಾಂಪ್ರದಾಯಿಕ ಕಟ್ಟು-ಪಾಡುಗಳು ಮುಂತಾದವುಗಳಿಗೆ ನ್ಯಾಯ ನೀಡುತ್ತಿದ್ದರು. ಹೀಗೆ ಪಂಚರು ನಿರ್ವಹಿಸುತ್ತಿದ್ದ ನ್ಯಾಯ ಪದ್ಧತಿ ಮುಂದೆ ಪಂಚಾಯತಿ ರಾಜ್ ಸಂಸ್ಥೆಗಳಾಗಿ ಮಾರ್ಪಾಡಾಗುತ್ತಾ ಬಂತು.

ಪಂಚಾಯತಿ ರಾಜ್ ವ್ಯವಸ್ಥೆಯು ಸ್ಥಳೀಯ ಜನರ ಆಶೋತ್ತರಗಳಿಗೆ, ಸ್ಥಳೀಯ ಆಡಳಿತಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದೆ. ಭಾರತದ ಅರಸು ಮನೆತನಗಳ ಅವಧಿಯಲ್ಲಿ ಇವುಗಳಿಗೆ ಶಾಸನೀಯ, ಕಾರ್ಯಾಂಗೀಯ, ನ್ಯಾಯಾಂಗೀಯ ಅಧಿಕಾರಗಳೆಲ್ಲವು ನೀಡಲಾಗಿತ್ತು. ಆದರೆ ಅಂದಿನ ಜಾತಿ ವ್ಯವಸ್ಥೆಯ ಕಾರಣದಿಂದಾಗಿ, ಪಂಚಾಯತಿ ರಾಜ್ ವ್ಯವಸ್ಥೆಯು ತನ್ನ ಅಸ್ತಿತ್ವ ಕಳೆದುಕೊಳ್ಳಲಾರಂಭಿಸಿತು.

ಭಾರತಕ್ಕೆ ಬ್ರಿಟಿಷರ ಆಗಮನಕ್ಕಿಂತಲೂ ಪೂರ್ವದಲ್ಲಿ ಜಾತಿ ಮತ್ತು ಹಳ್ಳಿ ಪಂಚಾಯತಿಗಳ ಅಸ್ತಿತ್ವವಿತ್ತು. ಮೂಲಭೂತವಾಗಿ ಜಾತಿ ಪಂಚಾಯತಿಗಳು ವಸ್ತುಗಳ ಉತ್ಪಾದನೆ ಮತ್ತು ವಿತರಣೆ, ವಿವಾಹ ಮತ್ತು ಇತರ ನಿಯಮಗಳ ಬಗ್ಗೆ ಕಾಳಜಿ ಹೊಂದಿದ್ದವು. ಹಳ್ಳಿ ಪಂಚಾಯತಿಗಳು ಹಳ್ಳಿಯಲ್ಲಿದ್ದ ಪ್ರಮುಖ ಕುಟುಂಬಗಳ ವಯಸ್ಕರನ್ನು ಹೊಂದಿದ್ದವು. ಪ್ರಾಥಮಿಕವಾಗಿ ಈ ಪಂಚಾಯತಿಗಳು ನಾಗರಿಕ ಸಮಸ್ಯೆಗಳಾದ ಭೂಮಿ ಮತ್ತು ಅದರ ಒಡೆತನಕ್ಕೆ ಸಂಬಂಧಿಸಿದ ಪ್ರಕರಣಗಳನ್ನು ನಿಭಾಯಿಸುತ್ತಿದ್ದವು. ಇದು ಭೂಮಿಯ ಖರೀದಿ, ನೀರು ಇತ್ಯಾದಿಗಳ ನಿರ್ವಹಣೆಗೆ ಸಂಬಂಧಿಸಿದ ಮೇಲ್ವಿಚಾರಕ ಕೆಲಸಗಳನ್ನು ಮಾಡುತ್ತಿತ್ತು. ತೆರಿಗೆ, ಕಂದಾಯ ವ್ಯವಸ್ಥೆಗಳ ನಿರ್ವಹಣೆಯನ್ನು ಕಡ್ಡಾಯವಾಗಿ ಇದು ಮಾಡುತ್ತಿತ್ತು. ಜಮೀನ್ದಾರರ ನಡುವಿನ ರಾಜಕೀಯ ಭಿನ್ನಾಭಿಪ್ರಾಯಗಳನ್ನೂ ಇದು ನಿರ್ವಹಿಸುತ್ತಿತ್ತು.

ಭಾರತದ ಸಾಮಾಜಿಕ ಮತ್ತು ರಾಜಕೀಯ ಜನಜೀವನದ ಪ್ರಮುಖ ಭಾಗವಾಗಿ ಹಳ್ಳಿಗಳಿವೆ. ಪ್ರಾಚೀನ ಕಾಲದಿಂದಲೂ ಹಳ್ಳಿಗಳು ಭಾರತದಲ್ಲಿ ಆಡಳಿತದ ಕೇಂದ್ರ ಬಿಂದುವಾಗಿಯೇ ನಿಲ್ಲುತ್ತವೆ. ಸ್ಥಳೀಯ ಸರಕಾರಗಳ ವಿವಿಧ ರೂಪಗಳು ಆ ಕಾಲದಿಂದ ಇಲ್ಲಿಯವರೆಗೆ ಪ್ರತಿನಿಧಿಸಲ್ಪಡುತ್ತಾ ಬಂದಿವೆ. ವೇದಗಳ ಕಾಲ, ಮೌರ್ಯರ ಕಾಲಘಟ್ಟ, ಮಧ್ಯಯುಗದ ಸಮಯ ಹಾಗೂ ಬ್ರಿಟಿಷ್ ಆಡಳಿತದಲ್ಲಿ ವಿವಿಧ ಘಟಕಗಳಾಗಿ ಸ್ಥಳೀಯ ಸರಕಾರಗಳ ಸ್ವರೂಪಗಳಿತ್ತು.

ಉತ್ತಮ ಆಡಳಿತವು ಮಾನವ ಹಕ್ಕುಗಳು, ಕಾನೂನಿನ ನೆಲೆಗಟ್ಟು, ಪ್ರಜಾಸತ್ತೆಯ ಬಲಗೊಳಿಸುವಿಕೆ, ಸಾರ್ವಜನಿಕ ಆಡಳಿತದಲ್ಲಿ ದಕ್ಷತೆ ಮತ್ತು ಪಾರದರ್ಶಕತೆಯಂತಹ

ಅಂಶಗಳನ್ನು ನಿರೀಕ್ಷಿಸುತ್ತದೆ. ರಾಜ್ಯದ ಜವಾಬ್ದಾರಿ ಮತ್ತು ಜನರ ನಿರೀಕ್ಷೆಗಳು ಹಾಗೂ ನಾಗರಿಕರನ್ನು ಒಳಗೊಳ್ಳುವಂತಹ ಅಂಶಗಳೂ ಇದರಲ್ಲಿ ಸೇರಿವೆ. ಪ್ರಜಾಸತ್ತೆಯು ಎಲ್ಲಾ ಮಾನವರು ಸಮಾನರು ಎಂದು ಪರಿಗಣಿಸುತ್ತಾ, ಸಾಮಾಜಿಕ ಮತ್ತು ರಾಜಕೀಯ ಪರಿವರ್ತನೆ ಹಾಗೂ ಗೌರವದ ಬದುಕನ್ನು ಬಯಸುತ್ತದೆ.

ಭಾರತದಲ್ಲಿ ವಿಕೇಂದ್ರಿಕರಣ ವ್ಯವಸ್ಥೆಯು ಸ್ಥಳೀಯ ಸರಕಾರಗಳ ಮೂಲಕ ಹೆಚ್ಚು ಪ್ರತಿಫಲನಗೊಳ್ಳುತ್ತದೆ. ಈ ವ್ಯವಸ್ಥೆಯಲ್ಲಿ ಮಾನವ ಅಭಿವೃದ್ಧಿ ಮತ್ತು ಸ್ಥಳೀಯ ಸರಕಾರಗಳ ದಕ್ಷತೆಯು ಸಮಾನಂತರವಾಗಿ ಸಾಗುತ್ತದೆ. ಆದರೆ ಸ್ಥಳೀಯ ಸರಕಾರಗಳನ್ನು ಬಲಗೊಳಿಸುವಲ್ಲಿ ಜನತೆಯ ಪಾಲ್ಗೊಳ್ಳುವಿಕೆ ಬಹಳ ಮುಖ್ಯ. ಅದರಲ್ಲೂ ಸ್ಥಳೀಯ ಸಂಪನ್ಮೂಲ ಹಾಗೂ ಸಂಸ್ಥೆಗಳನ್ನು ನಿರ್ವಹಣೆ ಮಾಡುವಲ್ಲಿ ಜನತೆಯ ಭಾಗವಹಿಸುವಿಕೆ ಮುಖ್ಯ ಪಾತ್ರವನ್ನು ವಹಿಸುತ್ತದೆ. ಸ್ಥಳೀಯ ಸಂಸ್ಥೆಗಳಲ್ಲಿ ಜನತೆಯ ಪಾಲ್ಗೊಳ್ಳುವಿಕೆಗೆ ಹೆಚ್ಚು ಅವಕಾಶಗಳನ್ನು ಕಲ್ಪಿಸಿಕೊಡುವ ಮೂಲಕ ಜಾತಿ ಮತ್ತು ಲಿಂಗಾಧಾರಿತವಾಗಿರುವ ಅಸಮಾನತೆಗಳನ್ನು ಕಡಿಮೆಗೊಳಿಸಬಹುದು. ಪಂಚಾಯತಿ ರಾಜ್ ವ್ಯವಸ್ಥೆಯಲ್ಲಿ ಈ ರೀತಿಯ ದಕ್ಷತೆಯನ್ನು ಹೆಚ್ಚುಗೊಳಿಸುವ ಮೂಲಕ ಬಡತನ ನಿವಾರಣೆ ಮತ್ತು ಮಾನವ ಅಭಿವೃದ್ಧಿಯ ಸುಸ್ಥಿರ ಅಭಿವೃದ್ಧಿಯನ್ನು ಕಾಣಬಹುದು.

ಪ್ರಜಾಸತ್ತೆ, ಸ್ಥಳೀಯ ಆಡಳಿತ ಹಾಗೂ ಒಳಗೊಳ್ಳುವಿಕೆ ಇವುಗಳ ಕೇಂದ್ರ ಮೌಲ್ಯಗಳೆಂದರೆ ಭಾಗವಹಿಸುವಿಕೆ, ಗೌರವ ಹಾಗೂ ಕಾನೂನಿನಡಿಯಲ್ಲಿ ಸಮಾನತೆಯನ್ನು ಕಾಣುವುದಾಗಿದೆ. ಆಡಳಿತ ಪ್ರಕ್ರಿಯೆಗಳಲ್ಲಿ ಅರ್ಥಪೂರ್ಣವಾಗಿ ಭಾಗವಹಿಸುವುದು ಮತ್ತು ಒಳ್ಳೆಯ ತೀರ್ಮಾನಗಳನ್ನು ತೆಗೆದುಕೊಳ್ಳುವಂತೆ ಪ್ರೇರೇಪಿಸುವುದನ್ನು ಇದು ಒಳಗೊಂಡಿದೆ. ಆಡಳಿತ ಸಂಸ್ಥೆಗಳು ಮತ್ತು ಅದರ ನೀತಿಗಳು ಜನತೆಯನ್ನು ತಲುಪುವುದನ್ನು ಹಾಗೂ ಆ ಮೂಲಕ ಉತ್ತರದಾಯಿತ್ವವನ್ನು ಹೊಂದುವುದನ್ನು ಮತ್ತು ಅವಕಾಶ ವಂಚಿತ ಗುಂಪುಗಳೊಡನೆ ಸಂವೇದನಾಶೀಲತೆಯಿಂದ ವ್ಯವಹರಿಸುವುದನ್ನು ಇದು ಖಚಿತಗೊಳಿಸುತ್ತದೆ. ಇಂತಹ ಗುಂಪುಗಳ ಆಸಕ್ತಿಗಳನ್ನು ರಕ್ಷಿಸುತ್ತಾ, ಭಿನ್ನ ಅಭಿರುಚಿಗಳ ಜನಸಮುದಾಯಗಳಿಗೆ ಸಾಮಾಜಿಕ ನ್ಯಾಯ, ಆರೋಗ್ಯ ಮತ್ತು ಶಿಕ್ಷಣದಲ್ಲಿ ಸಮಾನ ಅವಕಾಶಗಳನ್ನು ನೀಡುವುದಾಗಿದೆ ಎಂದು ಸ್ಥಳೀಯ ಆಡಳಿತವನ್ನು ಅರ್ಥೈಸಿಕೊಳ್ಳಬಹುದು.

ರಾಜಕೀಯ ವಿಕೇಂದ್ರೀಕರಣವು ರಾಜಕೀಯ ಮತ್ತು ನಾಗರಿಕ ಚಿಂತನೆಯ ಸಂವಾದದಲ್ಲಿ ಬಹಳ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಪ್ರಪಂಚಕ್ಕೆ ಭಾರತ ರಾಜಕೀಯ ವಿಕೇಂದ್ರಿಕರಣವನ್ನು ಪರಿಚಯಿಸಿದೆ. ಆ ಮೂಲಕ ನೀತಿ–ನಿರೂಪಕರು ಇಂದು ಆರ್ಥಿಕ ವಿಕೇಂದ್ರೀಕರಣದತ್ತ ನೋಡುವಂತೆಯೂ ಮಾಡಿದೆ.

ಸ್ವಾತಂತ್ರ್ಯದ ನಂತರದ ಸರಕಾರಗಳು ಪಂಚಾಯತ್ ರಾಜ್ ವ್ಯವಸ್ಥೆಯನ್ನು ಜನರ ಸಂಸ್ಥೆಗಳಾಗಿ ಮಾರ್ಪಡಿಸಲು ಹಲವು ಉಪಕ್ರಮಗಳನ್ನು ಕೈಗೊಂಡಿವೆ. ಸಂವಿಧಾನದ ೪೦ನೇ ಪರಿಚ್ಛೇದವು ಪಂಚಾಯತಿಗಳನ್ನು ಪುನರ್ ರೂಪಿಸುವಲ್ಲಿ ಸಹಕರಿಸಿತು. ಹಾಗೆಯೇ ೧೯೫೨ರ ಸಮುದಾಯ ಅಭಿವೃದ್ಧಿ ಯೋಜನೆಯು ಜನರ ಭಾಗವಹಿಸುವಿಕೆಗೆ ಹೆಚ್ಚಿನ ಒತ್ತನ್ನು ನೀಡಿತು. ಭಾರತದ ಗ್ರಾಮೀಣ ಸಮುದಾಯದ ಸಾಮಾಜಿಕ ಹಾಗೂ ಆರ್ಥಿಕ ಜೀವನದ ಗತಿಯನ್ನು ಉತ್ತೇಜಿಸುವಲ್ಲಿ ಇದು ಪ್ರಯತ್ನಿಸಿದೆ. ಆದರೆ ಗ್ರಾಮೀಣ ಭಾರತದ ಜನತೆಯ ಕಲ್ಯಾಣಕ್ಕೊಸ್ಕರ ಪ್ರಾರಂಭಿಸಿದ್ದ ಈ ಯೋಜನೆಯ ಪ್ರಕ್ರಿಯೆಯಲ್ಲಿ ಅವರು ಸಂಪೂರ್ಣವಾಗಿ ತೊಡಗಿಸಿಕೊಳ್ಳುವಲ್ಲಿ ವಿಫಲವಾಗಿದ್ದರಿಂದ ನಿರೀಕ್ಷಿತ ಫಲ ದೊರೆಯಲಿಲ್ಲ.[೨]

ಭಾರತದಲ್ಲಿ ಪ್ರಜಾಪ್ರಭುತ್ವ ಮಾದರಿಯ ಸಾಂಸ್ಥಿಕ ಪರಂಪರೆಯು ಹಳೆಯ ಮತ್ತು ಪ್ರಬಲವಾದ ಇತಿಹಾಸವನ್ನು ಹೊಂದಿದೆ. ಸ್ಥಳೀಯವಾಗಿ ಇಂತಹ ಸಂಸ್ಥೆಗಳು ಸಾಮಾಜಿಕ ಮತ್ತು ರಾಜಕೀಯ ಸಂಘಟನೆಗಳಾಗಿದ್ದವು. ಗ್ರಾಮೀಣ ಸಮುದಾಯಗಳ ದಿನನಿತ್ಯದ ಆಡಳಿತದಲ್ಲಿ ಹಳ್ಳಿಯ ಪಂಚಾಯತಿಗಳು ಚಲನಶೀಲ ಪಾತ್ರವನ್ನು ಹೊಂದಿದ್ದವು. ಪಂಚಾಯತಿ ರಾಜ್ ಒಂದು ವ್ಯವಸ್ಥೆಯಾಗಿದ್ದು, ಉತ್ತಮ ಆಡಳಿತದ ಪ್ರಕ್ರಿಯೆಯ ಭಾಗವಾಗಿದೆ. ಪ್ರಾಚೀನ ಭಾರತದ ಕಾಲದಿಂದ ಹಳ್ಳಿಗಳು ಇದರ ಭಾಗಗಳಾಗಿರುವುದನ್ನು ಕಾಣುತ್ತೇವೆ. ಗ್ರಾಮ ಸಭೆಯು ಪಂಚಾಯತ್ ರಾಜ್ ವ್ಯವಸ್ಥೆಯ ಪ್ರಮುಖ ಭಾಗವಾಗಿರುವುದರ ಮೂಲಕ ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಬಲಪಡಿಸುತ್ತಿದೆ.

ಸ್ವತಂತ್ರ ಭಾರತದಲ್ಲಿ ಪ್ರಜಾಪ್ರಭುತ್ವ ಸರ್ಕಾರ ಮಾದರಿ ಜಾರಿಗೆ ಬಂದ ನಿಟ್ಟಿನಲ್ಲಿಯೇ ಪ್ರಜಾಪ್ರಭುತ್ವದ ವಿಕೇಂದ್ರೀಕರಣ ತತ್ವದ ಆಧಾರದ ಮೇಲೆ ಅಧಿಕಾರವನ್ನು ವಿಭಜನೆ ಮಾಡಿ ಸಂವಿಧಾನವು ಕೇಂದ್ರ, ರಾಜ್ಯಸರ್ಕಾರ ಹಾಗೂ ಸ್ಥಳೀಯ ಸರ್ಕಾರಗಳಿಗೆ ಅಧಿಕಾರ ನೀಡಿತು. ಗಾಧೀಜಿಯವರು ಹಳ್ಳಿಗಳ ಅಭ್ಯುದಯಕ್ಕೆ 'ಗ್ರಾಮ ಸ್ವರಾಜ್ಯ' ವನ್ನು ಸ್ಥಾಪಿಸಲು ಅಗ್ರಹಪಡಿಸಿದರು. ಅವರ ಇಚ್ಛೆಯಂತೆ ಭಾರತ ಸಂವಿಧಾನದ ೪ನೇ ಭಾಗದಲ್ಲಿ ರಾಜ್ಯ ನೀತಿ ತತ್ವಗಳಲ್ಲಿ ೪೦ನೇ ವಿಧಿಯು ಗ್ರಾಮ ಪಂಚಾಯಿತಿಗಳನ್ನು ಸ್ಥಾಪಿಸಬೇಕೆಂದು ನಿರ್ದೇಶನ ನೀಡಿತು. ಅದರ ಪ್ರಕಾರ, 'ರಾಷ್ಟ್ರವು ಗ್ರಾಮ ಪಂಚಾಯಿತಿಗಳನ್ನು ಸ್ಥಾಪಿಸಲು ಕ್ರಮಗಳನ್ನು ತೆಗೆದುಕೊಳ್ಳಬೇಕು ಮತ್ತು ಸ್ವ-ಆಡಳಿತದ ಘಟಕಗಳಾಗಿ ಕಾರ್ಯನಿರ್ವಹಿಸಲು ಶಕ್ತಿ ಮತ್ತು ಅಧಿಕಾರವನ್ನು ಅಗತ್ಯವಾಗಿ ನೀಡಬೇಕು' ಎಂದು ಹೇಳಿದೆ.

ಈ ಹಿನ್ನೆಲೆಯಲ್ಲಿ, ಸ್ವಾತಂತ್ರ್ಯಾನಂತರ ಭಾರತದಲ್ಲಿ ಗ್ರಾಮಸ್ವರಾಜ್ಯ ಕಲ್ಪನೆಯ ಅನುಷ್ಠಾನ, ಜನರ ಪಾಲ್ಗೊಳ್ಳುವಿಕೆಗೆ ಪ್ರಾಶಸ್ತ್ಯ ನೀಡುವುದು, ಜನತೆಗೆ ಹೊಣೆಗಾರಿಕೆ ವಹಿಸಲು ಮತ್ತು ಪಂಚಾಯತಿಗಳ ಪುನರುಜ್ಜೀವನಗೊಳಿಸಲು ಪಂಚಾಯತಿ ವ್ಯವಸ್ಥೆಗೆ ಹೆಚ್ಚಿನ ಮಹತ್ವ ನೀಡಲಾಯಿತು. ಈ ಉದ್ದೇಶಗಳ ಸಾಧನೆಗಾಗಿ ಪಂಚಾಯತಿ ವ್ಯವಸ್ಥೆ ಬಲಪಡಿಸುವ

ನಿಟ್ಟಿನಲ್ಲಿ ೧೯೯೨ರ ವರೆಗೆ ಅನೇಕ ಪ್ರಯತ್ನಗಳು ನಡೆದವು. ಇದಕ್ಕಾಗಿ ಕೇಂದ್ರ ಸರ್ಕಾರದ ಮಟ್ಟದಲ್ಲಿ ಹಲವು ಸಮಿತಿಗಳು ಮತ್ತು ಕಾಯ್ದೆಗಳನ್ನು ರಚಿಸಲಾಯಿತು. ಸಮುದಾಯ ಅಭಿವೃದ್ಧಿ ಯೋಜನೆ (೧೯೫೨), ರಾಷ್ಟ್ರೀಯ ವಿಸ್ತರಣಾ ಯೋಜನೆಗಳು, ಬಲವಂತರಾಯ ಮೆಹ್ತಾ ಸಮಿತಿ (೧೯೫೭), ಅಶೋಕ್ ಮೆಹತಾ ಸಮಿತಿ(೧೯೭೭), ಜಿ.ವಿ.ಕೆ ರಾವ್ ಕಮಿಟಿ(೧೯೮೫), ಎಲ್.ಎಂ. ಸಿಂಘ್ವಿ ಸಮಿತಿ (೧೯೮೬) ಹೀಗೆ ಹಂತ ಹಂತವಾಗಿ ಹಲವಾರು ಸಮಿತಿಗಳು ಪಂಚಾಯತಿ ರಾಜ್ ವ್ಯವಸ್ಥೆಗೆ ಸಂವಿಧಾನಾತ್ಮಕ ಸ್ಥಾನಮಾನವನ್ನು ಒದಗಿಸಿದವು.

೧೯೯೩ರಲ್ಲಿ ಸಂವಿಧಾನಕ್ಕೆ ೭೩ನೇ ಮತ್ತು ೭೪ನೇ ತಿದ್ದುಪಡಿಯನ್ನು ತರುವ ಮೂಲಕ ಕೇಂದ್ರ ಸರಕಾರ ಹೊಸ ಪಂಚಾಯತ್ ರಾಜ್ ಕಾಯ್ದೆಯನ್ನು ಜಾರಿಗೆ ತಂದಿತು. ಈ ನಿಟ್ಟಿನಲ್ಲಿಯೇ ಕೆಲವೊಂದು ರಾಜ್ಯ ಸರ್ಕಾರಗಳು ಅದರಲ್ಲಿ ರಾಜಸ್ಥಾನ, ಆಂಧ್ರಪ್ರದೇಶ, ಪಶ್ಚಿಮ ಬಂಗಾಳ ಹಾಗೂ ಕರ್ನಾಟಕ ರಾಜ್ಯಗಳು ಪಂಚಾಯತಿ ರಾಜ್ ವ್ಯವಸ್ಥೆಯ ಅನುಷ್ಠಾನಕ್ಕೆ ಆದ್ಯತೆ ನೀಡಿದವು. ಪಂಚಾಯತಿ ರಾಜ್ ಕಾಯ್ದೆಯ ದಿಟ್ಟ ಪ್ರಯೋಗ ಕರ್ನಾಟಕದಲ್ಲಿ "ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩" ಮೇ ೧೦, ೧೯೯೩ ರಿಂದ ಜಾರಿಗೆ ಬಂದಿದೆ. ಇದರ ಪ್ರಕಾರ ಗ್ರಾಮೀಣ ಸ್ಥಳೀಯ ಸರ್ಕಾರಗಳೆಂದರೆ

೧. ಗ್ರಾಮ ಸಭೆಯನ್ನೊಗಳಗೊಂಡ ಗ್ರಾಮ ಪಂಚಾಯಿತಿ

೨. ತಾಲೂಕು ಪಂಚಾಯತಿ ಹಾಗೂ

೩. ಜಿಲ್ಲಾ ಪಂಚಾಯಿತಿ

ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆಯ ಪ್ರಮುಖ ಉದ್ದೇಶ ಆಡಳಿತ ವಿಕೇಂದ್ರೀಕರಣ, ಜನರ ಭಾಗವಹಿಸುವಿಕೆ, ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಪೂರಕವಾದ ಕಾರ್ಯಗಳನ್ನು ಕೈಗೊಳ್ಳುವುದಾಗಿದೆ. ಅಂತೆಯೇ ಮೂರು ಹಂತಗಳಲ್ಲಿ ಚುನಾವಣೆಗಳ ಮೂಲಕ ಈ ಸಂಸ್ಥೆಗಳಿಗೆ ಸದಸ್ಯರಗಳನ್ನು ಆಯ್ಕೆ ಮಾಡುವುದು, ಪ್ರತ್ಯೇಕ ಯೋಜನಾ ಸಮಿತಿಯನ್ನು ರಚಿಸುವುದು ಹಾಗೂ ಪಂಚಾಯತ್ ರಾಜ್ ಸಂಸ್ಥೆಗಳು ಹಣಕಾಸು ಸಂಪನ್ಮೂಲವನ್ನು ಪಡೆಯುವಲ್ಲಿ ಸ್ವಾಯುತ್ತತೆಯ ಸಂಸ್ಥೆಗಳನ್ನಾಗಿ ಮಾಡುವುದು, ಪಾರದರ್ಶಕತೆಯಿಂದ ಚುನಾವಣೆ ನಡೆಸುವುದು ಈ ತಿದ್ದುಪಡಿ ಕಾಯ್ದೆಯ ಇತರೆ ಉದ್ದೇಶಗಳು.

**೧.೨. ಅಧ್ಯಯನದ ಮಹತ್ವ ಮತ್ತು ವ್ಯಾಪ್ತಿ**

ಪಂಚಾಯತ್ ರಾಜ್ ಮತ್ತು ವಿಕೇಂದ್ರೀಕರಣ ವ್ಯವಸ್ಥೆಯ ಕುರಿತು ಹಲವಾರು ಸಂಶೋಧನಾ ಅಧ್ಯಯನಗಳು ನಡೆದಿವೆ. ಆದರೆ ಪಂಚಾಯತ್ ರಾಜ್ ವ್ಯವಸ್ಥೆಯ

ಮೂರು ಹಂತಗಳಲ್ಲಿ ಆಗುತ್ತಿರುವ ಅಭಿವೃದ್ಧಿ ಕಾರ್ಯಗಳು, ಜಿಲ್ಲಾ ಯೋಜನಾ ಸಮಿತಿಯ ಕಾರ್ಯವೈಖರಿ, ರಾಜ್ಯ ಚುನಾವಣೆ ಆಯೋಗವು ಮೂರು ಹಂತಗಳಲ್ಲಿ ಸ್ವತಂತ್ರ್ಯ ಮತ್ತು ಪಾರದರ್ಶಕತೆಯಿಂದ ಕಾರ್ಯನಿರ್ವಹಿಸುತ್ತಿರುವುದು ಹಾಗೂ ರಾಜ್ಯ ಹಣಕಾಸು ಆಯೋಗದ ಬಗ್ಗೆ ಸಮಗ್ರ ರೀತಿಯ ಸಂಶೋಧನಾ ಅಧ್ಯಯನಗಳು ನಡೆದಿರುವುದಿಲ್ಲ, ಹೀಗಾಗಿ ಈ ಉದ್ದೇಶಗಳನ್ನು ಆಧರಿಸಿ ಅಧ್ಯಯನ ಮಾಡುವ ಮೊದಲ ಪ್ರಯತ್ನ ಇದಾಗಿದೆ. ಈ ದೃಷ್ಟಿಯಿಂದ ಈ ಅಧ್ಯಯನವು ಒಂದು ಮಹತ್ವದ ಹೆಜ್ಜಯಾಗಿದೆ.

ಪಂಚಾಯತಿ ರಾಜ್ ವ್ಯವಸ್ಥೆ ಎಂಬುದು ವಿಕೇಂದ್ರೀಕರಣವನ್ನು ಸುಸ್ಥಿರಗೊಳಿಸುವ ಒಂದು ವಿಶಾಲವಾದ ಪರಿಕಲ್ಪನೆ. ಇಂದು ಭಾರತದ ಪ್ರತಿಯೊಂದು ರಾಜ್ಯವು ಪಂಚಾಯತಿ ರಾಜ್ ವ್ಯವಸ್ಥೆಯನ್ನು ಅಳವಡಿಸಿಕೊಂಡಿವೆ. ಈ ವ್ಯವಸ್ಥೆಯು ಸ್ಥಳೀಯ ಮಟ್ಟದ ಸಮಸ್ಯೆಗಳನ್ನು ಅರಿಯುವ ಹಾಗೂ ಪರಿಹರಿಸುವ ಕಾರ್ಯವನ್ನು ಮಾಡುತ್ತಾ ಬಂದಿದ್ದು, ಗ್ರಾಮ ಪಂಚಾಯತಿಗಳು ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ಅದಕ್ಕೆ ಪೂರಕವಾಗಿ ತಾಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳು ಕಾರ್ಯನಿರ್ವಹಿಸುತ್ತಿವೆ. ಈ ಮೂರು ಹಂತಗಳಲ್ಲಿ ಕಾರ್ಯನಿರ್ವಹಿಸುವ ಜಿಲ್ಲಾ ಯೋಜನಾ ಸಮಿತಿ, ಅಭಿವೃದ್ಧಿ ಯೋಜನೆಗಳು, ಚುನಾವಣೆಗಳು, ಹಣಕಾಸು ಆಯೋಗಗಳು ಮತ್ತು ಅದರ ಕಾರ್ಯನಿರ್ವಹಣೆಯ ಬಗ್ಗೆ ಅವಲೋಕಿಸಿ, ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**೧.೩. ಸಮಷ್ಟೀಕರಣ**

ಡಾ. ಅಬ್ದುಲ್ ಅಜೀಜ್‌ರವರು[೩] ಕೇರಳ ಮತ್ತು ಕರ್ನಾಟಕ ರಾಜ್ಯಗಳ ಸ್ಥಳೀಯ ಸರ್ಕಾರಗಳಲ್ಲಿ ಹಣಕಾಸಿನ ವಿಕೇಂದ್ರೀಕರಣದ ಬಗ್ಗೆ ತೌಲನಿಕ ಅಧ್ಯಯನ ನಡೆಸಿ ಈ ಕೆಳಕಂಡ ತೀರ್ಮಾನಕ್ಕೆ ಬಂದಿದ್ದಾರೆ. ಪಂಚಾಯತ್ ರಾಜ್ ಸಂಸ್ಥೆಗಳ ವಿಕೇಂದ್ರೀಕೃತ ಯೋಜನೆಯ ಪ್ರಾಥಮಿಕ ಉದ್ದೇಶವೆಂದರೆ ಸ್ಥಳೀಯ ಅಗತ್ಯಗಳನ್ನು ಗುರುತಿಸಿ, ಅವುಗಳ ಆದ್ಯತೆ ಪ್ರಕಾರ ಯೋಜನೆಗಳನ್ನು ರೂಪಿಸುವುದು ಮತ್ತು ಜಾರಿಗೆ ತರುವುದು. ಈ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವಹಿಸುವರೆಂದರೆ ಶ್ರೀಸಾಮಾನ್ಯರು, ಈ ಸಂಸ್ಥೆಗಳಿಗೆ ವಿಕೇಂದ್ರೀಕೃತ ಸರ್ಕಾರವನ್ನು ಶಕ್ತಿಯುತಗೊಳಿಸಲು ತಮ್ಮ ಪಾತ್ರವನ್ನು ನಿರ್ವಹಿಸುತ್ತಿದ್ದಾರೆ. ನಿರ್ಣಾಯಕ ಕ್ರಿಯೆಗಳಲ್ಲಿ ಜನರ ಭಾಗವಹಿಸುವಿಕೆಯನ್ನು ಪ್ರೇರೇಪಿಸುವ, ಸ್ಥಳೀಯ ಸರ್ಕಾರಗಳಿಗೆ ಸಂಬಂಧಿಸಿದ ಹಲವಾರು ವಿಷಯ, ಯೋಜನೆಗಳ ಮಾಹಿತಿಯನ್ನು ಒದಗಿಸುವಲ್ಲಿ ವಿಕೇಂದ್ರೀಕೃತ ಸರ್ಕಾರ ಚೈತನ್ಯ ನೀಡುವ ಪಾತ್ರವನ್ನು ಈ ಸಂಸ್ಥೆಗಳು ನಿರ್ವಹಿಸುತ್ತಿವೆ. ಈ ನಿಟ್ಟಿನಲ್ಲಿ ಕೇರಳ ಸರ್ಕಾರ ಒಂದು ಹೆಜ್ಜೆ ಮುಂದಿದೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು.

ವಿಲ್‌ಫ್ರೆಡ್ ಡಿಸೋಜಾರವರ "ಪ್ರಜಾಪ್ರಭುತ್ವ ವಿಕೇಂದ್ರೀಕರಣ" ಲೇಖನದಲ್ಲಿ ತಳಹಂತದ ಸರ್ಕಾರವಾಗಿರುವ ಗ್ರಾಮ ಪಂಚಾಯಿತಿಗಳು ತಮಗೆ ವಹಿಸಲಾಗಿರುವ ಜವಾಬ್ದಾರಿಗಳನ್ನು

ನಿರ್ವಹಿಸುವ ಮೂಲಕ ಗ್ರಾಮೀಣ ಜನರಿಗೆ ಉತ್ತಮ ಆಡಳಿತ ನೀಡುತ್ತದೆ. ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ಸಮರ್ಥವಾಗಿ ನಿಭಾಯಿಸುವ ಮೂಲಕ ಸಾರ್ವಜನಿಕರಿಗೆ ಪಾರದರ್ಶಕವಾದ ಆಡಳಿತವನ್ನು ಒದಗಿಸುವುದು ಗ್ರಾಮ ಪಂಚಾಯತಿಗಳ ಆದ್ಯ ಕರ್ತವ್ಯವಾಗಿದೆ.

ಡೇವಿಡ್ ಅಸ್ಲಿಮ್ವೆರವರು ತಮ್ಮ ಲೇಖನವಾದ "ದಿ ರೇಲೇಶನ್ ಬಿಟ್‌ವಿನ್ ಪಾಲಿಟಿಕಲ್ ಎಕಾನಾಮಿಕ್ ಮತ್ತು ಡೆವೆಲಪ್‌ಮೆಂಟ್" ದಲ್ಲಿ ಅಭಿವೃದ್ಧಿ ಕುರಿತಾಗಿ ಸ್ಥಳೀಯ ಸಂಸ್ಥೆಗಳ ಪಾತ್ರ, ತಳಹಂತದಲ್ಲಿರುವ ಅಭಿವೃದ್ಧಿ ಮತ್ತು ರಾಜಕೀಯ ಅಂಶಗಳ ಆಧಾರವಾಗಿ ನೈಸರ್ಗಿಕ ಸಂಪನ್ಮೂಲಗಳ ಸುಸ್ಥಿರ ನಿರ್ವಹಣೆ ಉತ್ತಮವಾಗುವ ಹೆಚ್ಚಿನ ಸಾಧ್ಯತೆ ಇದೆ. ಜನ ಪ್ರತಿನಿಧಿಗಳನ್ನೊಳಗೊಂಡ ಸ್ಥಳೀಯ ಸಂಸ್ಥೆ, ಸಮುದಾಯ ಗುಂಪುಗಳು, ಹಾಗೂ ಸಮಿತಿಗಳನ್ನು ರಚಿಸುವುದು ಅತ್ಯಗತ್ಯವಾಗಿದೆ.

ಎಂ.ಚಂದ್ರಪೂಜಾರಿಯವರು[೪] ಹಣಕಾಸಿನ ವಿಕೇಂದ್ರೀಕರಣ ಕುರಿತಂತೆ ವಿವರಿಸುತ್ತಾ, ಪಂಚಾಯಿತಿಗಳ ಹಣಕಾಸಿನ ಸಮಸ್ಯೆಗಳನ್ನು ಪರಿಹರಿಸಲು ಪ್ರತಿ ರಾಜ್ಯ ಸರ್ಕಾರ 'ರಾಜ್ಯ ಹಣಕಾಸು ಆಯೋಗ'ಗಳನ್ನು ನೇಮಿಸಬೇಕೆಂದು ಹೇಳಿದೆ. ಸಂವಿಧಾನ ತಿದ್ದುಪಡಿಯ ಈ ಆಶಯವನ್ನು ಈಡೇರಿಸುವ ಭರವಸೆಯನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ-೧೯೯೩ ನೀಡಿದೆ. ಪ್ರತಿ ಐದು ವರ್ಷಗಳಿಗೊಮ್ಮೆ ಹಣಕಾಸು ಆಯೋಗವನ್ನು ಸಂಘಟಿಸಲಾಗುವುದು. ಇದರ ಪ್ರಮುಖ ಉದ್ದೇಶ ಮೂರು ಹಂತಗಳ ಪಂಚಾಯತಿಗಳ ಹಣಕಾಸಿನ ಸ್ಥಿತಿಗಳನ್ನು ಪರಾಮರ್ಶೆ ಮಾಡುವುದು. ಈ ಬಗ್ಗೆ ಸ್ಥಾಯಿ ಸಮಿತಿಗಳು ಸಕ್ರಿಯವಾಗಿ ಕೆಲಸ ಮಾಡುತ್ತಿವೆ. ಕರ್ನಾಟಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸಬೇಕಾದರೆ, ತಳಸ್ಥರದ ಸಂಸ್ಥೆಗಳು ಎಲ್ಲಾ ವಿಧಗಳಿಂದಲೂ ಸಶಕ್ತಗೊಳ್ಳಬೇಕು. ವಿಕೇಂದ್ರೀಕೃತ ಪ್ರಜಾಪ್ರಭುತ್ವ ಜಾರಿಗೆ ಬರಬೇಕಾದರೆ ಪಂಚಾಯತಿಗಳು ತಮ್ಮ ಬೇಕು-ಬೇಡಗಳನ್ನು, ಆದ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಯೋಜನೆಗಳನ್ನು ಸಿದ್ಧಪಡಿಸಬೇಕು ಮತ್ತು ಅವುಗಳನ್ನು ಕಾರ್ಯರೂಪಕ್ಕೆ ತರಬೇಕು.

ಈ ನಿಟ್ಟಿನಲ್ಲಿಯೇ ತಳಮಟ್ಟದಿಂದ ಯೋಜನೆ ಸಿದ್ದಪಡಿಸಲು ಅನುಕೂಲವಾಗಲೆಂದು ಸಂವಿಧಾನದ ೭೩ನೇ ತಿದ್ದುಪಡಿಯಲ್ಲಿ ಪಂಚಾಯತಿಗೆ ಸಂಬಂಧಿಸಿದ ೨೯ ಪ್ರಕಾರ್ಯಗಳನ್ನು ಪಂಚಾಯತಿಗಳಿಗೆ ವರ್ಗಾಯಿಸಬೇಕೆಂದು ಸೂಚಿಸಿಲಾಗಿದೆ. ೨೯ನೇ ಪ್ರಕಾರ್ಯಗಳನ್ನು ಪಂಚಾಯತಿಗೆ ವರ್ಗಾಯಿಸಿ ಸಂವಿಧಾನದ ಆಶಯವನ್ನು ಗೌರವಿಸಿದ ಕೆಲವೇ ಕೆಲವು ರಾಜ್ಯಗಳಲ್ಲಿ ಕರ್ನಾಟಕವೂ ಸೇರಿದೆ. ಇವು ರಾಜ್ಯ ಮಟ್ಟದಿಂದ ಜಿಲ್ಲಾ ಮಟ್ಟಕ್ಕೆ ತಲುಪಿದೆ. ಅಲ್ಲಿಂದ ಮುಂದಕ್ಕೆ ಹೋಗಿಲ್ಲ. ಪ್ರಕಾರ್ಯಗಳನ್ನು ಜಾರಿಗೆ ತರಬೇಕಾಗಿರುವ ಆಡಳತಾಂಗ ಹಾಗೂ ಹಣಕಾಸುಗಳ ತೀರ್ಮಾನ ಇನ್ನೂ ರಾಜ್ಯ ಮಟ್ಟದಲ್ಲಿಯೇ ನಡೆಯುತ್ತಿದೆ.

ಪಂಚಾಯತಿ ಮಟ್ಟದಲ್ಲಿ ಸುಮಾರು ೪೫೦ಕ್ಕಿಂತಲೂ ಹೆಚ್ಚಿನ ಅಭಿವೃದ್ಧಿ ಕಾರ್ಯಕ್ರಮಗಳು ಕಾರ್ಯರೂಪಕ್ಕೆ ಬರುತ್ತವೆ. ಅವುಗಳಲ್ಲಿ ಒಂದೆರಡು ಬಿಟ್ಟರೆ ಉಳಿದ ಎಲ್ಲಾ ಕಾರ್ಯಕ್ರಮಗಳು ಕೇಂದ್ರ ಮತ್ತು ರಾಜ್ಯ ಮಟ್ಟದಲ್ಲಿಯೇ ನಿರ್ಧಾರವಾಗುತ್ತದೆ. ಈ ಕಾರ್ಯಕ್ರಮಗಳ ನ್ಯೂನತೆಯನ್ನು ರಾಜ್ಯ ಸರ್ಕಾರವು ನೇಮಿಸಿದ "ವರ್ಕಿಂಗ್ ಗ್ರೂಪ್ ಆನ್ ಡಿಸೆಂಟ್ರಲೈಸೇಶನ್" ಕೂಡ ಪಟ್ಟಿಮಾಡಿದೆ.

ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫ರ ಪ್ರಕಾರ ವಿಕೇಂದ್ರಿಕೃತ ಸರ್ಕಾರಗಳು ಅನೇಕ ನಿಯೋಜಿತ ಕಾರ್ಯ ಚಟುವಟಿಕೆಗಳನ್ನು ದಕ್ಷತೆಯಿಂದ ನಿರ್ವಹಿಸಬೇಕಾಗಿರುವುದರಿಂದ ಅವುಗಳಿಗೆ ನಿಯೋಜಿಸುವ ಹಣಕಾಸು ಸಂಪನ್ಮೂಲವು ಕೂಡ ಸಾಕಷ್ಟಿರಬೇಕಾಗುತ್ತದೆ ಎಂದು ಹೇಳುತ್ತದೆ. ಪಂಚಾಯತಿಗಳು ಮತ್ತು ನಗರ ಸ್ಥಳೀಯ ಸರ್ಕಾರಗಳಿಗೆ ರಾಜ್ಯ ಸಂಪನ್ಮೂಲದಿಂದ ಎಷ್ಟು ಪ್ರಮಾಣ ನಿಯೋಜಿಸಲ್ಪಡಬೇಕು ಎಂಬುದನ್ನು ನಿಗದಿಪಡಿಸುವ ಅಧಿಕಾರವನ್ನು ಸಂವಿಧಾನದ ೭೩ನೇ ತಿದ್ದುಪಡಿ ಕಾಯ್ದೆಯ ೨೪೩-೧ ಪರಿಚ್ಛೇದವು ರಾಜ್ಯ ಹಣಕಾಸು ಸಮಿತಿಗಳಿಗೆ (ಎಸ್.ಎಫ್.ಸಿ) ನೀಡಿದೆ.

ನಿರ್ದಿಷ್ಟ ಉದ್ದೇಶಕ್ಕಾಗಿ ಅನುದಾನದ ವರ್ಗಾವಣೆಯು, ಹಿಂದುಳಿದ ಪ್ರದೇಶಗಳಲ್ಲಿ ಲಭ್ಯವಿರುವ ಅಭಿವೃದ್ಧಿ ಸಾಮರ್ಥ್ಯವನ್ನು ಬಳಸಿಕೊಳ್ಳಲು ಮತ್ತು ಅಭಿವೃದ್ಧಿಗತಿಯನ್ನು ಉನ್ನತಮಟ್ಟಕ್ಕೆರಿಸಲು, ಮುಂದುವರಿದ ಪ್ರದೇಶಗಳಲ್ಲಿ ಯಾವ ಪ್ರಮಾಣದ ಮೂಲ ಸೌಲಭ್ಯಗಳವೆಯೋ ಅಷ್ಟು ಪ್ರಮಾಣದ ಮೂಲ ಸೌಲಭ್ಯವನ್ನು ಒದಗಿಸಲು ಅಗತ್ಯವಾದ ಸಂಪನ್ಮೂಲವನ್ನು ಸ್ಥಳೀಯವಾಗಿ ಕ್ರೋಡೀಕರಿಸಲು ಅಗತ್ಯವಾದ ವಿತ್ತೀಯ ಸಾಮರ್ಥ್ಯದ ಕೊರತೆಯನ್ನು ತುಂಬಿಕೊಡುತ್ತದೆ. ವಿಶೇಷ ಉದ್ದೇಶದ ವರ್ಗಾವಣೆಯು, ವರ್ಗಿಯ ಸಮಾನತೆಗಾಗಿ ಅಥವಾ "ಸಂಪತ್ತು ತಟಸ್ಥ" ಇದು ಪಾವತಿ ಮಾಡುವ ಸಾಮರ್ಥ್ಯಕ್ಕೆ ಸಂಬಂಧ ಹೊಂದಿಲ್ಲದ ವಿಷಯಗಳಾದ ಶೈಕ್ಷಣಿಕ, ಆರೋಗ್ಯ, ನೈರ್ಮಲ್ಯ, ಗ್ರಾಮೀಣ ರಸ್ತೆಗಳು ಮುಂತಾದವುಗಳನ್ನು ಒದಗಿಸುವ ಗುರಿಯನ್ನು ಹೊಂದಿದೆ ಎಂಬುದನ್ನು ಎಂ.ಗೋವಿಂದರವರು ಈ ವರದಿಯಲ್ಲಿ ವ್ಯಕ್ತಪಡಿಸಿದ್ದಾರೆ.[೫]

ಕರ್ನಾಟಕದಲ್ಲಿ ಹಣಕಾಸು ವಿಕೇಂದ್ರೀಕರಣ ಕುರಿತಂತೆ ಅಮರನಾಥ ಮತ್ತು ವಾಣಿ (೨೦೦೪)ಯವರು ಕೈಗೊಂಡ ಅಧ್ಯಯನದ ಪ್ರಕಾರ ಗ್ರಾಮ ಪಂಚಾಯತಿಗಳಿಗೆ ೩೧ ಕಾರ್ಯ ಚಟುವಟಿಕೆಗಳನ್ನು ತಾಲೂಕು ಪಂಚಾಯತಿಗೆ ೨೮ ಕಾರ್ಯಗಳನ್ನು ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ೨೯ ಕಾರ್ಯ ಚಟುವಟಿಕೆ ಪಟ್ಟಿ ಮಾಡಿದ್ದಾರೆ. ಈ ಕಾರ್ಯ ಚಟುವಟಿಕೆಗಳನ್ನು ನಿರ್ದಿಷ್ಟವಾಗಿ ನಿರ್ಧರಿಸುವ ಪ್ರಕ್ರಿಯೆಯ ಭಾಗವಾಗಿ, ಯೋಜನೆಗಳನ್ನು ಒಳಗೊಳ್ಳುವ ಅನೇಕ ಸಂಗತಿಗಳನ್ನು ವರ್ಗಾಯಿಸುವ ಮೂಲಕ ಜಿಲ್ಲಾ ವಲಯವನ್ನು ರೂಪಿಸಲಾಗುತ್ತದೆ. ಅವುಗಳ ಅನುಷ್ಠಾನಕ್ಕೆ ೩ ಹಂತದ ಪಂಚಾಯತಿಗಳಿಗೆ

ನಿಯೋಜಿಸಬೇಕಾಗುತ್ತದೆ. ಆದರೆ ಹಣಕಾಸು ಸ್ಥಿತಿಗತಿಯು ಜಿಕ್ಕಟ್ಟಿನಿಂದಾಗಿ ಸಂಪನ್ಮೂಲದ ವರ್ಗಾವಣೆಯು ಪೂರ್ಣವಾಗಿ ನಡೆಯಲಿಲ್ಲ. ಅಂದರೆ ಲಿಂಕ್ ಡಾಕ್ಯೂಮೆಂಟ್‌ನಲ್ಲಿನ (ರಾಜ್ಯ ಸರ್ಕಾರವು ಪ್ರತಿ ವರ್ಷ ತನ್ನ ಬಜೆಟ್ ಅಂದಾಜನ್ನು ಆಧರಿಸಿ ಸಿದ್ಧಪಡಿಸುವ ಜಿಲ್ಲಾ, ತಾಲೂಕು ಮತ್ತು ಗ್ರಾಮ ಪಂಚಾಯಿತಿ ಕಾರ್ಯಕ್ರಮಗಳನ್ನು ಒಳಗೊಂಡಿರುತ್ತದೆ) ಮಾಹಿತಿ ಪ್ರಕಾರ, ಪಂಚಾಯಿತಿಗಳು ನಿರ್ವಹಿಸುವ ವೆಚ್ಚವು ರಾಜ್ಯ ಸರ್ಕಾರದ ಒಟ್ಟು ವೆಚ್ಚದ ಶೇ. ೨೧.೮ ರಷ್ಟಿತ್ತು.

ಪಂಚಾಯಿತಿಗಳ ವೆಚ್ಚದಲ್ಲಿ ಸಿಂಹಪಾಲು ಯೋಜನೇತರ ಬಾಬ್ತುಗಳಿಗೆ ಹೋಗುತ್ತದೆ. ಹೀಗೆ ಗ್ರಾಮೀಣ ಪ್ರದೇಶದ ಜನರ ಆಕ್ಷೇಪಗಳಿಗನುಗುಣವಾಗಿ ಸಾರ್ವಜನಿಕರ ಸೇವೆಯನ್ನು ಒದಗಿಸುವಂತೆ ಸ್ಥಳೀಯ ಸರ್ಕಾರಗಳನ್ನು ಕರ್ನಾಟಕ ಹಣಕಾಸು ವಿಕೇಂದ್ರೀಕರಣವು ಸಬಲಗೊಳಿಸಿದೆಯೇ? ಪಂಚಾಯಿತಿ ಸಂಸ್ಥೆಗಳು ಅನುಷ್ಠಾನ ಗೊಳಿಸುತ್ತಿರುವ ೩೦ ಪ್ರಧಾನ ಯೋಜನೆಗಳ ಹಣಕಾಸು ಸಂಪನ್ಮೂಲವನ್ನು ಬಿಡಿಯಾಗಿ ವಿಶ್ಲೇಷಿಸಿ ನೋಡಿದಾಗ ಅವುಗಳಿಗೆ ಆದ್ಯತೆಗಳಿಗನುಗುಣವಾಗಿ ಹಣಕಾಸು ಸಂಪನ್ಮೂಲವನ್ನು ವಿತರಿಸಲು ಸ್ವಾಯತ್ತತೆ ಅಥವಾ ಅವಕಾಶಗಳಾಗಲಿ ಇಲ್ಲದಿರುವುದು ತಳಿಯುತ್ತದೆ ಎಂದಿದ್ದಾರೆ.

ಅಬ್ದುಲ್ ಅಜೀಜ್‌ರವರ "ಡಿಸೆಂಟ್ರಲೈಜ್ಡ್ ಗವರ್ನನ್ಸ್ ಇನ್ ಏಷಿಯಾ ಕಂಟ್ರೀಸ್" ಎಂಬ ಲೇಖನದಲ್ಲಿ ಪಂಚಾಯಿತಿಗಳ ಹಣಕಾಸಿನ ಸಂಪನ್ಮೂಲಗಳ ಬಗ್ಗೆ ಕೆಲವು ಸಮಸ್ಯೆಗಳನ್ನು ವ್ಯಕ್ತಿಪಡಿಸಿದ್ದಾರೆ. ಪ್ರಸ್ತುತ ಹಣಕಾಸು ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಗಳಿಗೆ ದೊರೆತಿರುವ ಅಧಿಕಾರಗಳಾವುವು? ಹಣಕಾಸು ವಿಷಯದಲ್ಲಿ ಪಂಚಾಯತಿ ರಾಜ್ ಸಂಸ್ಥೆಗಳು ಎಷ್ಟರಮಟ್ಟಿಗೆ ಸ್ವಾಯತ್ತತೆಯನ್ನು ಹೊಂದಿವೆ? ಅವುಗಳ ಆದಾಯದ ಮೂಲಗಳು ಹಾಗೂ ವೆಚ್ಚ ಬಾಬ್ತುಗಳಾವುವು? ರಾಜ್ಯ ಹಣಕಾಸು ಆಯೋಗದಿಂದ ಪಂಚಾಯತಿ ಸಂಸ್ಥೆಗಳಿಗೆ ಯಾವ ಬಗೆಯ ಅನುಕೂಲತೆಗಳು ದೊರೆಯುತ್ತವೆ? ಹಣಕಾಸು ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಈ ಸಂಸ್ಥೆಗಳು ಎದುರಿಸುತ್ತಿರುವ ಸಮಸ್ಯೆಗಳಾವುವು? ಹಣಕಾಸಿನ ಪರಿಸ್ಥಿತಿಯನ್ನು ಉತ್ತಮಪಡಿಸಲು ಯಾವ ಕ್ರಮಗಳನ್ನು ಕೈಗೊಳ್ಳಬೇಕು? ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಚರ್ಚಿಸಲಾಗಿದೆ. ಗ್ರಾಮ ಅಭಿವೃದ್ಧಿ ಮತ್ತು ಆಡಳಿತ ಸಂಬಂಧ ಜವಾಬ್ದಾರಿಯನ್ನು ಸಮರ್ಪಕವಾಗಿ ಮತ್ತು ದಕ್ಷವಾಗಿ ಕಾರ್ಯನಿರ್ವಹಿಸಲು ಸಾಕಷ್ಟು ಹಣಕಾಸು ಸಂಪನ್ಮೂಲದ ಅಗತ್ಯವಿದೆ. ಇದಕ್ಕೆ ಸಂಬಂಧಿಸಿದಂತೆ ಎರಡು ಅಂಶಗಳು ಮುಖ್ಯವಾಗಿವೆ. ೧) ಹಣಕಾಸು ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಗಳು ಸ್ವಾವಲಂಬಿಯಾಗಿರಬೇಕು. ೨) ಹಣಕಾಸಿನ ವಿಷಯದಲ್ಲಿ ಪಂಚಾಯಿತಿಗಳು ಸ್ವಾಯತ್ತತೆಯಾಗಿರಬೇಕೆಂದು ವಾದಿಸಿದ್ದಾರೆ.

ಎಂ.ಸಿ. ಶೈಲಾಜರವರ "ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಹಣಕಾಸಿನ ಹರಿವು"ಎಂಬ ಲೇಖನದಲ್ಲಿ ಸಂವಿಧಾನದ ೭೩ನೇ ತಿದ್ದುಪಡಿಯಿಂದಾಗಿ ನಮ್ಮ ರಾಜಕೀಯ ಆಡಳಿತ

ವ್ಯವಸ್ಥೆಯ ಸಂರಚನೆಯಲ್ಲಿ ಕೆಲವು ಮೂಲಭೂತ ಬದಲಾವಣೆಗಳು ಆಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಸ್ಥಾನಮಾನ ಲಭ್ಯವಾಗಿದೆ. ನಿಯಮಿತವಾದ ಕಾಲಘಟ್ಟದಲ್ಲಿ ಚುನಾವಣೆ ನಡೆಸಲು ರಾಜ್ಯ ಚುನಾವಣೆ ಆಯೋಗದ ರಚನೆ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ಪರಿಶೀಲಿಸಲು ಪ್ರತಿ ೫ವರ್ಷಗಳಿಗೊಮ್ಮೆ ರಾಜ್ಯ ಹಣಕಾಸು ಆಯೋಗವನ್ನು ರಚಿಸುವುದು ಕಡ್ಡಾಯಗೊಳಿಸಿದ್ದರಿಂದ, ದೇಶದ್ಯಾಂತ ೨೯ ಅಭಿವೃದ್ಧಿ ಕಾರ್ಯಗಳ ವ್ಯಾಪ್ತಿ ನಿಗದಿಪಡಿಸುವುದರೊಡನೆ ಅವುಗಳು ತಮ್ಮದೇ ಆದ ಅಯವ್ಯಯವನ್ನು ತಯಾರಿಸಲು ಮತ್ತು ತೆರಿಗೆ ವಿಧಿಸುವ ಅಧಿಕಾರಗಳನ್ನು ಹೊಂದಿವೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಮರಿಯಾ ಗೋನ್ಸಾರಾಜ್ (೨೦೦೧) ರವರ ಪ್ರಕಾರ, ಸರ್ಕಾರವು ತೀರ್ಮಾನ ತೆಗೆದುಕೊಳ್ಳುವ ಸಂದರ್ಭದಲ್ಲಿ ಅದರ ಅಗತ್ಯತೆಗಳು, ಸಮಸ್ಯೆಗಳು, ಮೌಲ್ಯಗಳು, ನಿರೀಕ್ಷೆಗಳು, ನಾಗರಿಕತೆಗೆ ಸಂಬಂಧಿಸಿದ ವಿಷಯಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಇದರ ಮೂಲಕ ನಾಗರಿಕರ ಭಾಗವಹಿಸುವಿಕೆಯನ್ನು ಗುರುತಿಸಬಹುದು. ಇದು ಗುರಿಗಳನ್ನು ಸಾಧಿಸುವ ನಿಟ್ಟಿನಲ್ಲಿ ಮತ್ತು ಜನತೆಯ ಕಲ್ಯಾಣ ಕಾರ್ಯಕ್ರಮವಾದ ಬಡತನ ನಿರ್ಮೂಲನೆಯಂತಹ ಅಂಶಗಳಿಂದ ಸರ್ಕಾರ ಮತ್ತು ಜನತೆಯ ನಡುವೆ ಇರುವ ದ್ವಿಮುಖ ಮಾರ್ಗದ ಸಂಪರ್ಕ ಸಾಧನವಾಗಿದೆ.

ಬ್ಲೆರ್ (೨೦೦೦) ರವರ ಪ್ರಕಾರ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯಯಲ್ಲಿ ಭಾಗವಹಿಸುವಿಕೆ ಪ್ರಜೆಗಳಿಗೆ ಪಾಲುದಾರಿಕೆಯನ್ನು ನೀಡುತ್ತದೆ. ಈ ಮೂಲಕ ಯೋಜನೆಗಳನ್ನು ರೂಪಿಸುವಲ್ಲಿ ಮತ್ತು ಹಂಚಿಕೆಯಾಗುವಲ್ಲಿ ಪ್ರಜಾಪ್ರಭುತ್ವದ ಒಂದು ಬಹುಮುಖ್ಯ ಅಂಶವಾಗಿದೆ.

ಅಬ್ದುಲ್ ಅಜೀಜ್‌ರವರ 'ದ ಸೆಂಟ್ರಲೈಸ್ಡ್ ಪ್ಲಾನಿಂಗ್'ನಲ್ಲಿ ವಿಕೇಂದ್ರೀಕರಣ ಯೋಜನೆಗಳು ಏನೇನಿವೆ ಮತ್ತು ಕರ್ನಾಟಕದಲ್ಲಿ ಹೇಗೆ ಅವು ಅನುಷ್ಠಾನಗೊಂಡಿವೆ ಹಾಗೂ ವಿಕೇಂದ್ರೀಕರಣ ನೀತಿಯನ್ನು ಅನುಷ್ಠಾನಗೊಳಿಸುವಲ್ಲಿ ಸರ್ಕಾರಗಳು ಯಾವ ರೀತಿ ಕಾರ್ಯತತ್ಪರವಾಗಿದೆ ಮತ್ತು ಅದರ ಪರಿಣಾಮವೇನು ಎಂಬುದರ ಬಗ್ಗೆ ವಿಶ್ಲೇಷಿಸಲಾಗಿದೆ.

ಸುರಜಿತ್ ಸಿಂಗ್ ಶರ್ಮ್‌ರವರು ಉತ್ತರ ಪ್ರದೇಶದ ಪಶ್ಚಿಮ ಭಾಗಗಳ ಗ್ರಾಮಗಳು, ಗ್ರಾಮೀಣ ಮುಖಂಡತ್ವವನ್ನು ಆಡಳಿತ ಕೇಂದ್ರವಾಗಿರಿಸಿ, ನಗರಗಳು ಮತ್ತು ಅವುಗಳ ಮೇಲ್ಪಂಕ್ತಿಯಲ್ಲಿ ನಿಲ್ಲುವ ವ್ಯವಸ್ಥೆ ಮತ್ತು ಅವುಗಳ ರಾಜಕೀಯ ಸಾಮರ್ಥ್ಯವನ್ನು ಕುರಿತು ಅವಲೋಕಿಸಿದ್ದಾರೆ. ಪಂಚಾಯಿತಿ ಚುನಾವಣೆಗಳಲ್ಲಿ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಪಾತ್ರವಹಿಸುವ ಜನರ ವೈಯಕ್ತಿಕ ಅಭಿಲಾಸೆಗಳು, ಜಾತಿ ವ್ಯವಸ್ಥೆ ತೊಡಕನ್ನುಂಟುಮಾಡುತ್ತಾ, ಸಮಾಜ ಮತ್ತು ರಾಷ್ಟ್ರ ಅಭಿವೃದ್ಧಿಯ ಬಗ್ಗೆ ಚಿಂತಿಸದೆ ಕೇವಲ ತಮ್ಮ ಹಿತಾಸಕ್ತಿಗಳನ್ನು ಕಾಪಾಡುವಲ್ಲಿಗೆ ಸೀಮಿತಗೊಂಡು ಬಿಡುತ್ತವೆ.

ಜಯಪ್ರಕಾಶ್ ನಾರಾಯಣರವರು ತಮ್ಮ "ಜನರಿಗಾಗಿ ಸ್ವರಾಜ್ಯ" ಎಂಬ ಪುಸ್ತಕದಲ್ಲಿ ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದಾರೆ. ಚುನಾವಣೆಗಳು ನಡೆಸುವುದು ಜನರಿಗೆ ಮತ ಚಲಾಯಿಸುವ ಅಧಿಕಾರವನ್ನು ಮಾತ್ರ ನೀಡಿಲ್ಲ. ಬದಲಾಗಿ ಸ್ಥಳೀಯ ಜನರ ಕರ್ತವ್ಯಗಳು ಅರಿವು, ಹಕ್ಕು ಹಾಗೂ ಆಡಳಿತದಲ್ಲಿ ಪಾಲ್ಗೋಳ್ಳುವಂತೆ ಮಾಡುವುದಾಗಿದೆ ಎಂದು ತಿಳಿಸಿದ್ದಾರೆ.

ಟಿ.ಆರ್. ಚಂದ್ರೇಶೇಖರವರು "ಗ್ರಾಮ ಪಂಚಾಯಿತಿ–ಪ್ರಸ್ತುತ ಸಮಸ್ಯೆಗಳು" ಎಂಬ ಲೇಖನದಲ್ಲಿ ಈ ರೀತಿಯ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮೂರು ಹಂತದ ಪಂಚಾಯತಿ ವ್ಯವಸ್ಥೆ ಮತ್ತು ಆಡಳಿತದ ವಿಕೇಂದ್ರೀಕರಣದಲ್ಲಿ, ರಾಜ್ಯಮಟ್ಟದಿಂದ ಪಂಚಾಯತಿ ರಾಜ್ ಸಂಸ್ಥೆಗಳಿಗೆ ವಹಿಸಿಕೊಡಬೇಕಾದ ಕಾರ್ಯಚಟುವಟಿಕೆಗಳು, ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ಗುರುತಿಸುವುದು, ಪ್ರತಿಯೊಂದು ಹಂತವು ನಿರ್ವಹಿಸಬೇಕಾದ ಪಾತ್ರದ ಎಲ್ಲೆಯನ್ನು ನಿರ್ವಹಿಸುವುದು ಹಾಗೂ ಪ್ರತಿಯೊಂದರ ವ್ಯಾಪ್ತಿಯನ್ನು ಸ್ಪಷ್ಟವಾಗಿ ಗುರುತಿಸುವುದನ್ನು ಒಳಗೊಂಡಿರುತ್ತದೆ. ಪಂಚಾಯತಿಗಳು ತಾವೇ ಸ್ವತಃ ಆಯ್ಕೆಮಾಡಿದ ಕಾರ್ಯ ಚಟುವಟಿಕೆಗಳನ್ನು ಕೈಗೊಳ್ಳುವುದಕ್ಕೆ ಅವುಗಳಿಗೆ ಸಾಕಷ್ಟು ಅವಕಾಶವಿದೆ.

ಪ್ರಸ್ತುತ ತಳಮಟ್ಟದಲ್ಲಿ ಕೆಲಸ ಮಾಡುತ್ತಿರುವ ಆಡಳಿತ ಸಂಸ್ಥೆಗಳ ನಿರ್ವಹಣೆಯು ಗ್ರಾಮ ಪಂಚಾಯತಿಗಳ ವಶದಲ್ಲಿರಬೇಕಾದುದು ಸಹಜ. ಈಗ ಇಂತಹ ಪರಿಸ್ಥಿತಿ ಇಲ್ಲ. ಕುತೂಹಲದ ಸಂಗತಿಯೆಂದರೆ ಅಂಗನವಾಡಿಗಳು ಹಾಗೂ ಪ್ರಾಥಮಿಕ ಶಾಲೆಗಳ ನಿರ್ವಹಣೆ, ಉಸ್ತುವಾರಿ ಜವಾಬ್ದಾರಿಯನ್ನು ಗ್ರಾಮ ಪಂಚಾಯತಿಗಳ ವಶಕ್ಕೆ ನೀಡುವ ಕ್ರಮಗಳ ಬಗ್ಗೆ ಸರ್ಕಾರವು ಯೋಚಿಸತೊಡಗಿದ್ದಾಗ, ಎಲ್ಲ ತಳಮಟ್ಟದ ಸಂಸ್ಥೆಗಳು ಇದನ್ನು ವಿರೋಧಿಸತೊಡಗಿದವು. ಈ ಕುರಿತು ಚಳುವಳಿಗಳಾದವು. ಸಂವಿಧಾನಾತ್ಮಕ ಮತ್ತು ಜನಪ್ರತಿನಿಧಿ ಸಂಸ್ಥೆಗಳಾದ ಗ್ರಾಮಪಂಚಾಯಿತಿಗಳ ಸ್ಥಿತಿ ಇದು. ತಳಮಟ್ಟದ ಆಡಳಿತ ಸಂಸ್ಥೆಗಳು ತಮ್ಮ ನಿರ್ವಹಣೆಯ ಜವಾಬ್ದಾರಿಯನ್ನು ಗ್ರಾಮ ಪಂಚಾಯತಿಗಳಿಗೆ ವಹಿಸುವುದನ್ನು ವಿರೋಧಿಸಲು ಒಂದು ಮುಖ್ಯವಾದ ಕಾರಣವಿದೆ. ಅದೇನೆಂದರೆ ಅವುಗಳ ಹಣಕಾಸು ಸಂಪನ್ಮೂಲಗಳ ಲಭ್ಯತೆ ಹಾಗೂ ಅದರ ಸಮರ್ಪಕ ನಿರ್ವಹಣೆ. ಗ್ರಾಮ ಪಂಚಾಯಿತಿಗಳಲ್ಲಿ ಸದ್ಯ ಕೆಲಸ ಮಾಡುತ್ತಿರುವ ತೆರಿಗೆ ಸಂಗ್ರಹಗಾರರು ಮತ್ತು ನೀರಿನ ನಿರ್ವಹಣೆ ಮಾಡುವವರಿಗೆ ನಿಯಮಿತವಾಗಿ ಸಂಬಳ ನೀಡುವುದು ಅವುಗಳಿಗೆ ಸಾಧ್ಯವಾಗುತ್ತಿಲ್ಲ. ಇಂತಹ ವಿಷಯಗಳಿಗೆ ಸಂಬಂಧಿಸಿದಂತೆ ಆಡಳಿತಾತ್ಮಕ ನಿಯಮಗಳು ರೂಪಿಸಬಹುದು.

ಜಯಪ್ರಕಾಶ್ ನಾರಾಯಣರವರ ಅಭಿಪ್ರಾಯದಂತೆ ಅಭಿವೃದ್ಧಿಯಲ್ಲಿ ರಾಜಕೀಯದ ಪಾತ್ರ ಕುರಿತು ಸ್ಪಷ್ಟಪಡಿಸಬೇಕಾದ ಕಾಲ ಬಂದಿದೆ. ಅಭಿವೃದ್ಧಿಯನ್ನು ಪಕ್ಷ ಆಧಾರಿತ ರಾಜಕೀಯದಿಂದ ಮುಕ್ತಗೊಳಿಸುವುದು ಒಂದು ಉತ್ತಮ ಸಂಗತಿಯಾಗಿದೆ. ಜನರು ಪಕ್ಷ

ಆಧಾರಿತ ರಾಜಕೀಯದ ಗೊಂದಲ ಮತ್ತು ಸಲ್ಪಮಟ್ಟಿಗೆ ಅಪ್ರಸ್ತುತ ಒತ್ತಾಯ ಮತ್ತು ನಿರ್ಬಂಧಗಳಿಲ್ಲದೆ ತಾವು ನಂಬಬಹುದಾದಂಥ ವ್ಯಕ್ತಿಗಳನ್ನು ಆಯ್ಕೆ ಮಾಡಲು ಸ್ವತಂತ್ರವಾಗಿರಬೇಕು. ಪಕ್ಷರಹಿತ ಆಧಾರದ ಮೇಲೆ ಎಲ್ಲಾ ಮೂರು ಹಂತಗಳಿಗೆ ಪಂಚಾಯತಿ ರಾಜ್ ಚುನಾವಣೆಗಳನ್ನು ನಡೆಸಲು ಸಾಮಾಜಿಕ ವಾತಾವರಣವು ಅನಾವಶ್ಯಕವಾಗಿ ಕಲುಷಿತಗೊಳ್ಳದಂತೆ ನೋಡಿಕೊಳ್ಳುವುದಕ್ಕೆ ಬಹುದೂರ ಕ್ರಮಿಸಬೇಕಾಗಿದೆ.

ಕರ್ನಾಟಕದಲ್ಲಿ ಕರ್ನಾಟಕ ಪಂಚಾಯತಿ ರಾಜ್ ಅಧಿನಿಯಮ ೧೯೯೩ ಜಾರಿಗೊಳಿಸಿದ ದಿನದಿಂದ ಚುನಾವಣೆಗಳನ್ನು ಪಕ್ಷರಹಿತ ಆಧಾರದ ಮೇಲೆ (ಇತರ ೨ ಹಂತಗಳಾದ ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಮಟ್ಟದಲ್ಲಿ ಪಕ್ಷ ನಿಷ್ಠ ಆಧಾರದ ಮೇಲೆ ಚುನಾವಣೆ ನಡೆಸಲಾಗುತ್ತಿದೆ) ನಡೆಸಲಾಗುತ್ತಿದೆ. ನಮ್ಮ ಪ್ರಜಾಪ್ರಭುತ್ವದ ವ್ಯವಸ್ಥೆಯನ್ನು ಸಂರಕ್ಷಿಸಬೇಕಾದರೆ ಮತ್ತು ಬಲಗೊಳಿಸಬೇಕಾದರೆ ನಾವು ಪರಿಸ್ಥಿತಿಯನ್ನು ತುಂಬಾ ಗಂಭೀರವಾಗಿ ತೆಗೆದುಕೊಳ್ಳಬೇಕಾಗಿದೆ.

**ಸಂಶೋಧನಾ ಪ್ರಶ್ನೆಗಳು**

ಈ ಅಧ್ಯಯನದಲ್ಲಿ ಕೆಳಗಿನ ಪ್ರಮುಖ ಪ್ರಶ್ನೆಗಳನ್ನು ಕ್ಷೇತ್ರ ಕಾರ್ಯಕ್ಕೊಳಪಡಿಸಿ, ಪರಿಶೀಲಿಸಿಕೊಳ್ಳಲಾಗಿದೆ.

೧. ಪಂಚಾಯತ್ ರಾಜ್ ವ್ಯವಸ್ಥೆಗೆ ವಹಿಸಿಕೊಟ್ಟ ೨೯ ಅಭಿವೃದ್ಧಿ ಕಾರ್ಯಗಳು ಮೂರು ಹಂತಗಳಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಂಡಿವೆಯೇ?

೨. ಜಿಲ್ಲಾ ಯೋಜನಾ ಸಮಿತಿ ಜನಸಾಮಾನ್ಯರ ಆದ್ಯತೆಗನುಸಾರವಾಗಿ ಯೋಜನೆಗಳನ್ನು ರೂಪಿಸುತ್ತಿದೆಯೇ?

೩. ರಾಜ್ಯ ಚುನಾವಣಾ ಆಯೋಗವು ಮೂರು ಹಂತಗಳಲ್ಲಿ ಸ್ವತಂತ್ರವಾಗಿ ಹಾಗೂ ಪಾರದರ್ಶಕತೆಯಿಂದ ಕಾರ್ಯನಿರ್ವಹಿಸುತ್ತಿವೆಯೇ?

೪. ರಾಜ್ಯ ಹಣಕಾಸು ಆಯೋಗವು ಮೂರು ಹಂತಗಳಲ್ಲಿ ಸರಿಯಾಗಿ ಕಾರ್ಯನಿರ್ವಹಿಸುತ್ತಿದೆಯೇ?

**೧.೪. ಉದ್ದೇಶಗಳು**

**ರಾಜಕೀಯ ಆಶಯ ಎಂದರೆ**

೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆಯು ಮೂರು ಹಂತಗಳ ಸ್ಥಳೀಯ ಸಂಸ್ಥೆಗಳನ್ನು ಅಂದರೆ ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿ ವ್ಯವಸ್ಥೆಗೆ ಅನುವು ಮಾಡಿಕೊಟ್ಟಿದೆ. ಈ ಮೂರು ಹಂತಗಳ ಸ್ಥಳೀಯ ಸಂಸ್ಥೆಗಳಲ್ಲಿ ರಾಜಕೀಯ ಆಶಯಗಳು ಈಡೇರಿವೆಯೇ ಎನ್ನುವುದನ್ನು ಪರಿಶೀಲಿಸುವುದು ಈ ಅಧ್ಯಯನದ ಮಹತ್ತರ ಆಶಯವಾಗಿದೆ. ರಾಜಕೀಯ ಆಶಯ ಎನ್ನುವ ಪದ ಕೇವಲ

ರಾಜಕೀಯ ಕ್ಷೇತ್ರಕ್ಕೆ ಮೀಸಲಾಗಿರದೆ ಆ ಕ್ಷೇತ್ರವನ್ನು ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಅಭಿವೃದ್ಧಿಗಳಿಗೆ ಅನುಸಾರವಾಗಿ ವಿಸ್ತರಿಸಲಾಗಿದೆ. ಉದಾ: ಕೆಳಹಂತದಲ್ಲಿರುವ ಜನರಿಗೆ ಅಧಿಕಾರವನ್ನು ವರ್ಗಾಯಿಸುವ ಪ್ರಕ್ರಿಯೆ, ಆಡಳಿತದಲ್ಲಿ ಮತ್ತು ಅಧಿಕಾರದಲ್ಲಿ ತೀರ್ಮಾನಗಳನ್ನು ತೆಗೆದುಕೊಳ್ಳುವ ಪ್ರಕ್ರಿಯೆ, ಯೋಜನೆಗಳು ಮೇಲ್‌ಸ್ತರದಿಂದ ಬರುವುವಾಗ ಹೇಗಿರುತ್ತದೆಯೋ ಮತ್ತು ಅದನ್ನು ಜನರು ಪಾಲಿಸುವಾಗ ಏನಾಗಿರುತ್ತದೆಂಬುದರ ಬಗ್ಗೆ ಅರಿವು, ಜನರನ್ನು ರಾಜಕೀಯವಾಗಿ ಅಭಿವೃದ್ಧಿ ಮತ್ತು ಆಡಳಿತದಲ್ಲಿ ಭಾಗವಹಿಸುವಂತೆ ಮಾಡುವುದೆ ರಾಜಕೀಯ ಆಶಯವಾಗಿದೆ.

ರಾಜಕೀಯ ಜಾಗೃತಿಯನ್ನು ಮೂಡಿಸುವ ನಿಟ್ಟಿನಲ್ಲಿ ಯೋಜನಾ ಪ್ರಕ್ರಿಯೆಯಲ್ಲಿ ಜನರ ಪಾಲ್ಗೊಳ್ಳುವಿಕೆ, ಚುನಾವಣೆಗಳ ಪಾರದರ್ಶಕತೆ, ಹಣಕಾಸಿನ ಪರಿಸ್ಥಿತಿಗಳನ್ನು ಪರಿಶೀಲಿಸುವುದು, ಪಂಚಾಯತ್ ರಾಜ್ ಸಂಸ್ಥೆಗಳಿಗೆ ವಹಿಸಿದ ಹಲವು ಕಾರ್ಯಚಟುವಟಿಕೆ ಅಥವಾ ವಿಷಯಗಳು ಅಭಿವೃದ್ಧಿ ಕಾರ್ಯಕ್ಕೆ ಪೂರಕವಾಗಿ ಸಂವಿಧಾನದಲ್ಲಿ ಅಳವಡಿಸುವ ಮೂಲಕ ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಗೆ ಮೂರನೇ ಪ್ರಬಲ ಸ್ತರವಾಗಿ ಪಂಚಾಯತ್ ರಾಜ್ ಸಂಸ್ಥೆಯಾಗುವುದೇ ರಾಜಕೀಯ ಆಶಯವಾಗಿದೆ.

ಈ ಸಂಶೋಧನಾ ಅಧ್ಯಯನವು ಕೆಳಗಿನ ಉದ್ದೇಶಗಳನ್ನು ಒಳಗೊಂಡಿದೆ.

೧. ಸಂವಿಧಾನದ ೭೩ನೇ ತಿದ್ದುಪಡಿಯನ್ವಯ ರೂಪಿಸಿದಂತಹ ೨೯ ಕಾರ್ಯಕ್ರಮಗಳು ಗ್ರಾಮೀಣ ಸ್ಥಳೀಯ ಸಂಸ್ಥೆಗಳಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಂಡಿವೆಯೆಂದು ಪರಿಶೀಲಿಸುವುದು ಹಾಗೂ ಎಷ್ಟರ ಮಟ್ಟಿಗೆ ಕಾರ್ಯ ನಿರ್ವಹಿಸುತ್ತಿವೆಯೆಂದು ವಿಮರ್ಶಿಸುವುದು.

೨. ರಾಜ್ಯ ಹಣಕಾಸು ಆಯೋಗವು ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಹಣಕಾಸಿನ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ಮಾಡುವುದು.

೩. ಜಿಲ್ಲಾ ಯೋಜನಾ ಸಮಿತಿಯು ಸ್ಥಳೀಯ ಜನರ ಆದ್ಯತೆಗಳಿಗನುಸಾರವಾಗಿ ಅಭಿವೃದ್ಧಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಿವೆಯೇ ಎಂದು ವಿಮರ್ಶಿಸುವುದು.

೪. ರಾಜ್ಯ ಚುನಾವಣಾ ಆಯೋಗವು ಮೂರು ಹಂತದ ಪಂಚಾಯಿತಿಗಳಲ್ಲಿ ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಿವೆಯೇ ಎಂದು ಪರಿಶೀಲಿಸುವುದು.

**೧.೫. ಅಧ್ಯಯನದ ವಿಧಾನ**

ಈ ಅಧ್ಯಯನದಲ್ಲಿ '೧೯೯೩ರ ಕರ್ನಾಟಕ ಪಂಚಾಯತಿ ರಾಜ್ ಕಾಯ್ದೆಯ ರಾಜಕೀಯ ಆಶಯಗಳು ಮತ್ತು ಅವುಗಳ ಅನುಷ್ಠಾನ' ಎಂಬ ವಿಷಯವನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದ್ದು, ೧೯೯೩ರ ನಂತರ ಬಂದಂತಹ ಪಂಚಾಯತಿ ಕಾಯ್ದೆಯ

ರಾಜಕೀಯ ಆಶಯಗಳು ಎಷ್ಟರ ಮಟ್ಟಿಗೆ ಅನುಷ್ಠಾನಗೊಂಡಿವೆ ಮತ್ತು ಅವುಗಳು ಫಲಾನುಭವಿಗಳಿಗೆ ತಲುಪುತ್ತಿವೆಯೇ ಎಂಬ ಅಂಶಗಳನ್ನು ಸೈದ್ಧಾಂತಿಕ ಮತ್ತು ಪ್ರಾಯೋಗಿಕ ಚೌಕಟ್ಟಿನಲ್ಲಿ ವಿಮರ್ಶಿಸಿ ಅಧ್ಯಯನ ಮಾಡಲಾಗಿದೆ.

ಇಡೀ ರಾಜ್ಯ ಅಥವಾ ರಾಷ್ಟ್ರವೊಂದನ್ನು ಅಧ್ಯಯನಕ್ಕೆ ಅಳವಡಿಸುವುದು ಅಧ್ಯಯನದ ಕಾಲಮಿತಿಯ ದೃಷ್ಟಿಯಿಂದ ಕಷ್ಟಕರವಾದ ಕೆಲಸವಾದುದರಿಂದ, ಕೇವಲ ಬಳ್ಳಾರಿ ಜಿಲ್ಲೆಯನ್ನು ಮಾತ್ರ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಪ್ರಸ್ತುತ ಏಳು ತಾಲೂಕುಗಳಿವೆ. ಡಾ. ನಂಜುಂಡಪ್ಪ ವರದಿಯನ್ನಾಧರಿಸಿ, ಈ ಏಳು ತಾಲೂಕುಗಳಲ್ಲಿ ಮುಂದುವರೆದ ತಾಲೂಕಾದ ಬಳ್ಳಾರಿ ತಾಲೂಕು ಮತ್ತು ಅತಿ ಹಿಂದುಳಿದ ತಾಲೂಕಾದ ಕೂಡ್ಲಿಗಿ ತಾಲೂಕುಗಳನ್ನು ಕ್ಷೇತ್ರ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಕ್ರಮವಾಗಿ ಎರಡು ತಾಲೂಕುಗಳಲ್ಲಿ ತಲಾ ಎರಡು ಗ್ರಾಮ ಪಂಚಾಯತಿಗಳನ್ನು, ತಾಲೂಕಿಗೆ ಹತ್ತಿರವಿರುವ ಮತ್ತು ದೂರವಿರುವ ಆಧಾರದಲ್ಲಿ ಆರಿಸಿಕೊಳ್ಳಲಾಗಿದೆ. ಅದರಂತೆ ಬಳ್ಳಾರಿ ತಾಲೂಕಿನಲ್ಲಿ, ತಾಲೂಕಿಗೆ ಹತ್ತಿರವಿರುವ ಶ್ರೀಧರಗಡ್ಡೆ ಮತ್ತು ದೂರವಿರುವ ಚಳ್ಳಗುರ್ಕಿ ಗ್ರಾಮ ಪಂಚಾಯತಿಗಳನ್ನು; ಕೂಡ್ಲಿಗಿ ತಾಲೂಕಿನಲ್ಲಿ, ತಾಲೂಕಿಗೆ ಹತ್ತಿರವಿರುವ ಬಡೇಲಡಕು ಮತ್ತು ದೂರವಿರುವ ಅಪ್ಪಯ್ಯನಹಳ್ಳಿ ಗ್ರಾಮದ ಪಂಚಾಯತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿ ಗ್ರಾಮ ಪಂಚಾಯತಿಯಲ್ಲಿ ೫೦ ಕುಟುಂಬಗಳಂತೆ ಒಟ್ಟು ೨೦೦ ಕುಟುಂಬಗಳು ಹಾಗೂ ೪ ಗ್ರಾಮ ಪಂಚಾಯತಿಯ ೮೪ ಚುನಾಯಿತ ಸದಸ್ಯರನ್ನು ಅಧ್ಯಯನಕ್ಕಾಗಿ ಸಂದರ್ಶಿಸಲಾಗಿದೆ.

ಅಧ್ಯಯನದ ವಿಧಾನವು ಸೈದ್ಧಾಂತಿಕ ಅಂಶಗಳನ್ನು ಒಳಗೊಂಡಿದ್ದು, ಕ್ಷೇತ್ರ ಕಾರ್ಯಧಾರಿತ ತೌಲನಿಕ ಮಾದರಿ ಹಾಗೂ ಅನುಷಂಗಿಕ ಮಾದರಿಯನ್ನು ಹೊಂದಿದೆ. ಕರ್ನಾಟಕ ರಾಜ್ಯದ ಹೈದರಾಬಾದ್ ಕರ್ನಾಟಕ ಪ್ರದೇಶದ ಜಿಲ್ಲೆಗಳಲ್ಲಿ ಒಂದಾದ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದ್ದಾಗಿರುತ್ತದೆ. ಈ ಜಿಲ್ಲೆಯು ಪ್ರೋ. ಡಿ.ಎಂ. ನಂಜುಂಡಪ್ಪ ವರದಿ ಪ್ರಕಾರ ಹಿಂದುಳಿದ ಜಿಲ್ಲೆಗಳ ಪಟ್ಟಿಯಲ್ಲಿ ಇರುವುದರಿಂದ ಈ ಜಿಲ್ಲೆಯನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ. ನಂಜುಂಡಪ್ಪ ವರದಿ ಪ್ರಕಾರ ಜಿಲ್ಲೆಯಲ್ಲಿ ಅಭಿವೃದ್ಧಿ ಹೊಂದಿದ ತಾಲೂಕು ಬಳ್ಳಾರಿ ಹಾಗೂ ಅತಿ ಹಿಂದುಳಿದ ತಾಲೂಕು ಕೂಡ್ಲಿಗಿಯನ್ನು ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

**ಸ್ಯಾಂಪ್ಲಿಂಗ್ ಆಯ್ಕೆ ವಿಧಾನ**

ಬಳ್ಳಾರಿ ಜಿಲ್ಲೆಯ ಬಳ್ಳಾರಿ ಮತ್ತು ಕೂಡ್ಲಿಗಿ ತಾಲೂಕುಗಳಲ್ಲಿ ಕ್ರಮವಾಗಿ ಎರಡೆರಡು ಗ್ರಾಮ ಪಂಚಾಯತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಬಳ್ಳಾರಿ ತಾಲೂಕಿನಲ್ಲಿ ಒಟ್ಟು ೩೯ ಗ್ರಾಮ ಪಂಚಾಯತಿಗಳಿದ್ದು, ಈ ಗ್ರಾಮ ಪಂಚಾಯಿತಿಗಳಲ್ಲಿ ಶ್ರೀಧರಗಡ್ಡೆ ತಾಲೂಕಿಗೆ

ಹತ್ತಿರವಿರುವ ಗ್ರಾಮ ಪಂಚಾಯಿತಿಯಾಗಿದೆ. ಮತ್ತೊಂದು ತಾಲೂಕಿಗೆ ದೂರವಿರುವ ಚಳ್ಳಗುರ್ಕಿ ಗ್ರಾಮ ಪಂಚಾಯತಿಗಳನ್ನು ಆರಿಸಿಕೊಳ್ಳಲಾಗಿದೆ. ಅದೇ ರೀತಿ ಕೂಡ್ಲಿಗಿ ತಾಲೂಕಿನಲ್ಲಿ ಒಟ್ಟು ೩೩ ಗ್ರಾಮ ಪಂಚಾಯತಿಗಳಿದ್ದು, ಹತ್ತಿರವಿರುವ ಬಡೇಲಡಕು ಗ್ರಾಮ ಪಂಚಾಯತಿ ಹಾಗೂ ತಾಲೂಕಿಗೆ ದೂರವಿರುವ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ನಾಲ್ಕು ಗ್ರಾಮ ಪಂಚಾಯತಿಗಳಲ್ಲಿ ಪ್ರತಿಯೊಂದು ಗ್ರಾಮ ಪಂಚಾಯತಿಯಿಂದ ೫೦ ಕುಟುಂಬಗಳನ್ನು ಹಾಗೂ ಗ್ರಾಮ ಪಂಚಾಯಿತಿಯ ಸದಸ್ಯರುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೀಗೆ ನಾಲ್ಕು ಗ್ರಾಮ ಪಂಚಾಯಿತಿಗಳಿಂದ ಒಟ್ಟಾರೆ ೨೦೦ ಜನರನ್ನು (ಕುಟುಂಬಸ್ಥರನ್ನು) ಹಾಗೂ ೪ ಗ್ರಾಮ ಪಂಚಾಯತಿಗಳ ಸದಸ್ಯರನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಯನಕ್ಕೆ ಒಳಪಡಿಸಿದ ಸದಸ್ಯರುಗಳಿಂದ ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಗ್ರಾಮ ಪಂಚಾಯಿತಿಯ ಸುತ್ತೋಲೆಗಳು, ದಾಖಲಾತಿಗಳು, ನಡಾವಳಿ ವರದಿಗಳು, ಇತ್ಯಾದಿ ಮಾಹಿತಿಯನ್ನು ಅನುಷಂಗಿಕ ಮಾಹಿತಿಯಾಗಿ ತೆಗೆದುಕೊಳ್ಳಲಾಗಿದೆ.

ಉದ್ದೇಶ ಎರಡು, ಮೂರು ಮತ್ತು ನಾಲ್ಕನೆಯಗಳಿಗೆ ಸಂಬಂಧಿಸಿದಂತೆ ಅನುಷಂಗಿಕ ಮಾಹಿತಿಗಳ ಆಧಾರದ ಮೇಲೆ ಸೈದ್ಧಾಂತಿಕವಾಗಿ ವಿಶ್ಲೇಷಿಸಲಾಗಿದೆ. ಸರ್ಕಾರದ ಯೋಜನೆಗಳು, ಸುತ್ತೋಲೆಗಳು, ವಿವಿಧ ವರದಿಗಳು ಶಿಫಾರಸ್ಸುಗಳು, ಮಾನವ ಅಭಿವೃದ್ಧಿ ವರದಿ ಇಲಾಖಾವಾರು ನೀಡಿರುವ ಮಾಹಿತಿಗಳನ್ನು ಹಾಗೂ ದತ್ತಾಂಶಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

**೧.೬. ಅಧ್ಯಯನದ ಇತಿ-ಮಿತಿಗಳು**

೧. ಈ ಅಧ್ಯಯನವನ್ನು ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕು ಹಾಗೂ ಕೂಡ್ಲಿಗಿ ತಾಲೂಕುಗಳಲ್ಲಿನ ನಾಲ್ಕು ಗ್ರಾಮ ಪಂಚಾಯಿತಿಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ.

೨. ಪ್ರಸ್ತುತ ಅಧ್ಯಯನದಲ್ಲಿ ಸಂವಿಧಾನದ ೭೩ನೇ ತಿದ್ದುಪಡಿಯಿಂದ ಬಂದಂತಹ ಪ್ರಮುಖ ಅಂಶಗಳಲ್ಲಿ ಕೆಲವೊಂದನ್ನು ಮಾತ್ರ ಅಧ್ಯಯನದ ಉದ್ದೇಶವನ್ನಾಗಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

**೧.೭. ಅಧ್ಯಯನಗಳ ವಿನ್ಯಾಸ**

ಈ ಸಂಶೋಧನಾ ಮಹಾಪ್ರಬಂಧವು ಒಟ್ಟು ಒಂಭತ್ತು ಅಧ್ಯಾಯಗಳನ್ನು ಒಳಗೊಂಡಿದ್ದು, ಈ ಕೆಳಗಿನಂತೆ ಅವುಗಳ ಸ್ವರೂಪವನ್ನು ಸಂಕ್ಷಿಪ್ತಗೊಳಿಸಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ ಕುರಿತು ವಿವರಿಸುತ್ತದೆ. ಎರಡನೆಯ ಅಧ್ಯಾಯವು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯ ಕುರಿತು ವಿವರಿಸುತ್ತದೆ. ಮೂರನೆಯ ಅಧ್ಯಾಯವು ಕ್ಷೇತ್ರದ ಪರಿಚಯ, ನಾಲ್ಕನೆಯ ಅಧ್ಯಾಯವು

ಪಂಚಾಯತ್ ರಾಜ್ ವ್ಯವಸ್ಥೆಯ ಬೆಳವಣಿಗೆ ಮತ್ತು ವಿಕಸನದ ಬಗ್ಗೆ ಹಂತ-ಹಂತವಾಗಿ ವಿವರಣೆಯನ್ನು ನೀಡುತ್ತದೆ. ಐದನೆಯ ಅಧ್ಯಾಯದಲ್ಲಿ ಕ್ಷೇತ್ರಕಾರ್ಯಕ್ಕೆ ಸಂಬಂಧಿಸಿದಂತೆ ಸಂವಿಧಾನದ ೭೩ನೇ ತಿದ್ದುಪಡಿಯ ಲಕ್ಷಣಗಳಲ್ಲಿ ಒಂದಾದ ೨೯ ಅಭಿವೃದ್ಧಿ ಕಾರ್ಯಗಳನ್ನು ಪಂಚಾಯತಿಗಳಿಗೆ ವರ್ಗಾಯಿಸಿರುವುದರ ಹಿನ್ನೆಲೆಯಲ್ಲಿ ಸಂಶೋಧನೆ ಕೈಗೊಂಡು ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯನದಲ್ಲಿ ರಾಜ್ಯ ಹಣಕಾಸು ಆಯೋಗವು ಮತ್ತು ಜಿಲ್ಲಾ ಯೋಜನಾ ಸಮಿತಿಗಳು ಪಂಚಾಯತ್ ಸಂಸ್ಥೆಗಳಲ್ಲಿ ಯಾವ ರೀತಿ ಕಾರ್ಯನಿರ್ವಹಿಸುತ್ತದೆಂದು ಮತ್ತು ಹಣಕಾಸು ಪರಿಸ್ಥಿತಿಗಳನ್ನು ವಿಮರ್ಶಿಸಲಾಗಿದೆ. ಏಳನೆಯ ಅಧ್ಯಾಯದಲ್ಲಿ ರಾಜ್ಯ ಚುನಾವಣಾ ಆಯೋಗದ ಕುರಿದಂತೆ ಆಯೋಗದ ಕಾರ್ಯವೈಖರಿ, ಸ್ವಾತಂತ್ರ್ಯ, ಪಾರದರ್ಶಕತೆಯಿಂದ ಮೂರು ಹಂತಗಳಲ್ಲಿ ನಡೆದ ಚುನಾವಣೆಗಳ ವಿಶ್ಲೇಷಣೆ ಹಾಗೂ ೮ನೇ ಅಧ್ಯಾಯದಲ್ಲಿ ಸಮಾರೋಪ, ಫಲಿತಗಳು ಮತ್ತು ಸಲಹೆಗಳನ್ನು ಸೂಚಿಸಲಾಗಿದೆ.

**ಕೊನೆಯ ಟಿಪ್ಪಣಿಗಳು**

೧. ಆರ್. ಪ್ರಭು ಆ್ಯಂಡ್ ಯು.ಆರ್.ರಾವ್, ವಿಲೇಜ್ ರಿಪಬ್ಲಿಕ್ ದ ಮೈಂಡ್ ಆಫ್ ಮಾಹತ್ಮ ಗಾಂಧಿ ಪಿ.ಪಿ ೨೪೭, ಪ್ರಕಾಶಕರು ನವಜೀವನ ಅಹ್ಮದಬಾದ್.

೨. ಸಿಂಗ್ ಪಂಚಾಯತ್ ರಾಜ್ ಪಂಕ್ಷನಾಲ್ ಅನಲೈಜೆಸ್ಸ್ ಅನ್ಮೂಲ್ ಪಬ್ಲಿಕೇಷನ್ ನ್ಯೂ-ಡೆಲ್ಲಿ ೨೦೦೦. ಪಿ.ಪಿ ೨೨೯.

೩. ಡಾ. ಅಬ್ದುಲ್ ಅಜೀಜ್, "ಎಂಪವರಿಂಗ್ ಪಂಚಾಯತಿ ರಾಜ್ ಇನ್ಸಟ್ಯೂಶನ್ಸ್" ಎ ಸ್ಪಡಿ ಇನ್ ಕರ್ನಾಟಕ (೨೦೦೨)

೪. ಎಂ.ಚಂದ್ರ ಪೂಜಾರಿಯವರು ಪುಸಕವಾದ "ಕರ್ನಾಟಕದ ಪಂಚಾಯತ್ ರಾಜ್ ಸಮಸ್ಯೆ ಮತ್ತು ಪರಿಹಾರಗಳು ೨೦೧೧

೫. ಎಂ.ಗೋವಿಂದ, ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫ರ

೬. ಸುರಜಿತ್ ಸಿಂಗ್ ಶರ್ಮ, ರೂರಲ್ ಅಡ್ಮಿನಸ್ಟ್ರೇಷನ್ ಇನ್ ಇಂಡಿಯಾ (೧೯೭೯)

# ಅಧ್ಯಾಯ - ಎರಡು

# ಸಾಹಿತ್ಯ ಸಮೀಕ್ಷೆ

ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಸ್ಥಳೀಯ ಜನರಿಗೆ ಅಧಿಕಾರ ನೀಡುವ ಹಾಗೂ ಆಡಳಿತ ಮತ್ತು ರಾಜಕೀಯ ವಿಕೇಂದ್ರೀಕರಣ ಸಾಧಿಸುವ ನಿಟ್ಟಿನಲ್ಲಿ ಹಲವಾರು ಅಧ್ಯಯನಗಳು ನಡೆದಿದ್ದು ಅವುಗಳ ಸಂಕ್ಷಿಪ್ತ ಸಮೀಕ್ಷೆಯನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

**ಡಾ. ಅಬ್ದುಲ್ ಅಜೀಜ್‌ರವರು[1] ಕೇರಳ ಮತ್ತು ಕರ್ನಾಟಕ ರಾಜ್ಯಗಳ ಸ್ಥಳೀಯ ಸರ್ಕಾರಗಳಲ್ಲಿ ಹಣಕಾಸಿನ ವಿಕೇಂದ್ರೀಕರಣದ** ಬಗ್ಗೆ ತೌಲನಿಕ ಅಧ್ಯಯನ ನಡೆಸಿ ಈ ಕೆಳಕಂಡ ತೀರ್ಮಾನಕ್ಕೆ ಬಂದಿದ್ದಾರೆ. ಪಂಚಾಯತ್ ರಾಜ್ ಸಂಸ್ಥೆಗಳ ವಿಕೇಂದ್ರೀಕೃತ ಯೋಜನೆಯ ಪ್ರಾಥಮಿಕ ಉದ್ದೇಶವೆಂದರೆ ಸ್ಥಳೀಯ ಅಗತ್ಯಗಳನ್ನು ಗುರುತಿಸಿ, ಅವುಗಳ ಆದ್ಯತೆ ಪ್ರಕಾರ ಯೋಜನೆಗಳನ್ನು ರೂಪಿಸುವುದು ಮತ್ತು ಜಾರಿಗೆ ತರುವುದು. ಈ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವಹಿಸುವರೆಂದರೆ ಶ್ರೀಸಾಮಾನ್ಯರು, ಈ ಸಂಸ್ಥೆಗಳಿಗೆ ವಿಕೇಂದ್ರೀಕೃತ ಸರ್ಕಾರವನ್ನು ಶಕ್ತಿಯುತಗೊಳಿಸಲು ತಮ್ಮ ಪಾತ್ರವನ್ನು ನಿರ್ವಹಿಸುತ್ತದೆ. ನಿರ್ಣಾಯಕ ಕ್ರಿಯೆಗಳಲ್ಲಿ ಜನರ ಭಾಗವಹಿಸುವಿಕೆಯನ್ನು ಪ್ರೇರೇಪಿಸುವ, ಸ್ಥಳೀಯ ಸರ್ಕಾರಗಳಿಗೆ ಸಂಬಂಧಿಸಿದ ಹಲವಾರು ವಿಷಯ, ಯೋಜನೆಗಳ ಮಾಹಿತಿಯನ್ನು ಒದಗಿಸುವಲ್ಲಿ ವಿಕೇಂದ್ರೀಕೃತ ಸರ್ಕಾರ ಚೈತನ್ಯ ನೀಡುವ ಪಾತ್ರವನ್ನು ಈ ಸಂಸ್ಥೆಗಳು ನಿರ್ವಹಿಸುತ್ತಿವೆ. ಈ ನಿಟ್ಟಿನಲ್ಲಿ ಕೇರಳ ಸರ್ಕಾರ ಒಂದು ಹೆಜ್ಜೆ ಮುಂದಿದೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು.

ವಿಲ್‌ಫ್ರೆಡ್ ಡಿಸೋಜಾರವರ "ಪ್ರಜಾಪ್ರಭುತ್ವ ವಿಕೇಂದ್ರೀಕರಣ" ಲೇಖನದಲ್ಲಿ ತಳಹಂತದ ಸರ್ಕಾರವಾಗಿರುವ ಗ್ರಾಮ ಪಂಚಾಯತಿಗಳು ತಮಗೆ ವಹಿಸಲಾಗಿರುವ ಜವಾಬ್ದಾರಿಗಳನ್ನು ನಿರ್ವಹಿಸುವ ಮೂಲಕ ಗ್ರಾಮೀಣ ಜನರಿಗೆ ಉತ್ತಮ ಆಡಳಿತ ನೀಡುತ್ತದೆ. ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಹೆಚ್ಚಿನ ಜವಬ್ದಾರಿಯನ್ನು ಸಮರ್ಥವಾಗಿ ನಿಭಾಯಿಸುವ ಮೂಲಕ ಸಾರ್ವಜನಿಕರಿಗೆ ಪಾರದರ್ಶಕವಾದ ಆಡಳಿತವನ್ನು ಒದಗಿಸುವುದು ಗ್ರಾಮ ಪಂಚಾಯತಿಗಳ ಆದ್ಯ ಕರ್ತವ್ಯವಾಗಿದೆ.

**ಡೇವಿಡ್ ಅಸ್ಲಿಮೈರವರು** ತಮ್ಮ ಲೇಖನವಾದ **"ದಿ ರೇಲೇಶನ್ ಬಿಟ್‌ವಿನ್ ಪಾಲಿಟಿಕಲ್ ಎಕಾನಾಮಿಕ್ ಮತ್ತು ಡೆವೆಲಪ್‌ಮೆಂಟ್"**ದಲ್ಲಿ ಅಭಿವೃದ್ಧಿ ಕುರಿತಾಗಿ ಸ್ಥಳೀಯ ಸಂಸ್ಥೆಗಳ ಪಾತ್ರ, ತಳಹಂತದಲ್ಲಿರುವ ಅಭಿವೃದ್ಧಿ ಮತ್ತು ರಾಜಕೀಯ ಅಂಶಗಳ ಆಧಾರವಾಗಿ ನೈಸರ್ಗಿಕ ಸಂಪನ್ಮೂಲಗಳ ಸುಸ್ಥಿರ ನಿರ್ವಹಣೆ ಉತ್ತಮವಾಗುವ ಹೆಚ್ಚಿನ ಸಾಧ್ಯತೆ ಇದೆ. ಜನ ಪ್ರತಿನಿಧಿಗಳನ್ನೊಳಗೊಂಡ ಸ್ಥಳೀಯ ಸಂಸ್ಥೆ, ಸಮುದಾಯ ಗುಂಪುಗಳು, ಹಾಗೂ ಸಮಿತಿಗಳನ್ನು ರಚಿಸುವುದು ಅತ್ಯಗತ್ಯವಾಗಿದೆ.

**ಎಂ. ಚಂದ್ರಪೂಜಾರಿಯವರು**[೨] ಹಣಕಾಸಿನ ವಿಕೇಂದ್ರೀಕರಣ ಕುರಿತಂತೆ ವಿವರಿಸುತ್ತಾ, ಪಂಚಾಯತಿಗಳ ಹಣಕಾಸಿನ ಸಮಸ್ಯೆಗಳನ್ನು ಪರಿಹರಿಸಲು ಪ್ರತಿ ರಾಜ್ಯ ಸರ್ಕಾರ 'ರಾಜ್ಯ ಹಣಕಾಸು ಆಯೋಗ'ಗಳನ್ನು ನೇಮಿಸಬೇಕೆಂದು ಹೇಳಿದೆ. ಸಂವಿಧಾನ ತಿದ್ದುಪಡಿಯ ಈ ಆಶಯವನ್ನು ಈಡೇರಿಸುವ ಭರವಸೆಯನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ-೧೯೯೩ ನೀಡಿದೆ. ಪ್ರತಿ ಐದು ವರ್ಷಗಳಿಗೊಮ್ಮೆ ಹಣಕಾಸು ಆಯೋಗವನ್ನು ಸಂಘಟಿಸಲಾಗುವುದು. ಇದರ ಪ್ರಮುಖ ಉದ್ದೇಶ ಮೂರು ಹಂತಗಳ ಪಂಚಾಯತಿಗಳ ಹಣಕಾಸಿನ ಸ್ಥಿತಿಗಳನ್ನು ಪರಾಮರ್ಶೆ ಮಾಡುವುದು. ಈ ಬಗ್ಗೆ ಸ್ಥಾಯಿ ಸಮಿತಿಗಳು ಸಕ್ರಿಯವಾಗಿ ಕೆಲಸ ಮಾಡುತ್ತಿವೆ. ಕರ್ನಾಟಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸಬೇಕಾದರೆ, ತಳಸ್ಥರದ ಸಂಸ್ಥೆಗಳು ಎಲ್ಲಾ ವಿಧಗಳಿಂದಲೂ ಸಶಕ್ತಗೊಳ್ಳಬೇಕು. ವಿಕೇಂದ್ರೀಕೃತ ಪ್ರಜಾಪ್ರಭುತ್ವ ಜಾರಿಗೆ ಬರಬೇಕಾದರೆ ಪಂಚಾಯತಿಗಳು ತಮ್ಮ ಬೇಕು-ಬೇಡಗಳನ್ನು, ಆದ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಯೋಜನೆಗಳನ್ನು ಸಿದ್ದಪಡಿಸಬೇಕು ಮತ್ತು ಅವುಗಳನ್ನು ಕಾರ್ಯರೂಪಕ್ಕೆ ತರಬೇಕು.

ಈ ನಿಟ್ಟಿನಲ್ಲಿಯೇ ತಳಮಟ್ಟದಿಂದ ಯೋಜನೆ ಸಿದ್ದಪಡಿಸಲು ಅನುಕೂಲವಾಗಲೆಂದು ಸಂವಿಧಾನದ ೭೩ನೇ ತಿದ್ದುಪಡಿಯಲ್ಲಿ ಪಂಚಾಯತಿಗೆ ಸಂಬಂಧಿಸಿದ ೨೯ ಪ್ರಕಾರ್ಯಗಳನ್ನು ಪಂಚಾಯತಿಗಳಿಗೆ ವರ್ಗಾಯಿಸಬೇಕೆಂದು ಸೂಚಿಸಿಲಾಗಿದೆ. ೨೯ನೆಯ ಪ್ರಕಾರ್ಯಗಳನ್ನು ಪಂಚಾಯತಿಗೆ ವರ್ಗಾಯಿಸಿ ಸಂವಿಧಾನದ ಆಶಯವನ್ನು ಗೌರವಿಸಿದ ಕೆಲವೇ ಕೆಲವು ರಾಜ್ಯಗಳಲ್ಲಿ ಕರ್ನಾಟಕವೂ ಸೇರಿದೆ. ಇವು ರಾಜ್ಯ ಮಟ್ಟದಿಂದ ಜಿಲ್ಲಾ ಮಟ್ಟಕ್ಕೆ ತಲುಪಿದೆ. ಅಲ್ಲಿಂದ ಮುಂದಕ್ಕೆ ಹೋಗಿಲ್ಲ. ಪ್ರಕಾರ್ಯಗಳನ್ನು ಜಾರಿಗೆ ತರಬೇಕಾಗಿರುವ ಆಡಳತಾಂಗ ಹಾಗೂ ಹಣಕಾಸುಗಳ ತೀರ್ಮಾನ ಇನ್ನೂ ರಾಜ್ಯ ಮಟ್ಟದಲ್ಲಿಯೇ ನಡೆಯುತ್ತಿದೆ. ಪಂಚಾಯತಿ ಮಟ್ಟದಲ್ಲಿ ಸುಮಾರು ೪೫೦ಕ್ಕಿಂತಲೂ ಹೆಚ್ಚಿನ ಅಭಿವೃದ್ಧಿ ಕಾರ್ಯಕ್ರಮಗಳು ಕಾರ್ಯರೂಪಕ್ಕೆ ಬರುತ್ತವೆ. ಅವುಗಳಲ್ಲಿ ಒಂದೆರಡು ಬಿಟ್ಟರೆ ಉಳಿದ ಎಲ್ಲಾ ಕಾರ್ಯಕ್ರಮಗಳು ಕೇಂದ್ರ ಮತ್ತು ರಾಜ್ಯ ಮಟ್ಟದಲ್ಲಿಯೇ ನಿರ್ಧಾರವಾಗುತ್ತದೆ. ಈ ಕಾರ್ಯಕ್ರಮಗಳ ನ್ಯೂನತೆಯನ್ನು ರಾಜ್ಯ ಸರ್ಕಾರವು ನೇಮಿಸಿದ **"ವರ್ಕಿಂಗ್ ಗ್ರೂಪ್ ಆನ್ ಡಿಸೆಂಟ್ರಲೈಸೇಶನ್"** ಕೂಡ ಪಟ್ಟಿಮಾಡಿದೆ.

**ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫ರ ಪ್ರಕಾರ** ವಿಕೇಂದ್ರಿಕೃತ ಸರ್ಕಾರಗಳು ಅನೇಕ ನಿಯೋಜಿತ ಕಾರ್ಯ ಚಟುವಟಿಕೆಗಳನ್ನು ದಕ್ಷತೆಯಿಂದ ನಿರ್ವಹಿಸಬೇಕಾಗಿರುವುದರಿಂದ ಅವುಗಳಿಗೆ ನಿಯೋಜಿಸುವ ಹಣಕಾಸು ಸಂಪನ್ಮೂಲವು ಕೂಡ ಸಾಕಷ್ಟಿರಬೇಕಾಗುತ್ತದೆ ಎಂದು ಹೇಳುತ್ತದೆ.ಪಂಚಾಯತಿಗಳು ಮತ್ತು ನಗರ ಸ್ಥಳೀಯ ಸರ್ಕಾರಗಳಿಗೆ ರಾಜ್ಯ ಸಂಪನ್ಮೂಲದಿಂದ ಎಷ್ಟು ಪ್ರಮಾಣ ನಿಯೋಜಿಸಲ್ಪಡಬೇಕು ಎಂಬುದನ್ನು ನಿಗದಿಪಡಿಸುವ ಅಧಿಕಾರವನ್ನು ಸಂವಿಧಾನದ ೭೩ನೇ ತಿದ್ದುಪಡಿ ಕಾಯ್ದೆಯ ೨೪೩-೧ ಪರಿಚ್ಛೇದವು ರಾಜ್ಯ ಹಣಕಾಸು ಸಮಿತಿಗಳಿಗೆ (ಎಸ್.ಎಫ್.ಸಿ) ನೀಡಿದೆ.

ನಿರ್ದಿಷ್ಟ ಉದ್ದೇಶಕ್ಕಾಗಿ ಅನುದಾನದ ವರ್ಗಾವಣೆಯು, ಹಿಂದುಳಿದ ಪ್ರದೇಶಗಳಲ್ಲಿ ಲಭ್ಯವಿರುವ ಅಭಿವೃದ್ಧಿ ಸಾಮರ್ಥ್ಯವನ್ನು ಬಳಸಿಕೊಳ್ಳಲು ಮತ್ತು ಅಭಿವೃದ್ಧಿಗತಿಯನ್ನು ಉನ್ನತಮಟ್ಟಕ್ಕೆರಿಸಲು, ಮುಂದುವರಿದ ಪ್ರದೇಶಗಳಲ್ಲಿ ಯಾವ ಪ್ರಮಾಣದ ಮೂಲ ಸೌಲಭ್ಯಗಳವೆಯೋ ಅಷ್ಟು ಪ್ರಮಾಣದ ಮೂಲ ಸೌಲಭ್ಯವನ್ನು ಒದಗಿಸಲು ಅಗತ್ಯವಾದ ಸಂಪನ್ಮೂಲವನ್ನು ಸ್ಥಳೀಯವಾಗಿ ಕ್ರೋಡೀಕರಿಸಲು ಅಗತ್ಯವಾದ ವಿತ್ತೀಯ ಸಾಮರ್ಥ್ಯದ ಕೊರತೆಯನ್ನು ತುಂಬಿಕೊಡುತ್ತದೆ. ವಿಶೇಷ ಉದ್ದೇಶದ ವರ್ಗಾವಣೆಯು, ವರ್ಗಿಯ ಸಮಾನತೆಗಾಗಿ ಅಥವಾ **"ಸಂಪತ್ತು ತಟಸ್ಥ"** ಇದು ಪಾವತಿ ಮಾಡುವ ಸಾಮರ್ಥ್ಯಕ್ಕೆ ಸಂಬಂಧ ಹೊಂದಿಲ್ಲದ ವಿಷಯಗಳಾದ ಶೈಕ್ಷಣಿಕ, ಆರೋಗ್ಯ, ನೈರ್ಮಲ್ಯ, ಗ್ರಾಮೀಣ ರಸ್ತೆಗಳು ಮುಂತಾದವುಗಳನ್ನು ಒದಗಿಸುವ ಗುರಿಯನ್ನು ಹೊಂದಿದೆ ಎಂಬುದನ್ನು ಎಂ.ಗೋವಿಂದರವರು ಈ ವರದಿಯಲ್ಲಿ ವ್ಯಕ್ತಪಡಿಸಿದ್ದಾರೆ.[೩]

ಕರ್ನಾಟಕದಲ್ಲಿ ಹಣಕಾಸು ವಿಕೇಂದ್ರೀಕರಣ ಕುರಿತಂತೆ ಅಮರನಾಥ ಮತ್ತು ವಾಣಿ (೨೦೦೪)ಯವರು ಕೈಗೊಂಡ ಅಧ್ಯಯನದ ಪ್ರಕಾರ ಗ್ರಾಮ ಪಂಚಾಯತಿಗಳಿಗೆ ೩೧ ಕಾರ್ಯ ಚಟುವಟಿಕೆಗಳನ್ನು ತಾಲೂಕು ಪಂಚಾಯತಿಗೆ ೨೮ ಕಾರ್ಯಗಳನ್ನು ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ೨೯ ಕಾರ್ಯ ಚಟುವಟಿಕೆ ಪಟ್ಟಿ ಮಾಡಿದ್ದಾರೆ. ಈ ಕಾರ್ಯ ಚಟುವಟಿಕೆಗಳನ್ನು ನಿರ್ದಿಷ್ಟವಾಗಿ ನಿರ್ಧರಿಸುವ ಪ್ರಕ್ರಿಯೆಯ ಭಾಗವಾಗಿ, ಯೋಜನೆಗಳನ್ನು ಒಳಗೊಳ್ಳುವ ಅನೇಕ ಸಂಗತಿಗಳನ್ನು ವರ್ಗಾಯಿಸುವ ಮೂಲಕ ಜಿಲ್ಲಾ ವಲಯವನ್ನು ರೂಪಿಸಲಾಗುತ್ತದೆ. ಅವುಗಳ ಅನುಷ್ಠಾನಕ್ಕೆ ೩ ಹಂತದ ಪಂಚಾಯತಿಗಳಿಗೆ ನಿಯೋಜಿಸಬೇಕಾಗುತ್ತದೆ. ಆದರೆ ಹಣಕಾಸು ಸ್ಥಿತಿಗತಿಯು ಬಿಕ್ಕಟ್ಟನಿಂದಾಗಿ ಸಂಪನ್ಮೂಲದ ವರ್ಗಾವಣೆಯು ಪೂರ್ಣವಾಗಿ ನಡೆಯಲಿಲ್ಲ. ಅಂದರೆ ಲಿಂಕ್ ಡಾಕ್ಯೂಮೆಂಟ್‌ನಲ್ಲಿನ (ರಾಜ್ಯ ಸರ್ಕಾರವು ಪ್ರತಿ ವರ್ಷ ತನ್ನ ಬಜೆಟ್ ಅಂದಾಜನ್ನು ಆಧರಿಸಿ ಸಿದ್ಧಪಡಿಸುವ ಜಿಲ್ಲಾ, ತಾಲೂಕು ಮತ್ತು ಗ್ರಾಮ ಪಂಚಾಯತಿ ಕಾರ್ಯಕ್ರಮಗಳನ್ನು ಒಳಗೊಂಡಿರುತ್ತದೆ) ಮಾಹಿತಿ ಪ್ರಕಾರ, ಪಂಚಾಯತಿಗಳು ನಿರ್ವಹಿಸುವ ವೆಚ್ಚವು ರಾಜ್ಯ ಸರ್ಕಾರದ ಒಟ್ಟು ವೆಚ್ಚದ ಶೇ. ೨೧.೮ ರಷ್ಟಿತ್ತು.

ಪಂಚಾಯಿತಿಗಳ ವೆಚ್ಚದಲ್ಲಿ ಸಿಂಹಪಾಲು ಯೋಜನೇತರ ಬಾಬ್ತುಗಳಿಗೆ ಹೋಗುತ್ತದೆ. ಹೀಗೆ ಗ್ರಾಮೀಣ ಪ್ರದೇಶದ ಜನರ ಆಕ್ಷೇಪಗಳಿಗನುಗುಣವಾಗಿ ಸಾರ್ವಜನಿಕರ ಸೇವೆಯನ್ನು ಒದಗಿಸುವಂತೆ ಸ್ಥಳೀಯ ಸರ್ಕಾರಗಳನ್ನು ಕರ್ನಾಟಕ ಹಣಕಾಸು ವಿಕೇಂದ್ರೀಕರಣವು ಸಬಲಗೊಳಿಸಿದೆಯೇ? ಪಂಚಾಯತಿ ಸಂಸ್ಥೆಗಳು ಅನುಷ್ಠಾನ ಗೊಳಿಸುತ್ತಿರುವ ೩೦ ಪ್ರಧಾನ ಯೋಜನೆಗಳ ಹಣಕಾಸು ಸಂಪನ್ಮೂಲವನ್ನು ಬಿಡಿಯಾಗಿ ವಿಶ್ಲೇಷಿಸಿ ನೋಡಿದಾಗ ಅವುಗಳಿಗೆ ಆದ್ಯತೆಗಳಿಗನುಗುಣವಾಗಿ ಹಣಕಾಸು ಸಂಪನ್ಮೂಲವನ್ನು ವಿತರಿಸಲು ಸ್ವಾಯತ್ತತೆ ಅಥವಾ ಅವಕಾಶಗಳಾಗಲಿ ಇಲ್ಲದಿರುವುದು ತಳಿಯುತ್ತದೆ ಎಂದಿದ್ದಾರೆ.

**ಅಬ್ದುಲ್ ಅಜೀಜ್‌ರವರ "ಡಿಸೆಂಟ್ರಲೈಜೈಡ್ ಗವರ್ನನ್ಸ್ ಇನ್ ಏಷಿಯಾ ಕಂಟ್ರೀಸ್"** ಎಂಬ ಲೇಖನದಲ್ಲಿ ಪಂಚಾಯತಿಗಳ ಹಣಕಾಸಿನ ಸಂಪನ್ಮೂಲಗಳ ಬಗ್ಗೆ ಕೆಲವು ಸಮಸ್ಯೆಗಳನ್ನು ವ್ಯಕ್ತಿಪಡಿಸಿದ್ದಾರೆ. ಪ್ರಸ್ತುತ ಹಣಕಾಸು ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಗಳಿಗೆ ದೊರೆತಿರುವ ಅಧಿಕಾರಗಳಾವುವು? ಹಣಕಾಸು ವಿಷಯದಲ್ಲಿ ಪಂಚಾಯಿತಿ ರಾಜ್ ಸಂಸ್ಥೆಗಳು ಎಷ್ಟರಮಟ್ಟಿಗೆ ಸ್ವಾಯುತ್ತತೆಯನ್ನು ಹೊಂದಿವೆ? ಅವುಗಳ ಆದಾಯದ ಮೂಲಗಳು ಹಾಗೂ ವೆಚ್ಚ ಬಾಬ್ತುಗಳಾವುವು? ರಾಜ್ಯ ಹಣಕಾಸು ಆಯೋಗದಿಂದ ಪಂಚಾಯತಿ ಸಂಸ್ಥೆಗಳಿಗೆ ಯಾವ ಬಗೆಯ ಅನುಕೂಲತೆಗಳು ದೊರೆಯುತ್ತವೆ? ಹಣಕಾಸು ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಈ ಸಂಸ್ಥೆಗಳು ಎದುರಿಸುತ್ತಿರುವ ಸಮಸ್ಯೆಗಳಾವುವು? ಹಣಕಾಸಿನ ಪರಿಸ್ಥಿತಿಯನ್ನು ಉತ್ತಮಪಡಿಸಲು ಯಾವ ಕ್ರಮಗಳನ್ನು ಕೈಗೊಳ್ಳಬೇಕು? ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಚರ್ಚಿಸಲಾಗಿದೆ. ಗ್ರಾಮ ಅಭಿವೃದ್ಧಿ ಮತ್ತು ಆಡಳಿತ ಸಂಬಂಧ ಜವಾಬ್ದಾರಿಯನ್ನು ಸಮರ್ಪಕವಾಗಿ ಮತ್ತು ದಕ್ಷವಾಗಿ ಕಾರ್ಯನಿರ್ವಹಿಸಲು ಸಾಕಷ್ಟು ಹಣಕಾಸು ಸಂಪನ್ಮೂಲದ ಅಗತ್ಯವಿದೆ. ಇದಕ್ಕೆ ಸಂಬಂಧಿಸಿದಂತೆ ಎರಡು ಅಂಶಗಳು ಮುಖ್ಯವಾಗಿವೆ. ೧) ಹಣಕಾಸು ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಗಳು ಸ್ವಾವಲಂಭಿಯಾಗಿರಬೇಕು. ೨)ಹಣಕಾಸಿನ ವಿಷಯದಲ್ಲಿ ಪಂಚಾಯಿತಿಗಳು ಸ್ವಾಯತ್ತತೆಯಾಗಿರಬೇಕೆಂದು ವಾದಿಸಿದ್ದಾರೆ.

**ಎಂ.ಸಿ. ಶೈಲಾಜರವರ "ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಹಣಕಾಸಿನ ಹರಿವು"**ಎಂಬ ಲೇಖನದಲ್ಲಿ ಸಂವಿಧಾನದ ೭೩ನೆ ತಿದ್ದುಪಡಿಯಿಂದಾಗಿ ನಮ್ಮ ರಾಜಕೀಯ ಆಡಳಿತ ವ್ಯವಸ್ಥೆಯ ಸಂರಚನೆಯಲ್ಲಿ ಕೆಲವು ಮೂಲಭೂತ ಬದಲಾವಣೆಗಳು ಆಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಸ್ಥಾನಮಾನ ಲಭ್ಯವಾಗಿದೆ. ನಿಯಮಿತವಾದ ಕಾಲಘಟ್ಟದಲ್ಲಿ ಚುನಾವಣೆ ನಡೆಸಲು ರಾಜ್ಯ ಚುನಾವಣೆ ಆಯೋಗದ ರಚನೆ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ಪರಿಶೀಲಿಸಲು ಪ್ರತಿ ೫ವರ್ಷಗಳಿಗೊಮ್ಮೆ ರಾಜ್ಯ ಹಣಕಾಸು ಆಯೋಗವನ್ನು ರಚಿಸುವುದು ಕಡ್ಡಾಯಗೊಳಿಸಿದ್ದರಿಂದ, ದೇಶದ್ಯಾಂತ ೨೯ ಅಭಿವೃದ್ಧಿ ಕಾರ್ಯಗಳ ವ್ಯಾಪ್ತಿ ನಿಗದಿಪಡಿಸುವುದರೊಡನೆ ಅವುಗಳು ತಮ್ಮದೇ ಆದ ಅಯವ್ಯಯವನ್ನು ತಯಾರಿಸಲು ಮತ್ತು ತೆರಿಗೆ ವಿಧಿಸುವ ಅಧಿಕಾರಗಳನ್ನು ಹೊಂದಿವೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಮರಿಯಾ ಗೋನ್ಸಾರಾಜ್** (೨೦೦೧) ರವರ ಪ್ರಕಾರ, ಸರ್ಕಾರವು ತೀರ್ಮಾನ ತೆಗೆದುಕೊಳ್ಳುವ ಸಂದರ್ಭದಲ್ಲಿ ಅದರ ಅಗತ್ಯತೆಗಳು, ಸಮಸ್ಯೆಗಳು, ಮೌಲ್ಯಗಳು, ನಿರೀಕ್ಷೆಗಳು, ನಾಗರಿಕತೆಗೆ ಸಂಬಂಧಿಸಿದ ವಿಷಯಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಇದರ ಮೂಲಕ ನಾಗರಿಕರ ಭಾಗವಹಿಸುವಿಕೆಯನ್ನು ಗುರುತಿಸಬಹುದು. ಇದು ಗುರಿಗಳನ್ನು ಸಾಧಿಸುವ ನಿಟ್ಟಿನಲ್ಲಿ ಮತ್ತು ಜನತೆಯ ಕಲ್ಯಾಣ ಕಾರ್ಯಕ್ರಮವಾದ ಬಡತನ ನಿರ್ಮೂಲನೆಯಂತಹ ಅಂಶಗಳಿಂದ ಸರ್ಕಾರ ಮತ್ತು ಜನತೆಯ ನಡುವೆ ಇರುವ ದ್ವಿಮುಖ ಮಾರ್ಗದ ಸಂಪರ್ಕ ಸಾಧನವಾಗಿದೆ.

**ಬ್ಲೆರ್**(೨೦೦೦)**ರವರ ಪ್ರಕಾರ** ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯಯಲ್ಲಿ ಭಾಗವಹಿಸುವಿಕೆ ಪ್ರಜೆಗಳಿಗೆ ಪಾಲುದಾರಿಕೆಯನ್ನು ನೀಡುತ್ತದೆ.ಈ ಮೂಲಕ ಯೋಜನೆಗಳನ್ನು ರೂಪಿಸುವಲ್ಲಿ ಮತ್ತು ಹಂಚಿಕೆಯಾಗುವಲ್ಲಿ ಪ್ರಜಾಪ್ರಭುತ್ವದ ಒಂದು ಬಹುಮುಖ್ಯ ಅಂಶವಾಗಿದೆ.

**ಅಬ್ದುಲ್ ಅಜೀಜ್ ರವರ 'ದ ಸೆಂಟ್ರಲೈಸ್ಡ್ ಪ್ಲಾನಿಂಗ್'ನಲ್ಲಿ** ವಿಕೇಂದ್ರೀಕರಣ ಯೋಜನೆಗಳು ಏನೇನಿವೆ ಮತ್ತು ಕರ್ನಾಟಕದಲ್ಲಿ ಹೇಗೆ ಅವು ಅನುಷ್ಠಾನಗೊಂಡಿವೆ ಹಾಗೂ ವಿಕೇಂದ್ರೀಕರಣ ನೀತಿಯನ್ನು ಅನುಷ್ಠಾನಗೊಳಿಸುವಲ್ಲಿ ಸರ್ಕಾರಗಳು ಯಾವ ರೀತಿ ಕಾರ್ಯತತ್ಪರವಾಗಿದೆ ಮತ್ತು ಅದರ ಪರಿಣಾಮವೇನು ಎಂಬುದರ ಬಗ್ಗೆ ವಿಶ್ಲೇಷಿಸಲಾಗಿದೆ.

**ಸುರಜಿತ್ ಸಿಂಗ್ ಶರ್ಮ**'ರವರು ಉತ್ತರ ಪ್ರದೇಶದ ಪಶ್ಚಿಮ ಭಾಗಗಳ ಗ್ರಾಮಗಳು, ಗ್ರಾಮೀಣ ಮುಖಂಡತ್ವವನ್ನು ಆಡಳಿತ ಕೇಂದ್ರವಾಗಿರಿಸಿ, ನಗರಗಳು ಮತ್ತು ಅವುಗಳ ಮೇಲ್ಪಂಕ್ತಿಯಲ್ಲಿ ನಿಲ್ಲುವ ವ್ಯವಸ್ಥೆ ಮತ್ತು ಅವುಗಳ ರಾಜಕೀಯ ಸಾಮರ್ಥ್ಯವನ್ನು ಕುರಿತು ಅವಲೋಕಿಸಿದ್ದಾರೆ. ಪಂಚಾಯತಿ ಚುನಾವಣೆಗಳಲ್ಲಿ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಪಾತ್ರವಹಿಸುವ ಜನರ ವೈಯಕ್ತಿಕ ಅಭಿಲಾಸೆಗಳು, ಜಾತಿ ವ್ಯವಸ್ಥೆ ತೊಡಕನ್ನುಂಟು ಮಾಡುತ್ತಾ, ಸಮಾಜ ಮತ್ತು ರಾಷ್ಟ್ರ ಅಭಿವೃದ್ಧಿಯ ಬಗ್ಗೆ ಚಿಂತಿಸದೆ ಕೇವಲ ತಮ್ಮ ಹಿತಾಸಕ್ತಿಗಳನ್ನು ಕಾಪಾಡುವಲ್ಲಿಗೆ ಸೀಮಿತಗೊಂಡು ಬಿಡುತ್ತವೆ.

**ಜಯಪ್ರಕಾಶ್ ನಾರಾಯಣರವರು ತಮ್ಮ "ಜನರಿಗಾಗಿ ಸ್ವರಾಜ್ಯ"** ಎಂಬ ಪುಸ್ತಕದಲ್ಲಿ ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದಾರೆ. ಚುನಾವಣೆಗಳು ನಡೆಸುವುದು ಜನರಿಗೆ ಮತ ಚಲಾಯಿಸುವ ಅಧಿಕಾರವನ್ನು ಮಾತ್ರ ನೀಡಿಲ್ಲ. ಬದಲಾಗಿ ಸ್ಥಳೀಯ ಜನರ ಕರ್ತವ್ಯಗಳು ಅರಿವು, ಹಕ್ಕು ಹಾಗೂ ಆಡಳಿತದಲ್ಲಿ ಪಾಲ್ಗೋಳ್ಳುವಂತೆ ಮಾಡುವುದಾಗಿದೆ ಎಂದು ತಿಳಿಸಿದ್ದಾರೆ.

**ಟಿ.ಆರ್. ಚಂದ್ರೇಶೇಖರವರು "ಗ್ರಾಮ ಪಂಚಾಯಿತಿ-ಪ್ರಸ್ತುತ ಸಮಸ್ಯೆಗಳು"** ಎಂಬ ಲೇಖನದಲ್ಲಿ ಈ ರೀತಿಯ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮೂರು ಹಂತದ ಪಂಚಾಯಿತಿ

ವ್ಯವಸ್ಥೆ ಮತ್ತು ಆಡಳಿತದ ವಿಕೇಂದ್ರೀಕರಣದಲ್ಲಿ, ರಾಜ್ಯಮಟ್ಟದಿಂದ ಪಂಚಾಯತಿ ರಾಜ್ ಸಂಸ್ಥೆಗಳಿಗೆ ವಹಿಸಿಕೊಡಬೇಕಾದ ಕಾರ್ಯಚಟುವಟಿಕೆಗಳು, ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ಗುರುತಿಸುವುದು, ಪ್ರತಿಯೊಂದು ಹಂತವು ನಿರ್ವಹಿಸಬೇಕಾದ ಪಾತ್ರದ ಎಲ್ಲೆಯನ್ನು ನಿರ್ವಹಿಸುವುದು ಹಾಗೂ ಪ್ರತಿಯೊಂದರ ವ್ಯಾಪ್ತಿಯನ್ನು ಸ್ಪಷ್ಟವಾಗಿ ಗುರುತಿಸುವುದನ್ನು ಒಳಗೊಂಡಿರುತ್ತದೆ. ಪಂಚಾಯತಿಗಳು ತಾವೇ ಸ್ವತಃ ಆಯ್ಕೆಮಾಡಿದ ಕಾರ್ಯ ಚಟುವಟಿಕೆಗಳನ್ನು ಕೈಗೊಳ್ಳುವುದಕ್ಕೆ ಅವುಗಳಿಗೆ ಸಾಕಷ್ಟು ಅವಕಾಶವಿದೆ.

ಪ್ರಸ್ತುತ ತಳಮಟ್ಟದಲ್ಲಿ ಕೆಲಸ ಮಾಡುತ್ತಿರುವ ಆಡಳಿತ ಸಂಸ್ಥೆಗಳ ನಿರ್ವಹಣೆಯು ಗ್ರಾಮ ಪಂಚಾಯತಿಗಳ ವಶದಲ್ಲಿರಬೇಕಾದುದು ಸಹಜ. ಈಗ ಇಂತಹ ಪರಿಸ್ಥಿತಿ ಇಲ್ಲ. ಕುತೂಹಲದ ಸಂಗತಿಯೆಂದರೆ ಅಂಗನವಾಡಿಗಳು ಹಾಗೂ ಪ್ರಾಥಮಿಕ ಶಾಲೆಗಳ ನಿರ್ವಹಣೆ, ಉಸ್ತುವಾರಿ ಜವಾಬ್ದಾರಿಯನ್ನು ಗ್ರಾಮ ಪಂಚಾಯಿತಿಗಳ ವಶಕ್ಕೆ ನೀಡುವ ಕ್ರಮಗಳ ಬಗ್ಗೆ ಸರ್ಕಾರವು ಯೋಚಿಸತೊಡಗಿದ್ದಾಗ, ಎಲ್ಲ ತಳಮಟ್ಟದ ಸಂಸ್ಥೆಗಳು ಇದನ್ನು ವಿರೋಧಿಸ ತೊಡಗಿದವು. ಈ ಕುರಿತು ಚಳುವಳಿಗಳಾದವು. ಸಂವಿಧಾನಾತ್ಮಕ ಮತ್ತು ಜನಪ್ರತಿನಿಧಿ ಸಂಸ್ಥೆಗಳಾದ ಗ್ರಾಮ ಪಂಚಾಯಿತಿಗಳ ಸ್ಥಿತಿ ಇದು. ತಳಮಟ್ಟದ ಆಡಳಿತ ಸಂಸ್ಥೆಗಳು ತಮ್ಮ ನಿರ್ವಹಣೆಯ ಜವಾಬ್ದಾರಿಯನ್ನು ಗ್ರಾಮ ಪಂಚಾಯತಿಗಳಿಗೆ ವಹಿಸುವುದನ್ನು ವಿರೋಧಿಸಲು ಒಂದು ಮುಖ್ಯವಾದ ಕಾರಣವಿದೆ. ಅದೇನೆಂದರೆ ಅವುಗಳ ಹಣಕಾಸು ಸಂಪನ್ಮೂಲಗಳ ಲಭ್ಯತೆ ಹಾಗೂ ಅದರ ಸಮರ್ಪಕ ನಿರ್ವಹಣೆ. ಗ್ರಾಮ ಪಂಚಾಯತಿಗಳಲ್ಲಿ ಸದ್ಯ ಕೆಲಸ ಮಾಡುತ್ತಿರುವ ತೆರಿಗೆ ಸಂಗ್ರಹಗಾರರು ಮತ್ತು ನೀರಿನ ನಿರ್ವಹಣೆ ಮಾಡುವವರಿಗೆ ನಿಯಮಿತವಾಗಿ ಸಂಬಳ ನೀಡುವುದು ಅವುಗಳಿಗೆ ಸಾಧ್ಯವಾಗುತ್ತಿಲ್ಲ. ಇಂತಹ ವಿಷಯಗಳಿಗೆ ಸಂಬಂಧಿಸಿದಂತೆ ಆಡಳಿತಾತ್ಮಕ ನಿಯಮಗಳು ರೂಪಿಸಬಹುದು.

**ಜಯಪ್ರಕಾಶ್ ನಾರಾಯಣರವರ** ಅಭಿಪ್ರಾಯದಂತೆ ಅಭಿವೃದ್ಧಿಯಲ್ಲಿ ರಾಜಕೀಯದ ಪಾತ್ರ ಕುರಿತು ಸ್ಪಷ್ಟಪಡಿಸಬೇಕಾದ ಕಾಲ ಬಂದಿದೆ. ಅಭಿವೃದ್ಧಿಯನ್ನು ಪಕ್ಷ ಆಧಾರಿತ ರಾಜಕೀಯದಿಂದ ಮುಕ್ತಗೊಳಿಸುವುದು ಒಂದು ಉತ್ತಮ ಸಂಗತಿಯಾಗಿದೆ. ಜನರು ಪಕ್ಷ ಆಧಾರಿತ ರಾಜಕೀಯದ ಗೊಂದಲ ಮತ್ತು ಸಲ್ಪಮಟ್ಟಿಗೆ ಅಪ್ರಸ್ತುತ ಒತ್ತಾಯ ಮತ್ತು ನಿರ್ಬಂಧಗಳಿಲ್ಲದೆ ತಾವು ನಂಬಬಹುದಾದಂಥ ವ್ಯಕ್ತಿಗಳನ್ನು ಆಯ್ಕೆ ಮಾಡಲು ಸ್ವತಂತ್ರವಾಗಿರಬೇಕು. ಪಕ್ಷರಹಿತ ಆಧಾರದ ಮೇಲೆ ಎಲ್ಲಾ ಮೂರು ಹಂತಗಳಿಗೆ ಪಂಚಾಯತಿ ರಾಜ್ ಚುನಾವಣೆಗಳನ್ನು ನಡೆಸಲು ಸಾಮಾಜಿಕ ವಾತಾವರಣವು ಅನಾವಶ್ಯಕವಾಗಿ ಕಲುಷಿತಗೊಳ್ಳದಂತೆ ನೋಡಿಕೊಳ್ಳುವುದಕ್ಕೆ ಬಹುದೂರ ಕ್ರಮಿಸಬೇಕಾಗಿದೆ.

**ಡಾ. ಕೆ.ಚಂದ್ರಶೇಖರ್**ರವರ **"ಅಭಿವೃದ್ಧಿ ಪಥದಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು"** ಪುಸ್ತಕದಲ್ಲಿ ಉಲ್ಲೇಖಿಸಿದಂತೆ, ಜಿಲ್ಲಾ ಯೋಜನಾ ಸಮಿತಿಯ ಮುಖ್ಯ ಕಾರ್ಯ ಸ್ಥಳಿಯ

ಸಂಸ್ಥೆಗಳ ಸಹಭಾಗಿತ್ವದೊಂದಿಗೆ ಯೋಜಿತ ಅಭಿವೃದ್ಧಿಯನ್ನು ಸ್ಥಾಪಿಸುವುದಾಗಿದೆ. ಪ್ರತಿಯೊಂದು ಗ್ರಾಮ ಪಂಚಾಯತಿ ಹಾಗೂ ನಗರ ಸ್ಥಳೀಯ ಸಂಸ್ಥೆಯನ್ನು ಜಿಲ್ಲಾ ಯೋಜನೆಯ ಕೇಂದ್ರ ಬಿಂದುವಾಗಿ ಪರಿಗಣಿಸಬೇಕು. ಪ್ರತಿಯೊಂದು ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಯೇ ಜಿಲ್ಲಾ ಯೋಜನೆಯ ಗುರಿಯಾಗಬೇಕು. ಸ್ಥಳೀಯ ಆರ್ಥಿಕ ಸಂಪೂನ್ಮೂಲಗಳನ್ನು ಗಣನೆಗೆ ತೆಗೆದುಕೊಂಡು ಮಾನವ ಸಂಪನ್ಮೂಲವನ್ನು ಜೊತೆಗೂಡಿಸಿ, ಸ್ಥಳೀಯ ಸಮಸ್ಯೆಗಳಿಗೆ ಸ್ಪಂದಿಸುವ ರೀತಿಯಲ್ಲಿ ಯೋಜನೆಯನ್ನು ಸಿದ್ಧಪಡಿಸಿ ಸ್ಥಳೀಯ ಸರ್ಕಾರಗಳ ಮೂಲಕ ಪರಿಹಾರ ಕಂಡುಕೊಳ್ಳವುದೇ ಜಿಲ್ಲಾ ಸಮಿತಿಯ ಯೋಜನೆಯ ಗುರಿಯಾಗಿದೆ.

ಪರಿಣಾಮಕಾರಿ ಮತ್ತು ದಕ್ಷವಾಗಿ ಕಾರ್ಯ ನಿರ್ವಹಿಸುವಲ್ಲಿ ಇದರ ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ನಿರ್ದಿಷ್ಟಪಡಿಸಿದ ವಿಷಯಗಳನ್ನು ವಿಷದೀಕರಿಸಬೇಕು. ಸರ್ಕಾರದ ವಿವಿಧ ಇಲಾಖೆಗಳು, ವಿವಿಧ ಕಾರ್ಯಕ್ರಮಗಳು, ಯೋಜನೆಗಳು ಮತ್ತು ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಪ್ರತ್ಯೇಕವಾದ ಯೋಜನೆಗಳನ್ನು ಸಿದ್ಧಪಡಿಸಿ ಜಾರಿಗೆ ತರುವುದು ಇವೇ ಮೊದಲಾದ ಇನ್ನಿತರ ಉದ್ದೇಶಗಳನ್ನು ಪ್ರಸ್ತಾಪಿಸಲಾಗಿದೆ. ಜಿಲ್ಲಾ ಯೋಜನಾ ಸಮಿತಿ ರಚಿಸಲು ಹಾಗೂ ಸಭೆ ಸೇರಲು ನಗರ ಅಥವಾ ಗ್ರಾಮೀಣ ಸ್ಥಳೀಯ ಸರ್ಕಾರಗಳು ಏಕಕಾಲದಲ್ಲಿ ರಚನೆಗೊಂಡಿರಬೇಕು. ಆದರೆ, ಕೆಲವೊಂದು ಸಂದರ್ಭದಲ್ಲಿ ನಗರ ಮತ್ತು ಗ್ರಾಮೀಣ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆಗಳು ಬೇರೆ-ಬೇರೆ ಕಾಲದಲ್ಲಿ ನಡೆಯುತ್ತಿರುವುದರಿಂದ, ಏಕಕಾಲದಲ್ಲಿ ಜಿಲ್ಲಾ ಯೋಜನಾ ಸಮಿತಿ ರಚನೆಯಾಗಲು ಅಡಚಣೆಯಾಗಿದೆ. ಈ ಸಮಿತಿಯಲ್ಲಿ ತಾಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯಿತಿ ಸದಸ್ಯರುಗಳಿಗೆ ಪ್ರಾತಿನಿಧ್ಯವಿರುವುದಿಲ್ಲ. ನಗರ ಯೋಜನೆಗೆ ಸಂಬಂಧಿಸಿದಂತೆ ಪ್ರತ್ಯೇಕ ನಗರ ಘಟಕ ರಚಿಸಬೇಕು. ಆದರೆ ವಾಸ್ತವಿಕವಾಗಿ ಅದು ಕ್ರಿಯಾಶೀಲವಾಗಿ ಕೆಲಸಮಾಡುತ್ತಿಲ್ಲ ಎಂದು ಉಲ್ಲೇಖಿಸಿದ್ದಾರೆ.

ಇದಕ್ಕೆ ಪ್ರಮುಖ ಕಾರಣಗಳು -ಜನ ಪ್ರತಿನಿಧಿ ಮತ್ತು ಅಧಿಕಾರಿಗಳು ಆಸಕ್ತಿ, ಪ್ರೋತ್ಸಾಹ ನೀಡದೇ ಇರುವುದು; ಯೋಜನೆಗಳ ಮೌಲ್ಯಮಾಪನ ಮತ್ತು ವಿಶೇಷ ಅಧ್ಯಯನಗಳು ಬಗ್ಗೆ ಸೂಕ್ತ ಅರಿವು ಅಥವಾ ಜ್ಞಾನದ ಕೊರತೆ ಇರುವುದು ಎಂದು ಪ್ರಸ್ತಾಪಿಸಲಾಗಿದೆ.

ಇದರ ಕಾರ್ಯಾನುಷ್ಠಾನಕ್ಕಾಗಿ ಪ್ರಮುಖ ಸಲಹೆಗಳನ್ನು ಅಧ್ಯಯನದಲ್ಲಿ ನೀಡಲಾಗಿದೆ. ಅವುಗಳೆಂದರೆ ಸ್ಥಳೀಯ ಸಂಸ್ಥೆಗಳು ತಮ್ಮ ಕಾರ್ಯಕ್ರಮಗಳನ್ನು ನಿರ್ದಿಷ್ಟ ಕಾಲದಲ್ಲಿ ನಿಯಮಾನುಸಾರವಾಗಿ ಅನುಷ್ಠಾನಗೊಳ್ಳುವಂತೆ ಯೋಜನೆಗಳನ್ನು ಸಿದ್ಧಪಡಿಸಲು ಕ್ರಮ ವಹಿಸುವುದು; ಯೋಜನೆಯನ್ನು ರೂಪಿಸುವುದು ಮಾತ್ರವಲ್ಲದೆ ಯೋಜನೆಯ ಅನುಷ್ಠಾನ ಮತ್ತು ಪ್ರಗತಿ ಕುರಿತು ಪರಿಶೀಲಿಸುವ ಅಥವಾ ವಿಮರ್ಶಿಸುವ ಅಧಿಕಾರ ಹೊಂದಿರಬೇಕು;

ರಾಜ್ಯ ಯೋಜನಾ ಮಂಡಳಿಗಳು ತಾವು ಸಿದ್ಧಪಡಿಸಿದ ಯೋಜನೆಗಳಿಗೆ ಜಿಲ್ಲಾ ಯೋಜನೆಗಳನ್ನು ಸಮನ್ವಯಗೊಳಿಸುವ ಕುರಿತು ಖಚಿತಪಡಿಸಿಕೊಳ್ಳಬೇಕು; ಕೆಳಹಂತದಲ್ಲಿ ಯೋಜನೆಗಳನ್ನು ಸಿದ್ಧಪಡಿಸಿದ ನಂತರವೇ ರಾಜ್ಯ ಸರ್ಕಾರವು ತನ್ನ ಯೋಜನೆಗಳನ್ನು ಸಿದ್ಧಪಡಿಸುವುದು ಸೂಕ್ತ; ಸ್ಥಳೀಯ ಆದ್ಯತಾ ಪಟ್ಟಿಗಳನ್ನು ವೈಜ್ಞಾನಿಕವಾಗಿ ಸಿದ್ಧಪಡಿಸಿ ತಾಂತ್ರಿಕತೆಗೊಳಿಸುವುದು; ಜಿಲ್ಲಾ ಯೋಜನಾ ಸಮಿತಿಯ ಸಭಾ ಕಲಾಪದ ನಿಯಮಗಳು ಪ್ರಸ್ತಾವನೆಯನ್ನು ಯೋಜನಾ ಇಲಾಖೆಯು ಸಿದ್ಧಪಡಿಸಿ, ರಾಜ್ಯ ಯೋಜನಾ ಆಯೋಗಕ್ಕೆ ಕಳುಹಿಸಬೇಕು, ನಂತರ ಅನುಮೋದನೆ ಪಡೆಯಬೇಕು; ಕೇರಳ ರಾಜ್ಯದಲ್ಲಿ ಜಾರಿಯಲ್ಲಿರುವ ಜಿಲ್ಲಾ ಯೋಜನಾ ಸಮಿತಿಯನ್ನು ಮಾದರಿಯನ್ನಾಗಿ ಅನುಸರಿಸಬೇಕು ಹಾಗೂ ಸ್ಥಳೀಯ ಸಂಸ್ಥೆಗಳ ಸಂಗ್ರಹಣೆಯಲ್ಲಿ ಸಂಪನ್ಮೂಲಗಳನ್ನು ಸಮರ್ಥವಾಗಿ ಸ್ಥಳೀಯ ಜನರ ಹಿತಾಸಕ್ತಿಯ ಅನುಸಾರವಾಗಿ ಸದುಪಯೋಗಪಡಿಸಿಕೊಳ್ಳಬೇಕು.

**ಡಾ. ಕೆ. ಚಂದ್ರಶೇಖರರವರ 'ಅಭಿವೃದ್ಧಿ ಪಥದಲ್ಲಿ ಅಧಿಕಾರಿಗಳು ಮತ್ತು ಜನತೆ ಪಾತ್ರ'**[೬] ಎಂಬ ಲೇಖನದಲ್ಲಿ ಒಂದು ಯೋಜನೆಯನ್ನು ಪರಿಣಾಮಕಾರಿಯಾಗಿ ರೂಪಿಸಲು ಮಾನವ ಸಂಪನ್ಮೂಲದ ಪೂರೈಕೆಗೆ ಹಣಕಾಸಿನ ಸಂಪನ್ಮೂಲ ಅತ್ಯವಶ್ಯಕವಾಗಿದ್ದು, ಯಾವುದೇ ಯೋಜನೆಗಳು ಸ್ಥಳೀಯವಾಗಿ ಅನುಷ್ಠಾನಗೊಳ್ಳಲು ಅಧಿಕಾರ ಮತ್ತು ಜವಾಬ್ದಾರಿಗಳನ್ನು ಜನರಿಗೆ ಹಾಗೂ ಸಮುದಾಯಗಳಿಗೆ ವರ್ಗಾವಣೆಮಾಡಲು ಸೂಕ್ತ ಅವಕಾಶಗಳನ್ನು ಕಲ್ಪಿಸಿಕೊಡಬೇಕು. ಯೋಜನೆ ಮತ್ತು ಅನುಷ್ಠಾನದಲ್ಲಿ ಲೋಪದೋಷಗಳನ್ನು ಅವರು ಗುರುತಿಸಿದ್ದಾರೆ. ಕಾರ್ಯ ಯೋಜನೆಗಳನ್ನು ಜಾರಿಗೆ ತರುವಲ್ಲಿ ಭ್ರಷ್ಟಾಚಾರ, ಅಧಿಕಾರದ ದುರುಪಯೋಗ, ದುರ್ಬಲ ವರ್ಗಗಳ ಕಾರ್ಯಕ್ರಮಗಳಿಗೆ ನಿಗದಿಯಾದ ಹಣಕಾಸನ್ನು ವಿನಿಯೋಗಿಸುವಂತಹ ಹಲವಾರು ಸಂಸ್ಥೆಗಳಲ್ಲಿ ಸಮನ್ವಯತೆ ಮತ್ತು ಕೇಂದ್ರಿಕೃತವಾದ ಪ್ರಯತ್ನದ ಕೊರತೆಯನ್ನು ಕಾಣುತ್ತೇವೆ. ಹಣಕಾಸು ಸಂಸ್ಥೆಗಳು, ಅಭಿವೃದ್ಧಿಪರ ಆಡಳಿತಗಾರರು ಹಾಗೂ ಇತರ ಸಾಂಸ್ಥಿಕ ಹಣಕಾಸಿನ ಸಂಸ್ಥೆಗಳ ಮುಖಾಂತರ ಸಾಲ ನೀಡಿಕೆಯ ಮಹತ್ವವನ್ನು ಸಕಾಲಿಕವಾಗಿ ಅರ್ಥಮಾಡಿಕೊಳ್ಳಲು ವಿಫಲವಾಗಿರುವಂತೆ ಕಾಣುತ್ತದೆ. ಈ ನಿಟ್ಟಿನಲ್ಲಿ ರಾಜ್ಯ ಹಣಕಾಸು ಆಯೋಗ ಸಕ್ರೀಯವಾಗಿ ಹಾಗೂ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಬೇಕಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**೨೦೦೫ರ ಕರ್ನಾಟಕ ಮಾನವ ಅಭಿವೃದ್ಧಿ ವರದಿಯ ಹಣಕಾಸು ನಿಯೋಜನೆಯ ತತ್ವಗಳಲ್ಲಿ ಎಂ. ಗೋವಿಂದರಾವ್** ವಿವರಿಸುವಂತೆ[೭] ವಿಕೇಂದ್ರೀಕೃತ ಸರ್ಕಾರಗಳು ಅನೇಕ ನಿಯೋಜಿತ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಬೇಕಾಗಿರುವುದರಿಂದ ಮತ್ತು ಅವುಗಳನ್ನು ದಕ್ಷತೆಯಿಂದ ನಿರ್ವಹಿಸಬೇಕಾಗಿ ಇರುವುದರಿಂದ ಅವುಗಳಿಗೆ ನಿಯೋಜಿಸುವ ಹಣಕಾಸು ಸಂಪನ್ಮೂಲವು ಕೂಡ ಸಾಕಷ್ಟಿರಬೇಕಾಗುತ್ತದೆ. ಪಂಚಾಯತಿಗಳು ಮತ್ತು ನಗರ ಸ್ಥಳೀಯ

ಸರ್ಕಾರಗಳಿಗೆ ರಾಜ್ಯ ಸಂಪನ್ಮೂಲದಿಂದ ಎಷ್ಟು ಪ್ರಮಾಣ ನಿಯೋಜಿಸಲ್ಪಡಬೇಕು ಎಂಬುದನ್ನು ನಿಗದಿಪಡಿಸುವ ಅಧಿಕಾರವನ್ನು ಸಂವಿಧಾನದ ೭೩ನೇ ತಿದ್ದುಪಡಿ ಕಾಯ್ದೆಯ ೨೪೩-೧ ಪರಿಚ್ಛೇದವು ರಾಜ್ಯ ಹಣಕಾಸು ಸಮಿತಿಗಳಿಗೆ (ಎಸ್.ಎಫ್.ಸಿ) ನೀಡಿದೆ. ಸೈದ್ಧಾಂತಿಕವಾಗಿ ರಾಜ್ಯ ಸರ್ಕಾರದಿಂದ ವಿಕೇಂದ್ರೀಕೃತ ಸರ್ಕಾರಗಳಿಗೆ ಹಣಕಾಸು ಸಂಪನ್ಮೂಲದ ವರ್ಗಾವಣೆ ಎರಡು ರೀತಿಯಲ್ಲಿ ನಡೆಯುತ್ತದೆ ೧) ಸಾಮಾನ್ಯ ಉದ್ದೇಶದ ವರ್ಗಾವಣೆ ಮತ್ತು ೨) ನಿರ್ದಿಷ್ಠ ಉದ್ದೇಶಕ್ಕಾಗಿ ಅನುದಾನದ ವರ್ಗಾವಣೆ.

ಹಿಂದುಳಿದ ಪ್ರದೇಶಗಳಲ್ಲಿ ಲಭ್ಯವಿರುವ ಅಭಿವೃದ್ಧಿ ಸಾಮರ್ಥ್ಯವನ್ನು ಬಳಸಿಕೊಳ್ಳಲು ಮತ್ತು ಅಭಿವೃದ್ದಿಗತಿಯನ್ನು ಉನ್ನತಮಟ್ಟಕೇರಿಸಲು ಮುಂದುವರಿದ ಪ್ರದೇಶಗಳಲ್ಲಿ ಯಾವ ಪ್ರಮಾಣದ ಮೂಲ ಸೌಲಭ್ಯಗಳವಿಯೋ, ಅಷ್ಟು ಪ್ರಮಾಣದ ಮೂಲ ಸೌಲಭ್ಯವನ್ನು ಒದಗಿಸಲು ಅಗತ್ಯವಾದ ಸಂಪನ್ಮೂಲವನ್ನು ಸ್ಥಳೀಯವಾಗಿ ಕ್ರೋಡೀಕರಿಸಲು ಅಗತ್ಯವಾದ ವಿತ್ತೀಯ ಸಾಮರ್ಥ್ಯದ ಕೊರತೆಯನ್ನು ತುಂಬಿಕೊಡುವುದು ಮೊದಲ ವಿಧಾನದ ಗುರಿಯಾಗಿದ್ದರೆ, ಎರಡನೇಯ ವಿಶೇಷ ಉದ್ದೇಶದ ವರ್ಗಾವಣೆಯು ವರ್ಗಿಯ ಸಮಾನತೆಗಾಗಿ ಅಥವಾ **"ಸಂಪತ್ತು ತಟಸ್ಥ"** (ಇದು ಪಾವತಿ ಮಾಡುವ ಸಾಮರ್ಥ್ಯಕ್ಕೆ ಸಂಬಂಧ ಹೊಂದಿಲ್ಲ) ವಿಷಯಗಳಾದ ಶೈಕ್ಷಣಿಕ, ಆರೋಗ್ಯ, ನೈರ್ಮಲ್ಯ, ಗ್ರಾಮೀಣ ರಸ್ತೆಗಳು ಮುಂತಾದವುಗಳನ್ನು ಒದಗಿಸುವ ಗುರಿಯನ್ನು ಹೊಂದಿದೆ.

**ಕರ್ನಾಟಕದಲ್ಲಿ ಹಣಕಾಸು ವಿಕೇಂದ್ರೀಕರಣ ಕುರಿತಂತೆ ಅಮರನಾಥ ಮತ್ತು ವಾಣಿ (೨೦೦೪) ಕೈಗೊಂಡ ಅಧ್ಯಯನದಲ್ಲಿ, ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ ೧೯೯೩**ರಲ್ಲಿ ಗ್ರಾಮ ಪಂಚಾಯತಿಗಳಿಗೆ ೩೧ ಕಾರ್ಯ ಚಟುವಟಿಕೆಗಳನ್ನು, ತಾಲೂಕು ಪಂಚಾಯಿತಿಗೆ ೨೮ ಕಾರ್ಯ ಚಟುವಟಿಕೆಗಳನ್ನು ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ೨೯ ಕಾರ್ಯ ಚಟುವಟಿಕೆಗಳನ್ನು ಪಟ್ಟಿ ಮಾಡಿದೆ. ವಾಸ್ತವವಾಗಿ ಕಾರ್ಯಚಟುವಟಿಕೆಗಳನ್ನು ನಿರ್ದಿಷ್ಟವಾಗಿ ನಿರ್ಧರಿಸುವ ಪ್ರಕ್ರಿಯೆಯು ಯೋಜನೆಗಳು ಒಳಗೊಳ್ಳುವ ಅನೇಕ ಸಂಗತಿಗಳನ್ನು ವರ್ಗಾಯಿಸುವ ಮೂಲಕ 'ಜಿಲ್ಲಾ ವಲಯವನ್ನು' ರೂಪಿಸಲಾಗುತ್ತದೆ. ಮತ್ತು ಅವುಗಳ ಅನುಷ್ಠಾನಕ್ಕೆ ಅವುಗಳನ್ನು ೩ ಹಂತದ ಪಂಚಾಯತಿಗಳಿಗೆ ನಿಯೋಜಿಸಬೇಕಾಗುತ್ತದೆ. ಆದರೆ, ಹಣಕಾಸು ಸ್ಥಿತಿಗತಿಯ ಬಿಕ್ಕಟ್ಟಿನಿಂದಾಗಿ ಹಣಕಾಸು ಸಂಪನ್ಮೂಲದ ವರ್ಗಾವಣೆಯು ಪೂರ್ಣವಾಗಿ ನಡೆಯಲಿಲ್ಲ. ಅಂದರೆ 'ಲಿಂಕ್ ಡಾಕ್ಯೂಮೆಂಟ್‌ನಲ್ಲಿನ' (ರಾಜ್ಯ ಸರ್ಕಾರವು ಪ್ರತಿ ವರ್ಷ ತನ್ನ ಬಜೆಟ್ ಅಂದಾಜನ್ನು ಆಧರಿಸಿ ಸಿದ್ಧಪಡಿಸುವ ಜಿಲ್ಲಾ ತಾಲೂಕು ಮತ್ತು ಗ್ರಾಮ ಪಂಚಾಯತಿ ಕಾರ್ಯಕ್ರಮಗಳನ್ನು ಒಳಗೊಂಡಿರುತ್ತದೆ). ಮಾಹಿತಿ ಪ್ರಕಾರ ಪಂಚಾಯತಿಗಳು ನಿರ್ವಹಿಸುವ ವೆಚ್ಚವು ರಾಜ್ಯ ಸರ್ಕಾರದ ಒಟ್ಟು ವೆಚ್ಚದ ಶೇ ೨೧.೮ರಷ್ಟಿತ್ತು. ಅಥವಾ ೨೦೦೧-೦೨ರಲ್ಲಿ ಅದು ಒಟ್ಟು ರಾಜ್ಯ ಆಂತರಿಕ ಉತ್ಪನ್ನದ (ಜಿ.ಎಸ್.ಡಿ.ಪಿ) ಶೇ. ೫% ರಷ್ಟಿತ್ತು.

ಈ ಪಂಚಾಯತಿಗಳ ವೆಚ್ಚದಲ್ಲಿ ಸಿಂಹಪಾಲು ಯೋಜನೇತರ ಬಾಬ್ತುಗಳಿಗೆ ಹೋಗುತ್ತದೆ. ಯೋಜನಾ ವೆಚ್ಚದ ಪಾಲು ೨೦೦೧-೦೨ರಲ್ಲಿ ಶೇ, ೩೮% ರಷ್ಟಿತ್ತು. ಮತ್ತು ೨೦೦೨-೦೩ರಲ್ಲಿ ಅದು ಶೇ. ೨೭.೪ಕ್ಕೆ ಇಳಿಯಿತು. ಅನೇಕ ವಲಯಗಳಲ್ಲಿ ಸಿಬ್ಬಂದಿಯ ವೇತನಕ್ಕೆ ಸಾಕಾಗುವಷ್ಟು ಸಂಪನ್ಮೂಲ ದೊರೆಯುವ ಸ್ಥಿತಿ ಮಾತ್ರ ಇದೆ. ಈ ಎಲ್ಲಾ ವಲಯದ ವೆಚ್ಚದಲ್ಲಿ ಗ್ರಾಮ ಪಂಚಾಯತಿಗಳ ಪಾಲು ಕೇವಲ ೫ ರಷ್ಟಿದೆ. ಮತ್ತು ರಾಜ್ಯ ಸರ್ಕಾರದ ಒಟ್ಟು ವೆಚ್ಚದಲ್ಲಿ ಶೇ. ೧ ಕ್ಕಿಂತ ಸ್ವಲ್ಪ ಹೆಚ್ಚಿದೆ. ಗ್ರಾಮ ಪಂಚಾಯತಿಗಳಿಗೆ ಹೆಚ್ಚು ಕಾರ್ಯ ಯೋಜನೆಗಳನ್ನು ೨೦೦೫ರಲ್ಲಿ ವರ್ಗಾಯಿಸಿದ ಮೇಲೆ ಪರಿಸ್ಥಿತಿ ಮಾತ್ರ ಬದಲಾಗಲು ಸಾಧ್ಯವಾಯಿತು.

ಗ್ರಾಮೀಣ ಪ್ರದೇಶದ ಜನರ ಆಕ್ಷೇಪಗಳಿಗನುಗುಣವಾಗಿ ಸಾರ್ವಜನಿಕ ಸೇವೆಯನ್ನು ಒದಗಿಸುವಂತೆ ಸ್ಥಳೀಯ ಸರ್ಕಾರಗಳನ್ನು ಕರ್ನಾಟಕ ಹಣಕಾಸು ವಿಕೇಂದ್ರೀಕರಣವು ಸಬಲಗೊಳಿಸಿದೆಯೇ? ಗ್ರಾಮೀಣ ಸ್ಥಳೀಯ ಸರ್ಕಾರಗಳು ಅನುಷ್ಠಾನಗೊಳಿಸುತ್ತಿರುವ ೩೦ ಪ್ರಧಾನ ಯೋಜನೆಗಳ ಹಣಕಾಸು ಸಂಪನ್ಮೂಲವನ್ನು ಬಿಡಿಯಾಗಿ ವಿಶ್ಲೇಷಿಸಿ ನೋಡಿದಾಗ ಅವುಗಳಿಗೆ ಆದ್ಯತೆಗಳಿಗನುಗುಣವಾಗಿ ಹಣಕಾಸು ಸಂಪನ್ಮೂಲವನ್ನು ವಿತರಿಸಲು ಸ್ವಯತ್ತತೆಯಾಗಲಿ ಅಥವಾ ಅವಕಾಶಗಳಾಗಲಿ ಇಲ್ಲದಿರುವುದು ತಿಳಿಯುತ್ತದೆ.

ಈ ನಿಟ್ಟಿನಲ್ಲಿ ಪಂಚಾಯತ್ ರಾಜ್ಯ ಸಂಸ್ಥೆಗಳು ಹೆಚ್ಚಿನ ಗಮನ ನೀಡಬೇಕೆಂದರೆ ಹಣಕಾಸು ವಿಕೇಂದ್ರೀಕರಣ ರೂಪರೇಷಗಳಲ್ಲಿ ಸಾಕಷ್ಟು ಬದಲಾವಣೆಯಾಗಬೇಕು ಎಂಬುದನ್ನು ಒತ್ತಿ ಹೇಳುತ್ತದೆ

**ಡಾ. ಅಬ್ದುಲ್ ಅಜೀಜ್‌ರವರ ಲೇಖನ "ಎಂಪವರಿಂಗ್ ಪಂಚಾಯತಿ ರಾಜ್ ಇನ್ಸಿಟ್ಯೂಶನ್ಸ್":ಎ ಸ್ಟಡಿ ಇನ್ ಕರ್ನಾಟಕ್**‌ದಲ್ಲಿ ಹಣಕಾಸಿನ ವಿಕೇಂದ್ರೀಕರಣ ಕುರಿತಂತೆ ಕೇರಳ ಮತ್ತು ಕರ್ನಾಟಕ ರಾಜ್ಯಗಳ ಸ್ಥಳೀಯ ಸರ್ಕಾರಗಳಲ್ಲಿ ಹಣಕಾಸಿನ ವಿಕೇಂದ್ರೀಕರಣದ ಬಗ್ಗೆ ತೌಲನಿಕ ಅಧ್ಯಯನ ನಡೆಸಿ ಈ ಕೆಳಕಂಡ ತೀರ್ಮಾನಕ್ಕೆ ಬಂದಿದ್ದಾರೆ. ಪಂಚಾಯತ್ ರಾಜ್ ಸಂಸ್ಥೆಗಳ ವಿಕೇಂದ್ರೀಕೃತ ಯೋಜನೆಯ ಪ್ರಾಥಮಿಕ ಉದ್ದೇಶವೆಂದರೆ ಸ್ಥಳೀಯ ಅಗತ್ಯಗಳನ್ನು ಮತ್ತು ಅವುಗಳ ಆದ್ಯತೆ ಪ್ರಕಾರ ಯೋಜನೆಗಳನ್ನು ರೂಪಿಸುವುದು ಮತ್ತು ಜಾರಿಗೆ ತರುವುದು. ಈ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವಹಿಸುವರೆಂದರೆಶ್ರೀ ಸಾಮಾನ್ಯರು. ಈ ಸಂಸ್ಥೆಗಳಿಗೆ ವಿಕೇಂದ್ರೀಕೃತ ಸರಕಾರವನ್ನು ಶಕ್ತಿಯುತಗೊಳಿಸಲು ತಮ್ಮ ಪ್ರಾತವನ್ನು ನಿರ್ವಹಿಸುತ್ತದೆ. ನಿರ್ಣಾಯಕ ಕ್ರಿಯೆಗಳಲ್ಲಿ ಜನರ ಭಾಗವಹಿಸುವಿಕೆಯನ್ನು ಪ್ರೇರೇಪಿಸುವ, ಸ್ಥಳೀಯ ಸರ್ಕಾರಗಳಿಗೆ ಸಂಬಂಧಿಸಿದ ಹಲವಾರು ವಿಷಯ, ಯೋಜನೆಗಳ ಮಾಹಿತಿಯನ್ನು ಜನರಿಗೆ ಒದಗಿಸುವ ಮತ್ತು ಮನೋಭಾವಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಒದಗಿಸುವಲ್ಲಿ ವಿಕೇಂದ್ರೀಕೃತ ಸರ್ಕಾರ ಚೈತನ್ಯ ನೀಡುವ ಪಾತ್ರವನ್ನು ಈ ಸಂಸ್ಥೆಗಳು

ನಿರ್ವಹಿಸುತ್ತಿವೆ. ಈ ನಿಟ್ಟಿನಲ್ಲಿ ಕೇರಳ ಸರ್ಕಾರ ಒಂದು ಹೆಜ್ಜೆ ಮುಂದಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು.

**ಎಂ. ಚಂದ್ರಪೂಜಾರಿಯವರ "ಕರ್ನಾಟಕದ ಪಂಚಾಯತ್ ರಾಜ್ ಸಮಸ್ಯೆ ಮತ್ತು ಪರಿಹಾರಗಳು"**[೧೦] ಪುಸ್ತಕದಲ್ಲಿ ಹಣಕಾಸಿನ ವಿಕೇಂದ್ರೀಕರಣ ಕುರಿತಂತೆ ಈ ಕೆಳಕಂಡಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಪಂಚಾಯತಿಗಳು ಹಣಕಾಸಿನ ಸಮಸ್ಯೆಗಳನ್ನು ಪರಿಹರಿಸಲು ಪ್ರತಿ ರಾಜ್ಯ ಸರ್ಕಾರ ಕೂಡ ರಾಜ್ಯ ಹಣಕಾಸು ಆಯೋಗಗಳನ್ನು ನೇಮಿಸಬೇಕೆಂದು ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿ ಶಿಫಾರಸ್ಸು ಮಾಡಿದೆ. ಸಂವಿಧಾನದ ತಿದ್ದುಪಡಿಯ ಆಶಯವನ್ನು ಈಡೇರಿಸುವ ಭರವಸೆಯನ್ನು ಕರ್ನಾಟಕ ಪಂಚಾಯತಿ ರಾಜ್ ಅಧಿನಿಯಮ ೧೯೯೩ ನೀಡಿದೆ. ಪ್ರತಿ ಐದು ವರ್ಷಗಳಿಗೊಮ್ಮೆ ಹಣಕಾಸು ಆಯೋಗವನ್ನು ಸಂಘಟಿಸಲಾಗುವುದು. ಇದರ ಪ್ರಮುಖ ಉದ್ದೇಶ ೩ ಹಂತಗಳ ಪಂಚಾಯತಿಗಳ ಹಣಕಾಸಿನ ಸ್ಥಿತಿಗಳನ್ನು ಪರಮಾರ್ಶೆ ಮಾಡಲು ಸ್ಥಾಯಿ ಸಮಿತಿಗಳು ಸಕ್ರಿಯವಾಗಿ ಕೆಲಸ ಮಾಡುತ್ತಿವೆ. ಕರ್ನಾಟಕದಲ್ಲಿ ಪಂಚಾಯತಿ ರಾಜ್ ವ್ಯವಸ್ಥೆ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸಬೇಕಾದರೆ ತಳಸ್ತರದ ಸಂಸ್ಥೆಗಳು ಎಲ್ಲಾ ವಿಧಗಳಿಂದಲೂ ಸಶಕ್ತಕರಣಗೊಳ್ಳಬೇಕು. ವಿಕೇಂದ್ರೀಕೃತ ಪ್ರಜಾಪ್ರಭುತ್ವ ಜಾರಿಗೆ ಬರಬೇಕಾದರೆ ಪಂಚಾಯತಿಗಳು ತಮ್ಮ ಬೇಕು-ಬೇಡಗಳನ್ನು, ಆದ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಯೋಜನೆಗಳನ್ನು ಸಿದ್ದಪಡಿಸಬೇಕು ಮತ್ತು ಅವುಗಳನ್ನು ಕಾರ್ಯರೂಪಕ್ಕೆ ತರಬೇಕು.

ಮುಂದುವರಿದು, ಈ ನಿಟ್ಟಿನಲ್ಲಿಯೇ ತಳಮಟ್ಟದಿಂದ ಯೋಜನೆ ಸಿದ್ದಪಡಿಸಲು ಅನುಕೂಲವಾಗಲೆಂದು ಸಂವಿಧಾನದ ೭೩ನೇ ತಿದ್ದುಪಡಿಯಲ್ಲಿ ಪಂಚಾಯತಿಗೆ ಸಂಬಂಧಿಸಿದ ೨೯ ಪ್ರಕಾರ್ಯಗಳನ್ನು ಪಂಚಾಯತಿಗೆ ವರ್ಗಾಯಿಸಬೇಕೆಂದು ಸೂಚಿಸಲಾಗಿದೆ. ೨೯ ಪ್ರಕಾರ್ಯಗಳನ್ನು ಪಂಚಾಯತಿಗೆ ವರ್ಗಾಯಿಸಿ ಸಂವಿಧಾನದ ಆಶಯವನ್ನು ಗೌರವಿಸಿದ ಕೆಲವೇ ಕೆಲವು ರಾಜ್ಯಗಳಲ್ಲಿ ಕರ್ನಾಟಕವೂ ಸೇರಿದೆ.[೧೧] ಇವು ರಾಜ್ಯ ಮಟ್ಟದಿಂದ ಜಿಲ್ಲಾ ಮಟ್ಟಕ್ಕೆ ತಲುಪಿದೆ. ಅಲ್ಲಿಂದ ಮುಂದಕ್ಕೆ ಹೋಗಿಲ್ಲ. ಈ ಪ್ರಕಾರ್ಯಗಳನ್ನು ಜಾರಿಗೆ ತರಬೇಕಾಗಿರುವ ಆಡಳಿತಾಂಗ ಹಾಗೂ ಹಣಕಾಸುಗಳ ತೀರ್ಮಾನ ಇನ್ನೂ ರಾಜ್ಯ ಮಟ್ಟದಲ್ಲಿಯೇ ನಡೆಯುತ್ತಿದೆ. ಪಂಚಾಯತಿ ಮಟ್ಟದಲ್ಲಿ ಸುಮಾರು ೪೫೦ಕ್ಕಿಂತಲೂ ಹೆಚ್ಚಿನ ಅಭಿವೃದ್ಧಿ ಕಾರ್ಯಕ್ರಮಗಳು ಕಾರ್ಯರೂಪಕ್ಕೆ ಬರುತ್ತವೆ. ಅವುಗಳಲ್ಲಿ ಒಂದೆರಡು ಬಿಟ್ಟರೆ ಉಳಿದ ಎಲ್ಲಾ ಕಾರ್ಯಕ್ರಮಗಳು ಕೇಂದ್ರ ಮತ್ತು ರಾಜ್ಯ ಮಟ್ಟದಲ್ಲಿಯೇ ನಿರ್ಧಾರವಾಗುತ್ತವೆ. ಈ ಕಾರ್ಯಕ್ರಮಗಳ ನ್ಯೂನತೆಯನ್ನು ರಾಜ್ಯ ಸರ್ಕಾರವೇ ನೇಮಿಸಿದ ವರ್ಕಿಂಗ್ ಗ್ರೂಫ್ ಆನ್ ಡಿಸೆಂಟ್ರ ಲೈಸೇಶನ್" ಕೂಡ ಪಟ್ಟಿ ಮಾಡಿದೆ. ಅದರ ಪ್ರಕಾರ ಒಂದೇ ಉದ್ದೇಶ ಹಾಗೂ ಕಾರ್ಯಗಳನ್ನು ಹೊಂದಿರುವ

ಹಲವಾರು ಕಾರ್ಯಕ್ರಮಗಳಿವೆ. ಅವುಗಳಲ್ಲಿ ಕೆಲವೇ ಕೆಲವು ವಿಷಯಗಳಿಗೆ ಒಟ್ಟು ಬಜೆಟ್‌ನ ಮೂರನೇ ಒಂದರಷ್ಟು ಅನುದಾನ ಪಡೆದರೆ ಉಳಿದ ಬಹುತೇಕ ಕಾರ್ಯಕ್ರಮಗಳು ಕನಿಷ್ಠ ಅನುದಾನವನ್ನು ಪಡೆಯುತ್ತಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಅಬ್ದುಲ್ ಅಜೀಜ್‌ರವರು ಡಿಸೆಂಟ್ರಲೇಜೀಶನ್ಡ್ ಗವರ್ನನ್ಸ್‌ಡ್ ಇನ್ ಏಷಿಯಾ ಕಂಟ್ರಿಸ್**[೨] ಎಂಬ ಲೇಖನದಲ್ಲಿ ಪಂಚಾಯತಿಗಳ ಹಣಕಾಸಿನ ಸಂಪನ್ಮೂಲಗಳ ಬಗ್ಗೆ ಸಮಸ್ಯೆಗಳನ್ನು ವ್ಯಕ್ತಪಡಿಸಿದ್ದಾರೆ. ಪ್ರಸ್ತುತ ಹಣಕಾಸು ಸಂಪನ್ಮೂಲಕ್ಕೆ ಸಂಬಂಧಸಿದಂತೆ ಗ್ರಾಮ ಪಂಚಾಯತಿಗಳಿಗೆ ದೊರೆತಿರುವ ಅಧಿಕಾರಿಗಳಾವುವು? ಹಣಕಾಸು ವಿಷಯದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು ಎಷ್ಟರಮಟ್ಟಿಗೆ ಸ್ವಾಯತ್ತತೆಯನ್ನು ಹೊಂದಿವೆ? ಅವುಗಳ ಆದಾಯದ ಮೂಲಗಳು ಹಾಗೂ ವೆಚ್ಚದ ಬಾಬ್ತುಗಳಾವುವು? ರಾಜ್ಯ ಹಣಕಾಸು ಆಯೋಗದಿಂದ ಪಂಚಾಯತಿ ರಾಜ್ ಸಂಸ್ಥೆಗಳಿಗೆ ಯಾವ ಬಗೆಯ ಅನುಕೂಲತೆಗಳು ದೊರೆಯುತ್ತವೆ? ಹಣಕಾಸು ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಪಂಚಾಯತ್ ರಾಜ್ ಸಂಸ್ಥೆಗಳು ಎದುರಿಸುತ್ತಿರುವ ಸಮಸ್ಯೆಗಳಾವುವು? ಹಣಕಾಸಿನ ಪರಿಸ್ಥಿತಿಯನ್ನು ಉತ್ತಮಪಡಿಸಲು ಯಾವ ಕ್ರಮಗಳನ್ನು ಕೈಗೊಳ್ಳಬೇಕು? ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಚರ್ಚಿಸಲಾಗಿದೆ. ಗ್ರಾಮಗಳ ಅಭಿವೃದ್ಧಿ ಮತ್ತು ಆಡಳಿತ ಸಂಬಂಧಿ ಜವಬ್ದಾರಿಯನ್ನು ಸಮರ್ಪಕವಾಗಿ ಮತ್ತು ದಕ್ಷಯುತವಾಗಿ ಕಾರ್ಯನಿರ್ವಹಿಸಲು ಸಾಕಷ್ಟು ಹಣಕಾಸು ಸಂಪನ್ಮೂಲದ ಅಗತ್ಯವಿದೆ. ಇದಕ್ಕೆ ಸಂಬಂಧಿಸಿದಂತೆ ಎರಡು ವಿಷಯಗಳು ಮುಖ್ಯವಾಗಿವೆ. ೧)ಹಣಕಾಸು ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಗಳು ಸ್ವಾವಲಂಬಿಯಾಗಿರಬೇಕು. ೨) ಹಣಕಾಸಿನ ವಿಷಯದಲ್ಲಿ ಪಂಚಾಯತಿಗಳು ಸ್ವಾಯತ್ತತೆಯಾಗಿರಬೇಕೆಂದು ವಾದಿಸಿದ್ದಾರೆ.

**ಜಯಪ್ರಕಾಶ್ ನಾರಾಯಣ** ರವರು ತಮ್ಮ "ಜನರಿಗಾಗಿ ಸ್ವರಾಜ್"[೧೩] ಎಂಬ ಕೃತಿಯಲ್ಲಿ ಜನರು ಆಡಳಿತದಲ್ಲಿ ಭಾಗವಹಿಸುವಿಕೆ ಮತ್ತು ಅಧಿಕಾರ ವಿಕೇಂದ್ರೀಕರಣ ಕುರಿತಂತೆ ಹೀಗೆ ಹೇಳಿದ್ದಾರೆ. ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯತಿಗಳನ್ನು ಶಾಸನಬದ್ಧ ಆಡಳಿತ ಘಟಕಗಳನ್ನಾಗಿ ಮಾಡಿ, ಯೋಜನೆಗಳು ಯಾರಿಗೆ ಮುಟ್ಟಿಸಲು ಉದ್ದೇಶಿಸಲಾಗಿದೆಯೋ ಆ ಪ್ರಕ್ರಿಯೆಯಲ್ಲಿ ಜನರನ್ನು ಭಾಗಿಗಳನ್ನಾಗಿಸಿಕೊಳ್ಳುವುದು ಅವಶ್ಯಕ. (ಈ ಹಿನ್ನೆಲೆಯಲ್ಲಿ ವರ್ಷದಲ್ಲಿ ಎರಡು ಬಾರಿ ಕನಿಷ್ಠ ಆರು ತಿಂಗಳಿಗೊಮ್ಮೆ ಗ್ರಾಮಸಭೆಗಳನ್ನು ಕಡ್ಡಾಯವಾಗಿರಿಸಿದೆ) ಜೊತೆಗೆ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಅಧಿಕಾರ ವಿಕೇಂದ್ರೀಕರಣದ ಮೂಲ ತತ್ವಗಳನ್ನು ಸ್ಥಿರಪಡಿಸಿ, ಈ ಸಂಸ್ಥೆಗಳಲ್ಲಿ ಪಾರದರ್ಶಕತೆಯನ್ನು ಕಾಪಾಡುವ ಹಿನ್ನೆಲೆಯಲ್ಲಿ ಮಾಹಿತಿಗಳ ವಿನಿಮಯದ ಅಗತ್ಯತೆ ಕಂಡು ಬರುತ್ತಿದ್ದರೂ ಸಾಮಾನ್ಯ ಜನರಿಗೆ ಅಂತಹ ಮಾಹಿತಿಗಳು ಸುಲಭವಾಗಿ ಲಭ್ಯವಾಗುತ್ತಿಲ್ಲ. ಭಾರತವು ಕಲ್ಯಾಣ ರಾಷ್ಟ್ರವಾಗಬೇಕಾದರೆ, ರಾಷ್ಟ್ರದ ಸಂಪನ್ಮೂಲಗಳು ಸಾಮಾನ್ಯ ಜನರ ಹಿತಕ್ಕಾಗಿ ಹಂಚಿಕೆ ಹಾಗೂ ವಿನಿಯೋಗವಾಗಬೇಕು ಎಂದು ಹೇಳಿದ್ದಾರೆ.

ಇದಕ್ಕೆ ಪೂರಕವಾಗಿ **ಬಿ.ಎಸ್. ವಸಂತಕುಮಾರ್** ರವರು "ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ (೨೦೧೧)[೨೨] ಎಂಬ ಪುಸ್ತಕ (ಪೂರ್ವೋಕ್ತಿ)ದಲ್ಲಿ ಅಧಿಕಾರ ವಿಕೇಂದ್ರೀಕರಣದ ತತ್ವಗಳನ್ನು ಸ್ಥಿರಪಡಿಸಬೇಕಾದರೆ, ಆಡಳಿತದಲ್ಲಿ ಪಾರದರ್ಶಕತೆ ಮತ್ತು ಜನರ ಸಹಭಾಗಿತ್ವ ಹಾಗೂ ಅಧಿಕಾರದಲ್ಲಿ ಜನಸಾಮಾನ್ಯರಿಗೆ ಅವಕಾಶ ಕಲ್ಪಿಸಬೇಕು. ಪ್ರತಿಯೋಬ್ಬ ವ್ಯಕ್ತಿ ತಾನು ತನ್ನ ಸಮಸ್ಯೆಗಳನ್ನು ಬಹೆಹರಿಸಿಕೊಳ್ಳಲು ಭಾರತ ಸಂವಿಧಾನವು ಅನುಮತಿ ನೀಡಿದೆಯಲ್ಲದೆ, ಇದು ಪ್ರತಿಯೊಬ್ಬ ವ್ಯಕ್ತಿಯ ನೈತಿಕ ಹಕ್ಕಾಗಿದೆ. ಗ್ರಾಮ ತನ್ನ ವ್ಯವಹಾರಗಳನ್ನು ತಾನೇ ನಿಭಾಯಿಸಿ ಈ ಹಿನ್ನೆಲೆಯಿಂದಲೇ ಗ್ರಾಮ ಮಟ್ಟದಿಂದ ಜಿಲ್ಲಾ ಮಟ್ಟದವರೆಗೆ ರಾಜ್ಯದ ಅಧಿಕಾರವನ್ನು ವಿಕೇಂದ್ರೀಕರಣಗೊಳಿಸುವ ಉದ್ದೇಶದಿಂದ ಸಂವಿಧಾನಾತ್ಮಕವಾಗಿ ಮಾನ್ಯತೆ ಕೊಡಲಾಗಿದೆ.

ಇದಕ್ಕೆ ಅನುಗುಣವಾಗಿಯೇ **"ಹಿರಾಚಂದ ಲಕ್ಷ್ಮಿನಾಗನಾಥ್ ವಾಘ್ಮಾರ"**ರವರ "ಗ್ರಾಮ ಸಭೆಗೆ ಅಧಿಕಾರ ಬೇಕೆ?" (೧೯೯೬)[೨೪] ಎಂಬ ಅಧ್ಯಯನದಲ್ಲಿ ಗ್ರಾಮ ಸಭೆ ಕುರಿತಂತೆ ೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆಯನ್ನು ಕರ್ನಾಟಕ ಸರ್ಕಾರವು ಜಾರಿಗೆಗೊಳಿಸಿದೆ. ಈ ಕಾಯ್ದೆಯ ಅಧ್ಯಾಯ ನುಡಿರಲ್ಲಿ ಒಂದೇ ಒಂದು ಪುಟದಲ್ಲಿ ಗ್ರಾಮಸಭೆಯ ಬಗ್ಗೆ ಪ್ರಸ್ತಾಪವಿದ್ದು, ಕಾಯಿದೆ ಪ್ರಕಾರ ಗ್ರಾಮಸಭೆಗೆ ಯಾವುದೇ ಅಧಿಕಾರವಿಲ್ಲ. ಗ್ರಾಮಪಂಚಾಯತಿಗೆ ಸಲಹೆಗಳನ್ನು ನೀಡಲು ಮತ್ತು ಪರಿಗಣಿಸಲು ಆರು ತಿಂಗಳಿಗೊಮ್ಮೆ ಅದರ ಸಭೆ ಕರೆಯಬಹುದು. ಗ್ರಾಮಸಭೆಗೆ ಅಧಿಕಾರವಿಲ್ಲವೆಂದರೆ ಹಳ್ಳಿಯ ಜನರಿಗೆ ಅಧಿಕಾರವಿಲ್ಲವೆಂದೇ ಅರ್ಥ. ಕರ್ನಾಟಕ ಸರ್ಕಾರವು ಗ್ರಾಮಮಟ್ಟದಲ್ಲಿ ನೇರ ಪ್ರಜಾಪ್ರಭುತ್ವದ ಪ್ರಯೋಗಗಳನ್ನು ಮಾಡಿದ್ದಾರೆ. ಜನರ ಸರ್ವಾಂಗೀಣ ಅಭಿವೃದ್ಧಿಎಡಹಳ್ಳಿಯ ಜನರನ್ನು ಸುಜ್ಞಾನಿಗಳಾಗಿ ಬದಲಾಯಿಸುವುದು. ಜಯಪ್ರಕಾಶ್ ನಾರಾಯಣ ಹೇಳಿರುವಂತೆ ಜನರ ಭಾಗವಹಿಸುವಿಕೆಯಲ್ಲಿ ಜನ ತಂತ್ರವಿರಬೇಕು, ಅಭಿವೃದ್ಧಿ ಯೋಜನೆಯ ಜಾರಿಯಲ್ಲಿ ಸಕ್ರೀಯವಾಗಿ ಭಾಗವಹಿಸಬೇಕು. ಸ್ಥಳೀಯ ಜನರು ಸ್ಥಳಿಯ ಯೋಜನೆ ಮತ್ತು ಜಾರಿಯಲ್ಲಿ ಭಾಗವಹಿಸಬೇಕು ಎಂದು ಒತ್ತಿ ಹೇಳಿದ್ದಾರೆ.

ಗ್ರಾಮ ಸಭೆಯಲ್ಲಿ ಜನ ಸಾಮನ್ಯರ ಭಾಗವಹಿಸುವಿಕೆಯ ಕುರಿತಂತೆ ನಾವು ಅವರಿಗೆ ಬೋಧನೆ ನೀಡುತೇವೆಯೋ ಹೊರತು, ಅವರಿಗೆ ಅಧಿಕಾರ ನೀಡದೆ ಅದನ್ನು ಜಾರಿಗೆಗೊಳಿಸುವುದಕ್ಕೆ ಬಿಡುವುದೇ ಇಲ್ಲ. ಮಹಾತ್ಮ ಗಾಂಧಿ ಅವರು ಗ್ರಾಮ ಸ್ವರಾಜ್ ಸ್ಥಾಪನೆಯ ಬಗ್ಗೆ ಬಹಳ ಗಂಭೀರವಾಗಿದ್ದರು. ಆದ್ದರಿಂದ ನಾವು ಗ್ರಾಮ ಸಭೆಯನ್ನು ಹೊಣೆಗಾರಿಕೆಯನ್ನಾಗಿ ಮಾಡಬೇಕು, ಹಾಗೂ ನೇರ ಆಡಳಿತ ಮತ್ತು ಹಳ್ಳಿಯ ಅಭಿವೃದ್ಧಿಯ ಬಗ್ಗೆ ನಿರ್ಧಾರಗಳನ್ನು ತೆಗೆದುಕೊಳ್ಳುವುದು, ಜನತಂತ್ರದ ಬದಲಿಗೆ ಪ್ರತಿನಿದಿ ತಂತ್ರವಿದೆ. ಕನಿಷ್ಠ ಹಳ್ಳಿಯ ಮಟ್ಟದಲ್ಲಿ ಪ್ರತಿನಿಧಿ ತಂತ್ರಕ್ಕೆ ಬದಲು ಜನತಂತ್ರವಿರಬೇಕು. ಆದರೆ ಈಗ

ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆಯು **"ಜನತೆಯ ಕೈಗೆ ಅಧಿಕಾರ"** ಎಂಬ ಪರಿಕಲ್ಪನೆಗೆ ಹತ್ತಿರವಾಗಿಯೇ ಇಲ್ಲ. ನಿಜವಾದ ಅರ್ಥದಲ್ಲಿ ಅದು ಪ್ರತಿನಿಧಿಗಳ ತತ್ವಕ್ಕೆ ಹತ್ತಿರವಾದದು ಎಂದು ಚಿಂತಕರು ವಾದಿಸಿದ್ದಾರೆ.

**ಪ್ರೊ.ಟಿ.ಆರ್. ಚಂದ್ರಶೇಖರರವರು** ವಿಕೇಂದ್ರೀಕರಣ ಮತ್ತು ಅಭಿವೃದ್ಧಿ[೧೧]ಗಳ ಬಗ್ಗೆ ಹೀಗೆ ಚರ್ಚಿಸಿದ್ದಾರೆ. ಗ್ರಾಮೀಣ ಅಭಿವೃದ್ಧಿಗೆ ತೊಡುಕಾಗಿರುವ ಜಾತಿ-ಜಮೀನುದಾರಿ-ಅಧಿಕಾರ ಜನರ ಪ್ರಾತಿನಿಧ್ಯ ಹಾಗೂ ಜಾತಿ ಯಜಮಾನ್ಯಗಳ ನಡುವಿನ ಸಂಬಂಧ, ಅಭಿವೃದ್ಧಿ ಕಾರ್ಯಕ್ರಮಗಳ ಅಸಮಾನತೆಯ ಹಂಚಿಕೆ, ಲಿಂಗಸಂಬಂಧಿ ಅಂಶಗಳು(ಮಹಿಳೆಯರ ಸ್ಥಿತಿಗತಿಗಳು) ಆದರಲ್ಲಿ ಮಹಿಳೆಯರ ಮೀಸಲಾತಿ ಸ್ವಸಹಾಯ ಗುಂಪುಗಳ ಇತ್ಯಾದಿ ಜೊತೆಗೆ ಪ್ರಜಾಪ್ರಭುತ್ವ-ವಿಕೇಂದ್ರೀಕರಣದ ಬಗ್ಗೆ ತಮ್ಮ ಪ್ರಸ್ತುತ ಅಧ್ಯಯನದಲ್ಲಿ ವಿವರಿಸಿದ್ದಾರೆ. ಕ್ಷೇತ್ರಕಾರ್ಯಕ್ಕಾಗಿ ಬಳ್ಳಾರಿ ಜಿಲ್ಲೆಯ ಕೃಷ್ಣನಗರ, ಚಿಲಕನಹಟ್ಟಿ, ಬೈಲುವದ್ದಿಗೇರಿ, ಪಾಪಿನಾಯಕನಹಳ್ಳಿ, ಸೊನ್ನ, ಕೊಪ್ಪಳ, ಗುಲ್ಬರ್ಗಾ ಜಿಲ್ಲೆಯ ಕೆಲವೊಂದು ಗ್ರಾಮೀಣ ಪ್ರದೇಶಗಳ ಅಧ್ಯಯನ ಮಾಡಿ ಕೆಳಕಂಡಂತೆ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಇವರ ಅಧ್ಯಯನದ ಬಹುಮುಖ್ಯ ಪ್ರಮೇಯವೆಂದರೆ **"ಗ್ರಾಮೀಣ ಅಭಿವೃದ್ಧಿ ಮತ್ತು ಗ್ರಾಮ ಪಂಚಾಯಿತಿಗಳು ವಿಕೇಂದ್ರೀಕರಣದ ಅಡಿಪಾಯವಾಗಿವೆ ಎಂಬುವುದಾಗಿದ್ದು**, ಇದನ್ನು ಅತ್ಯಂತ ಸ್ಥೂಲವಾಗಿ ಗ್ರಾಮಗಳಲ್ಲಿರುವ ಮನೆಗಳ ಸ್ವರೂಪ, ಅವು ನೆಲೆಗೊಂಡಿರುವ ಜಾಗ, ಜನರ ವೃತ್ತಿ, ಕಸುಬುಗಳು, ಅಂಗಡಿ ಹೋಟೆಲುಗಳಲ್ಲಿ ಜನರನ್ನು ನಡೆಸಿಕೊಳ್ಳುವ ಬಗ್ಗೆ ಮುಂತಾದ ಸಂಗತಿಗಳ ಆಧಾರದ ಮೇಲೆ ಖಚಿತಪಡಿಸಿಕೊಳ್ಳಬಹುದಾಗಿದೆ. ಇಲ್ಲಿ ಪ್ರತಿಪಾದಿತವಾದ ಎಲ್ಲಾ ಸಂಗತಿಗಳಿಗೂ ಅಪವಾದಗಳಿರುತ್ತವೆ. ಆದರೆ ಅಪವಾದಗಳನ್ನು ಸಾಮಾನ್ಯೀಕರಿಸಿದ ಸಂಗತಿಗಳಾಗಿ ಪರಿಭಾವಿಸಲು ಸಾಧ್ಯವಿಲ್ಲ, ಅಭಿವೃದ್ಧಿಯನ್ನು ತಳಮಟ್ಟದಿಂದ ಪರಿಭಾವಿಸಿಕೊಳ್ಳಬೇಕು ಎಂಬ ವೈಚಾರಿಕ ಪ್ರಣಾಳಿಕೆ ರೂಪಗೊಂಡು ಅನೇಕ ದಶಕಗಳೇ ಕಳೆದಿವೆ. ವಾಸ್ತವವಾಗಿ ವಿಕೇಂದ್ರೀಕರಣದ ಹಿಂದಿನ ತಾತ್ವಿಕತೆ ಅಧಿಕಾರವನ್ನು ತಳಮಟ್ಟಕ್ಕೆ ಒಯ್ಯುವುದು ಎಂಬುದಾಗಿದೆ. ಇದು ಸ್ವಲ್ಪಮಟ್ಟಿಗೆ ಅನುಷ್ಠಾನಗೊಂಡಿದೆ ಆದರೆ ತಳಮಟ್ಟಕ್ಕೆ ಬಂದ ಅಭಿವೃದ್ಧಿ-ಅಧಿಕಾರ-ಆಡಳಿತ ತಳಮಟ್ಟದಲ್ಲಿ ಯಾವ ಸ್ವರೂಪದಲ್ಲಿದೆ? ಅಭಿವೃದ್ಧಿಯಫಲ ವಂಚಿತ ವರ್ಗಗಳಿಗೂ ತಲುಪಿದೆಯೇ? ಆದರೆ ಅದರ ಸ್ವರೂಪ ಅದರ ತಾತ್ವಿಕತೆ, ಅದರ ಸತ್ಯ, ಅದರ ಕೇಂದ್ರ ಜಮೀನುದಾರಿ ವರ್ಗವಾಗಿದೆ ಮತ್ತು ಪ್ರಬಲ ಕೋಮುಗಳಾಗಿವೆ. ತಳಮಟ್ಟವನ್ನೇ ಒಂದು ರಚನೆಯೆಂದು ಪರಿಭಾವಿಸಿದಾಗ, ಅಭಿವೃದ್ಧಿ ಅಧಿಕಾರ ಅಲ್ಲಿ ಪಿರಮಿಡ್ಡಿನ ತುದಿಯಲ್ಲಿ ಮಡಗಟ್ಟಿಕೊಂಡಿರುವುದು ಕಂಡುಬರುತ್ತದೆ. ಅಲ್ಲಿ ಒಂದು ಮೇಲಿನಿಂದ ಕೆಳಕ್ಕೆ ಹರಿಯುವ ಸ್ವರೂಪವನ್ನೇ ಪಡೆದುಕೊಂಡಿರುವುದನ್ನು ಗಮನಿಸಬಹುದಾಗಿದೆ. ವಂಚಿತ ವರ್ಗಗಳಿಗೆ ಅದರ ಫಲ ದೊರೆತಿದ್ದರೆ, ಅದು ಒಂದು ರೀತಿಯಲ್ಲಿ 'ಕೊಡ ತುಂಬಿದ

ಮೇಲೆ ಹೋರ ಚೆಲ್ಲುವ ನೀರನ ತೆರದಲ್ಲಿದೆ' ಅಥವಾ' ಕೊಡಕ್ಕೆ ನೀರು ತುಂಬುವಾಗ ಹೊರಕ್ಕೆ ಸಿಡಿದ ನೀರಿನ ತೆರದಲ್ಲಿದೆ'.

ಇದರ ಒಟ್ಟಾರೆ ತಥ್ಯವಿಷ್ಟು, ತಳಮಟ್ಟದಲ್ಲಿ ಪ್ರಜಾಪ್ರಭುತ್ವದ ವ್ಯಾಪ್ತಿ ಹರವು ತುಂಬಾ ಸೀಮಿತವಾಗಿರುವುದರಿಂದ, ಅದು ಎಲ್ಲ ವರ್ಗ, ಎಲ್ಲ ಒಣಿ, ಕೇರಿಗಳನ್ನು ಒಳಗೊಂಡಿಲ್ಲ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ "ಪ್ರದೇಶ ಯೋಜನೆ" ಪದ್ಧತಿ ಆಧರಿಸಿ ಅಭಿವೃದ್ಧಿ ಯೋಜನೆ ರೂಪಗೊಳ್ಳಬೇಕು. ಇಂದು ನಮ್ಮ ನೀತಿ–ಕಾರ್ಯಕ್ರಮಗಳ ಬೇಸ್‌ಲೈನ್ ಅಸಮಾನತೆಯನ್ನು ನಿವಾರಿಸುವುದಾಗಬೇಕು. ಮತ್ತು ಲಿಂಗ ಸಮಾನತೆಯಿಂದ ಮಹಿಳೆಯರ ಸಬಲೀಕರಣವಾಗುವುದು, ಹೀಗೆ ಪ್ರಜಾಪ್ರಭುತ್ವವು ಹೆಚ್ಚು ಸಹಭಾಗಿತ್ವವಾದಿಯಾಗವುದಕ್ಕೆ ಅದರ ಹರವು ವಿಸ್ತೃತವಾಗುವುದಕ್ಕೆ ವಿಕೇಂದ್ರೀಕರಣವನ್ನು ಪರಿಣಾಮಕಾರಿ ಸಾಧನವೆಂದು ಪರಿಗಣಿಸಲಾಗಿದೆ.

ಮೇಲಿನ ಗ್ರಾಮ ಪಂಚಾಯತಿಗಳಿಗೆ (ಕೃಷ್ಣ ನಗರ) ಭೇಟಿ ನೀಡಿ ಅವರುಗಳ ಬಡತನ, ಅನಕ್ಷರತೆ, ಲಿಂಗ ಅಸಮಾನತೆ, ಜಾತಿ ತಾರತಮ್ಯ ಇತ್ಯಾದಿ, ಅಂಶಗಳನ್ನು ಕೂಲಂಕುಷವಾಗಿ ಚರ್ಚಿಸಿದ್ದಾರೆ.

ಈ ಮೇಲಿನ ಹೇಳಿಕೆಯನ್ವಯವಾಗಿ **'ಜೀನ್‌ಡ್ರಿಜ್'ರವರು**[೧೫] ಅಭಿವೃದ್ದಿಯು ತುದಿಯಿಂದ ಕೆಳಕ್ಕೆ ಹರಿಯಲು ಪ್ರಾರಂಭಮಾಡಿ ಅದು ಮಧ್ಯದಲ್ಲಿಯೇ ನಿಂತು ಬಿಟ್ಟಿರುವುದರಿಂದ ಅಪಾರ ಪ್ರಮಾಣದಲ್ಲಿ ಬಡವರನ್ನು ದುರ್ಬಲರನ್ನು, ದಲಿತರನ್ನು ಒಳಗೊಂಡಿರುವ ಪಿರಮಿಡ್ಡಿನ ಅಡಿಪಾಯವನ್ನು ಅದು ತಲುಪಿಲ್ಲ, ಕಾಲಕ್ರಮೇಣ ಅದು ತಳಮಟ್ಟಕ್ಕೆ ಹರಿಯುತ್ತದೆಂದು ನಂಬಲಾಗಿದೆ. ಇದೊಂದು ವಿಕಾಸವಾದಿ ದೃಷ್ಟಿಕೋನವಾಗಿದ್ದು, ಗ್ರಾಮೀಣ ಅಭಿವೃದ್ಧಿ ಕುರಿತಂತೆ ಭಾರತವು ಅಳವಡಿಸಿಕೊಂಡಿರುವ ಕಾರ್ಯಕ್ರಮವು ಇಂತಹ ಸಾಮಾಜಿಕ ಡಾರ್ವಿನಿಸಮ್ ದೋರಣೆಯನ್ನು ಆಧರಿಸಿದೆ. ಅನೇಕ ಅಧ್ಯಯನಗಳು ತೋರಿಸಿರುವಂತೆ ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಸಮಸ್ಯೆ ಎಲ್ಲಿದೆಂದರೆ ಗ್ರಾಮೀಣವನ್ನು ಒಂದು 'ಏಕರೂಪ ಘಟಕ', 'ಒಂದು ಸಮುದಾಯ'ವೆಂದು ಪರಿಭಾವಿಸಿಕೊಂಡಿರುವುದಲ್ಲದೆ, ಈ ದಿಶೆಯಲ್ಲಿ ಪ್ರಖ್ಯಾತ ಸಮಾಜಶಾಸ್ತ್ರ ಆಂದ್ರೆ ಬೆಥಿಲ್ಲೆ'ಯ ಕೆಳಗಿನ ಹೇಳಿಕೆ ಇದಕ್ಕೆ ಪೂರಕವಾಗಿದೆ. ಅವರು– "The Basic mistake lay probably in the assumption that the typical Indian Village ever was a community of peasants."

ಇದಕ್ಕಾನುಗುಣವಾಗಿಯೇ **ಜಿನ್ ಬ್ರೆಮನ್‌ರವರು** ಭಾರತೀಯ ಗ್ರಾಮಗಳನ್ನು ಕುರಿತಂತೆ 'ಅಂದು–ಇಂದು'ಎಂಬ ವಿಧಾನದಲ್ಲಿ ಕಳೆದ ೨೫ ವರ್ಷಗಳಿಂದ ನಡೆದುಕೊಂಡು ಬಂದಿರುವ ಅಧ್ಯಯನಗಳನ್ನು ಸಮೀಕ್ಷಿಸುತ್ತಾ, ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕ ಸಂಗತಿಗಳಿಗೆ ಸಂಬಂಧಿಸಿದಂತೆ ನಡೆಯುತ್ತಿರುವ ಬದಲಾವಣೆಯ ಗತಿಯಲ್ಲಿ ಸಮಾಜಿಕ ಬದಲಾವಣೆಗಳು

ನಡೆಯುತ್ತಿಲ್ಲ ಎಂಬುದಾಗಿದೆ. ಆಸ್ತಿ ಮತ್ತು ಅಧಿಕಾರಕ್ಕೆ ಅನುಗುಣವಾಗಿ ಅಭಿವೃದ್ಧಿ ಸಂಭವಿಸುತ್ತಿರುವುದರಿಂದ ಸಾಮಾಜಿಕ ಅಸಮಾನತೆಗಳು ಮುಂದುವರಿಯುತ್ತಿವೆ. ಈ ಬಗೆಯ ಅಭಿವೃದ್ಧಿಯ ಫಲಗಳ ಅಸಮಾನ ಹಂಚಿಕೆಯನ್ನು ಜನಬ್ರೆಮನ್‌ರವರು 'ಆರೋಹಣವಾದಿ ಅಸಮಾನತೆ ಎಂದು ಕರೆದಿದ್ದಾರೆ.

ಪಲಾನಪುರ ಎಂಬ ಉತ್ತರ ಪ್ರದೇಶಕ್ಕೆ ಸೇರಿದ ಗ್ರಾಮವನ್ನು ಕುರಿತು ದೀರ್ಘಾವಧಿ ಅಧ್ಯಯನದ ಆಧಾರದ ಮೇಲೆ ಜೀನ್ ಡ್ರೀಜ್ ರೂಪಿಸಿದ ತೀರ್ಮಾನ ಈ ಕೆಳಕಂಡಂತಿದೆ. (೧೯೯೭) "Like many others villages in western Uttar Pradesh, Palanpur combiner a modicum of economic dynamism with a great deal of conservation in Social matters".

ಇದೊಂದು ಅರ್ಥಗರ್ಭಿತವಾದ ತೀರ್ಮಾನ/ಪ್ರಮೇಯವಾಗಿದೆ. **ಪ್ರೋ.ಟಿ.ಆರ್. ಚಂದ್ರಶೇಖರ್‌ರವರು "ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ"** (೨೦೦೪) ಎಂಬ ಅಧ್ಯಯನದಲ್ಲಿ **"ಜೀನ್ ಡ್ರೀಜ್" ಮತ್ತು ಅಮರ್ತ್ಯಸೇನ್** ರವರ ವಾದವನ್ನು ಹೀಗೆ ಮಂಡಿಸಿದ್ದಾರೆ. ಪ್ರಜಾಪ್ರಭುತ್ವವನ್ನು 'ಅನುಸಂಧಾನತ್ವವಾದಿ ಸರ್ಕಾರವೆಂದು ನಿರ್ವಚಿಸಿದ್ದಾರೆ. ಅವರ ಮಾತುಗಳಲ್ಲಿ ಹೇಳುವುದಾರೆ. "Democrarcy is Government by discussion" ಕೇರಳ ರಾಜ್ಯದಲ್ಲಿ ೧೯೯೬ರಲ್ಲಿ ಆರಂಭವಾದ "ವಿಕೇಂದ್ರೀಕರಣ ಯೋಜನೆಗಾಗಿ ಜನರ ಆಂದೋಲನದ ರೂವರಿಯಾಗಿದ್ದ ಥಾಮಸ್ ಇಸಾಕ್‌ರವರು ಪ್ರಜಾಪ್ರಾಭುತ್ವವನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ.

೧. ಸಬಲೀಕರಣಗೊಂಡ ,ಅನುಸಂಧಾನತ್ವವಾದಿ ಪ್ರಜಾಪ್ರಭುತ್ವ

೨. ಪ್ರಾತಿನಿಧಿಕ-ತಾಂತ್ರಿಕ-ನೌಕರಶಾಹಿವಾದಿ ಪ್ರಜಾಪ್ರಭುತ್ವ

ಅನುಸಂಧಾನತ್ವವನ್ನು **ಡ್ರೀಜ್-ಸೆನ್** ಹಾಗೂ **ಇಸಾಕ್** ಅವರುಗಳು ಪ್ರಜಾಪ್ರಭುತ್ವದ ಒಂದು ಅಗತ್ಯ ಗುಣವಾಗಿ ಗುರುತಿಸಿದ್ದಾರೆ. ಅನುಸಂಧಾನ (ಡಿಲಿಬರೇಟಿವ್‌ನೆಸ್) ಮತ್ತು ಸಂವಾದ (ಡಿಸ್‌ಕಶನ್) ಇವು ಪ್ರಜಾಪ್ರಭುತ್ವದ ಗುಣಗಳು ಪ್ರಜಾಪ್ರಭುತ್ವ ಎನ್ನುವುದು ಪ್ರಾತಿನಿಧಿಕ ಸ್ವರೂಪ ಪಡೆದಿರಬಹುದು. ಆದರೆ ಅದು ಕೇವಲ ಔಪಚಾರಿಕವಾದ ಪ್ರಾತಿನಿಧಿತ್ವವಾಗಿರಬಹುದು. ತಾಂತ್ರಿಕವಾಗಿ ಅದು ಪ್ರಜಾಪ್ರಭುತ್ವದ ಎಲ್ಲಾ ನಿಯಮಗಳನ್ನು ಪಾಲಿಸುತ್ತಿರಬಹುದು. ಆದರೆ ಅಲ್ಲಿ ಅನುಸಂಧಾನಕ್ಕೆ ಸಂವಾದಕ್ಕೆ ಅವಕಾಶವಿಲ್ಲದಿದ್ದರೆ ಅಲ್ಲಿ ಪ್ರಜಾಪ್ರಭುತ್ವವು ಜನರಿಗಾಗಿ ಇರಲು ಸಾಧ್ಯವಿಲ್ಲ. ಈ ಬಗೆಯ ತಾಂತ್ರಿಕವಾಗಿ ಎಲ್ಲಾ ಅಗತ್ಯಗಳನ್ನು ಪೂರೈಸಬಲ್ಲ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅನೂಚಾನವಾಗಿ ಹರಿದುಕೊಂಡು ಬಂದಿರುವ ಸಾಮಾಜಿಕ ಅಸಮಾನತೆಗಳು ಗಟ್ಟಿಯಾಗಿ ಉಳಿದುಕೊಂಡು ಬಿಡುವ ಸಾಧ್ಯತೆಯಿದೆ. ಕೇವಲ ತಾಂತ್ರಿಕ ನಿತಿಯಲ್ಲಿ ಪ್ರಜಾಪ್ರಭುತ್ವವಾಗಿರುವ ವ್ಯವಸ್ಥೆಯು ಸಮಾಜದ ಎಲ್ಲಾ

ಜನರನ್ನು ಒಳಗೊಳ್ಳುವ ಸಾಧ್ಯತೆ ಕಡಿಮೆ. ಇಂತಹ ಪ್ರಜಾಪ್ರಭುತ್ವದ ಹರಿವು ತುಂಬಾ ಸೀಮಿತವಾಗಿರುತ್ತದೆ. ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ ಪ್ರಕ್ರಿಯೆಯನ್ನು ಪ್ರಜಾಪ್ರಭುತ್ವದ ಮಾನದಂಡದಿಂದ ಮೌಲ್ಯಮಾಪನ ಮಾಡಲು ತಮ್ಮ ಅಧ್ಯಯನದಲ್ಲಿ ಪ್ರಯತ್ನಿಸಿದ್ದಾರೆ.

ಇದಕ್ಕನುಗುಣವಾಗಿಯೇ **ಪ್ರೊ. ಟಿ.ಆರ್. ಚಂದ್ರಶೇಖರ್** ರವರು ತಮ್ಮ ಪ್ರಬಂಧದಲ್ಲಿ ಗ್ರಾಮೀಣ ಅಭಿವೃದ್ಧಿಯನ್ನು ನಿರ್ವಹಿಸುತ್ತಿರುವ ಹಾಗೂ ಅಭಿವೃದ್ಧಿ ಯೋಜನೆ ರೂಪಿಸುವ ಕ್ರಮದಲ್ಲಿ ಉಂಟಾಗುತ್ತಿರುವ ಬದಲಾವಣೆಗಳನ್ನು ಕುರಿತಂತೆ ಚರ್ಚಿಸಿದ್ದಾರೆ. "ಜನರಿಗೆ ಯೋಜನೆ" ಎಂಬುದು 'ಜನರ ಯೋಜನೆಯಾಗಿ ಪರಿವರ್ತನೆ ಯಾಗಬೇಕಾಗಿರುವ ಅಗತ್ಯವನ್ನು ಗುರುತಿಸಿದ್ದಾರೆ.

ಈ ಅಧ್ಯಯನಕ್ಕಾಗಿ ಅವರು ಬಳ್ಳಾರಿ ಜಿಲ್ಲೆ (ಸಂಡೂರು ತಾಲ್ಲೂಕಿನ ಕೃಷ್ಣನಗರ ಗ್ರಾಮ ಪಂಚಾಯತಿ ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕಿನ ಯರೆಹಂಚನಾಳ್ ಗ್ರಾಮ ಪಂಚಾಯತಿಗಳ) ಅಧ್ಯಯನ ಮಾಡುವುದರ ಮೂಲಕ ಈ ಕೆಳಕಂಡ ತೀರ್ಮಾನಕ್ಕೆ ಬರುತ್ತಾರೆ.

ಎರಡು ಗ್ರಾಮ ಪಂಚಾಯತಿಗಳಲ್ಲಿ ಗ್ರಾಮ ಸಭೆಗಳಿಗೆ ಪ್ರತಿಯಾಗಿ, ವಸತಿ ಸಭೆಗಳನ್ನು ಏರ್ಪಡಿಸಿ, (ಸುಮಾರು ೧೦೦ ಜನರ ಒಂದು ಸಭೆ) ಸಭೆಗಳಲ್ಲಿ ಭಾಗವಹಿಸಿದ ಜನರು ತಮ್ಮ ಓಣಿ-ಬಡಾವಣೆ, ಕೇರಿಯ ಹಲವಾರು ಸಮಸ್ಯೆಗಳನ್ನು ಪಟ್ಟಿ ಮಾಡಿದ ನಂತರ ಆಸಮಸ್ಯೆಗಳಿಗಿರುವ ಸ್ವರೂಪ, ತೀವ್ರತೆ, ಕಾರಣ ಪರಿಹಾರಗಳು, ಇದರ ಬಗ್ಗೆ ಚರ್ಚಿಸಿ ಅವುಗಳನ್ನು ಆದ್ಯತೆಗನುಗುಣವಾಗಿ ಜೋಡಿಸುವುದು. ಹೀಗೆ ಅವರು ನಡೆಸಿದ ವಸತಿಸಭೆಗಳಲ್ಲಿ ಜನರು ಗುರುತಿಸಿದ (ಕುಡಿಯುವ ನೀರು, ಆಸ್ಪತ್ರೆ, ಚರಂಡಿ, ರಸ್ತೆ, ಶೌಚಾಲಯ, ಉದ್ಯೋಗ, ಬಸ್ಸು, ಅಂಗನವಾಡಿ ಕಟ್ಟಡ, ಹೊಲಿಗೆ ತರಬೇತಿ, ಬ್ಯಾಂಕು ಸಾಲ, ಸರ್ಕಾರಿ ಪ್ರೌಢಶಾಲೆ ಇತ್ಯಾದಿ) ಸಮಸ್ಯೆಗಳು ಸಾಮಾನ್ಯ ಸ್ವರೂಪದಾಗಿದ್ದವು.

ಎರಡೂ ಗ್ರಾಮ ಪಂಚಾಯತಿಗಳಿಗೆ ಸಂಬಂಧಿಸಿದಂತೆ ಜನರು ಅದರಲ್ಲೂ ಮಹಿಳೆಯರು ಅತ್ಯಂತ ಆಸಕ್ತಿಯಿಂದ ವಸತಿ ಸಭೆಗಳಲ್ಲಿ ಭಾಗವಹಿಸಿದರು. ಜಿಲ್ಲಾ ಯೋಜನಾ ಸಮಿತಿಗಳು ಇಂತಹ ಕಾರ್ಯಗಳನ್ನು ಕೈಗೊಳ್ಳಬೇಕು, ಆದರೆ ಕರ್ನಾಟಕದಲ್ಲಿ ಎರಡು ಜಿಲ್ಲಾ ಯೋಜನಾ ಸಮಿತಿಗಳು ಮಾತ್ರ ಇಂತಹ ಪ್ರಯೋಗಕ್ಕೆ ಇಂಬಾಗಿ ನಿಂತವು, ಇದೇ ರೀತಿ ಉಳಿದ ಜಿಲ್ಲಾ ಯೋಜನಾ ಸಮಿತಿಗಳು ಜನರ ಯೋಜನೆಯನ್ನು ರೂಪಿಸುವ ಪ್ರಯೋಗಗಳನ್ನು ಕೈಗೊಳ್ಳವುದು ಮತ್ತು ಸಮಾಜದ ಅಂಚಿನಲ್ಲಿ-ಅಡಿಪಾಯದಲ್ಲಿರುವ ವಂಚಿತ ವರ್ಗಗಳ ಜನರ ಅಭಿವೃದ್ಧಿಯು ಧಾತು-ದ್ರವ್ಯವಾಗಬೇಕಾದರೆ, ತಳಮಟ್ಟದಿಂದ ಅಭಿವೃದ್ಧಿ ಯೋಜನೆಗಳನ್ನು ಕಟ್ಟುವ ಕೆಲಸ ಆರಂಭವಾಗಬೇಕು. ಇದಕ್ಕೆ ಕೇಂದ್ರ ಯೋಜನಾ ಆಯೋಗ ಮತ್ತು ರಾಜ್ಯ

ಯೋಜನಾ ಮಂಡಳಿಗಳು ಜನರ ಯೋಜನೆ ರೂಪಿಸಲು ಅಗತ್ಯವಾದ ಮಾರ್ಗದರ್ಶನವನ್ನು, ತರಬೇತಿಯನ್ನು ತಜ್ಞರ ಸಲಹೆಯನ್ನು ಜಿಲ್ಲಾ ಯೋಜನಾ ಸಮಿತಿಗಳಿಗೆ ಒದಗಿಸಬೇಕೆಂದು ಕೆಲವೊಂದು ಸಲಹೆಗಳನ್ನು ನೀಡಿ, ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಡಾ. ಎಂ. ಚಂದ್ರಪೂಜಾರಿ ಅವರ "ದೇಶಿಯತೆಯ ನೆರಳಲ್ಲಿ ವಿಕೇಂದ್ರೀಕರಣ (೨೦೦೮)"** ಎಂಬ ಅಧ್ಯಯನ[೬] (ಪ್ರಸ್ತಕ)ದಲ್ಲಿ ಜನರ ಸಹಭಾಗಿತ್ವ ಮತ್ತು ವಿಕೇಂದ್ರೀಕರಣ ಕುರಿತಾಗಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಪಾಪಿನಾಯಕನಹಳ್ಳಿ ಗ್ರಾಮ ಪಂಚಾಯತಿನ್ನು ಅಧ್ಯಯನ ಮಾಡುವುದರ ಮೂಲಕ ಕೆಳಕಂಡ ವಿಷಯ ಅಥವಾ ಸಂಗತಿಗಳ ಬಗ್ಗೆ ಮಾಹಿತಿಯನ್ನು ಒದಗಿಸಿದ್ದಾರೆ, ಪಾಪಿನಾಯಕನ ಹಳ್ಳಿಯಲ್ಲಿನ ಜಾತಿ, ಧರ್ಮ, ಸಂಪ್ರದಾಯ, ಜನರ ಬದುಕು, ದೇಶಿಯ ರಾಜಕೀಯ ಯಜಮಾನಿಕೆ, ತಳಮಟ್ಟದ ರಾಜಕೀಯ, ಆಧುನಿಕ ರಾಜಕೀಯ ಜನರ ಪಾಲ್ಗೊಳ್ಳುವಿಕೆ, ವಿಕೇಂದ್ರೀಕರಣ ಇತ್ಯಾದಿ ವಿಷಯಗಳ ಬಗ್ಗೆ ವಿವರಿಸುತ್ತಾ ತಮ್ಮ ಅಧ್ಯಯನವನ್ನು ಸೀಮಿತಗೊಳಿಸಿದ್ದಾರೆ.

ರಾಜ್ಯದಲ್ಲಿ ಮೂರು ಹಂತದ ಆಡಳಿತ ವ್ಯವಸ್ಥೆ ಬಂದ ಕೂಡಲೇ ಮತ್ತು ಸಮಾಜದ ಎಲ್ಲಾ ಜಾತಿ, ವರ್ಗ, ಧರ್ಮ, ಪಂಗಡ ಇತ್ಯಾದಿ ಪ್ರತಿನಿಧಿಗಳು ಅಧಿಕಾರಕ್ಕೆ ಬಂದ ಕೂಡಲೇ ವಿಕೇಂದ್ರೀಕರಣ ಸಾಧ್ಯವಾಗುತ್ತದೆ ಎನ್ನುವ ತೀರ್ಮಾನಕ್ಕೆ ಬರಲಾಗುತ್ತದೆ. ಇದು ಸರಿಯಲ್ಲ, ಇಲ್ಲಿ ಅಂತಹ ಪ್ರತಿನಿದಿಗಳು ಬರುವುದು ಎಷ್ಟೋ ಮುಖ್ಯವೋ ಅಷ್ಟೇ ಪಂಚಾಯತ್ ಸಂಸ್ಥೆಗಳು ಕೆಳವರ್ಗದ ಸಶಕ್ತಿಕರಣಕ್ಕೆ ಬಳಸಿಕೊಳ್ಳುವುದು ಅಷ್ಟೇ ಮುಖ್ಯ. ಏಕೆಂದರೆ ಕೆಳಜಾತಿಗಳಿಂದ ಸಾಕಷ್ಟು ಪ್ರಾತಿನಿಧ್ಯ ಇದ್ದಾಗಲೂ ಪಂಚಾಯತ್ ಸಂಸ್ಥೆಗಳು ವಿಕೇಂದ್ರೀಕರಣಕ್ಕೆ ಪ್ರಯತ್ನಿಸುತ್ತಿವೆ ಎನ್ನುವ ಗ್ಯಾರಂಟಿ ಇಲ್ಲ. ವಿಕೇಂದ್ರೀಕರಣದ ತತ್ವಕ್ಕನುಗುಣವಾಗಿ ಅವರುಗಳು ತಮ್ಮನ್ನು ಸ್ಥಳೀಯ ಸಂಸ್ಥೆಗಳ ಅಧಿಕಾರದಲ್ಲಿ ತೊಡಗಿಸಿಕೊಳ್ಳುವಲ್ಲಿ ಏಕೆ ವಿಫಲವಾಗುತ್ತಿದ್ದಾರೆ? ಯಾವ ಯಾವ ಅಂಶಗಳು ವಿಕೇಂದ್ರೀಕರಣ ತಳಮಟ್ಟದಲ್ಲಿ ಪ್ರಕಟಗೊಳ್ಳುವಲ್ಲಿ ಅಡ್ಡಿಯಾಗಿವೆ? ಆಡಳಿತದಲ್ಲಿ ಜನರ ಸಹಭಾಗಿತ್ವಕ್ಕೆ ಇರುವ ಅಡ-ತಡೆಗಳೇನು? ಇತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ.

ಪಾಪಿನಾಯಕನಹಳ್ಳಿಯ ಗ್ರಾಮ ಪಂಚಾಯತಿ ಅಧ್ಯಯನ ಮಾಡುವುದರ ಮೂಲಕ ಪಂಚಾಯತಿಯ ವಿಫಲತೆಗೆ ಹಲವಾರು ಅಂಶಗಳನ್ನು ಪಟ್ಟಿಮಾಡಿ ಇಲ್ಲಿ ವಿಕೇಂದ್ರೀಕರಣದ ಯಾವ ಯಾವ ಲಕ್ಷಣಗಳು ಈ ಹಳ್ಳಿಯಲ್ಲಿ ಪ್ರಕಟಗೊಂಡಿಲ್ಲ ಅಥವಾ ವಿಕೇಂದ್ರೀಕರಣ ಪ್ರಸ್ತುತ ಉದ್ದೇಶ ಪಂಚಾಯತ್ ಸಂಸ್ಥೆಗಳನ್ನು ಎಷ್ಟರ ಮಟ್ಟಿಗೆ ಕೆಳಜಾತಿ/ವರ್ಗಗಳ ಸಶಕ್ತೀಕರಣಕ್ಕೆ ಬಳಸಲಾಗಿದೆ ಎನ್ನುವುದರ ವಿಶ್ಲೇಷಣೆ ತಳಮಟ್ಟದ ವಿಕೇಂದ್ರೀಕರಣಕ್ಕೆ ಜನರು ತಮ್ಮ ಹಕ್ಕಿನ ಬಗ್ಗೆ (ಉದಾ. ಆಶ್ರಯ ವಸತಿ ವಿತರಣೆ) ಜಾಗರೂಕರಾದರೆ ಸಾಲದು, ರಾಜ್ಯ ಮತ್ತು ಕೇಂದ್ರ ಸರಕಾರದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪಂಚಾಯತ್ ಮೂಲಕ ಜನರಿಗೆ

ತಲುಪಿಸಿದರೆ ಎಲ್ಲ ಸಮಸ್ಯೆಗಳು ಪರಿಹಾರವಾಗುತ್ತವೆ ಎಂಬ ನಂಬಿಕೆ ಇದೆ. ಆದರೆ ಅದು ಅಸಾಧ್ಯ ಅಲ್ಲ. ಚಾರಿತ್ರಿಕವಾಗಿ ರೂಪಗೊಂಡ ರಾಜಕೀಯ ಸಾಮಾಜಿಕ ಹಾಗೂ ಸಾಂಸ್ಕೃತಿಕ ರಚನೆಗಳು ಮೇಲಿನ ಕೊರತೆಗಳನ್ನು ಮುಂದುವರಿಸಲು ಅವಶ್ಯವಾದ ಚೌಕಟ್ಟನ್ನು ಒದಗಿಸುತ್ತವೆ. ಇಲ್ಲದಿದ್ದರೆ ಭೌತಿಕ ಕೊರತೆ ಮುಂದುವರಿಯುತ್ತಲೇ ಇರುತ್ತದೆ ಎಂದು ವಾದಿಸಿದ್ದಾರೆ.

**ಎಂ. ಚಂದ್ರಪೂಜಾರಿಯವರ ಮತ್ತೊಂದು ಅಧ್ಯಯನ "ಸಮುದಾಯ ಮತ್ತು ಸಹಭಾಗಿತ್ವ"** (೨೦೦೨)[೭೭]ದಲ್ಲಿ ಜನ ಸಹಭಾಗಿತ್ವ ಕುರಿತಂತೆ ಎರಡು ಗ್ರಾಮ ಪಂಚಾಯತಿಗಳನ್ನು ಒಂದು ಕೊಪ್ಪಳ ಜಿಲ್ಲೆಯ ಮಹಮ್ಮದ್ ನಗರ ಗ್ರಾಮ ಪಂಚಾಯಿತಿ ಮತ್ತು ಎರಡನೇಯದು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಪಾಪಿನಾಯಕನಹಳ್ಳಿ ಗ್ರಾಮ ಪಂಚಾಯತಿಗಳ ಅಧ್ಯಯನ ಮಾಡುವುದರ ಮೂಲಕ ಕೆಳಕಂಡ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸಹಭಾಗಿತ್ವ ಎನ್ನುವುದು ಒಂದು ಅಭಿವೃದ್ಧಿಯ ಮಾದರಿ ಜನರ ಬೇಕು-ಬೇಡಗಳ ಕುರಿತು ಅವರೇ ನಿರ್ಧಾರ ತೆಗೆದುಕೊಂಡು ಅದರ ಪೂರೈಕೆಗೆ ಅಗತ್ಯವಿರುವ ಯೋಜನೆಗಳನ್ನು ಅವರೇಮಾಡಿ ಅದನ್ನು ಕಾರ್ಯರೂಪಕ್ಕೆ ತರುವು ಅಭಿವೃದ್ಧಿಯ ಹೊಸ ಪರಿಕಲ್ಪನೆಯೇ 'ಸಹಭಾಗಿತ್ವ' ಎಂದಿದ್ದಾರೆ. ಅವರು ತಮ್ಮ ಅಧ್ಯಯನದಲ್ಲಿ ಯಾವ ಅಂಶಗಳು ಅಭಿವೃದ್ಧಿಯ ಮಿಸ್ಸಿಂಗ್ ಲಿಂಕ್ ಆಗಿ ಕೆಲಸ ಮಾಡಿವೇ? ಸೋಶಿಯಲ್ ಕ್ಯಾಪಿಟಲ್ ಇಂದು ಹೇಗೆ ಮತ್ತು ಏಕೇ? ಸೋಶಿಯಾಲ್ ಕ್ಯಾಪಿಟಲ್‌ನ್ನು ಹೇಗೆ ಸಹಭಾಗಿತ್ವದ ಅಡಿಪಾಯವೆಂದು ಮುಂಚೋಣಿಗೆ ತರಲಾಗಿದೆ. ಇತ್ಯಾದಿ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸಿದ್ದಾರೆ.

ಹಿಂದೆ ವ್ಯಕ್ತಿ ಕುಟುಂಬ ಮತ್ತು ಸಮುದಾಯಗಳು ಅಭಿವೃದ್ದಿಗೆ ದಾರಿ ಎನ್ನವು ನಿಲುವು ಬರಬರುತ್ತಾ ಇದರ ಮಹತ್ವ ಕಳೆದುಕೊಳ್ಳುತ್ತಾ ಬಂತು. ಸಮುದಾಯದಿಂದ ವ್ಯಕ್ತಿ ಮತ್ತು ಕುಟುಂಬದ ಕಡೆಗೆ ಅಭಿವೃದ್ಧಿ ಹರಿಯಬೇಕು ಎಂಬ ನೀಲುವು ಬಲಗೊಳ್ಳುತ್ತದೆ. ಈ ಕಾರಣದಿಂದಲೇ ವರ್ತಮಾನದಲ್ಲಿ ಅಭಿವೃದ್ಧಿಯ ಹೊಸ ಮಿಸ್ಸಿಂಗ್ ಲಿಂಕ್ ಸೋಶಿಯಲ್ ಕ್ಯಾಪಿಟಲ್ ತುಂಬಾ ಪ್ರಚಾರದಲ್ಲಿರುವಂತಹದು, ಇದು ಆಧುನೀಕರಣಕ್ಕೆ ಮತ್ತು ಅಭಿವೃದ್ದಿಗೆ ಸಂಪ್ರಾದಾಯಿಕ ನೆಲೆಯನ್ನು ಓದಗಿಸಿದೆ

**ಅಮೇರಿಕದ ಥಿಯರಿಗಳ ಪ್ರಕಾರ** (ಅತಿಕ್ಸಿಡಿ ತೊವಿಲ್ಲೆ, ಜೇಮ್ಸ್ ಎಸ್ ಕೊಲ್‌ಮೆನ್) ಪ್ರಜಾಪ್ರಭುತ್ವದಲ್ಲಿ ಸಿವಿಲ್ ಸೋಸೈಟಿ ಮತ್ತು ಒಳ್ಳೆಯ ಆಡಳಿತ ಸಂಬಂಧವನ್ನು ವಿವರಿಸುತ್ತವೆ. ಸಿವಿಲ್ ಸೋಸೈಟಿ ಮತ್ತು ಅಭಿವೃದ್ದಿಯ ಸಂಬಂಧವನ್ನು ಪರೋಕ್ಷವಾಗಿ ಗುರುತಿಸಿದ್ದಾರೆ.

ಜನರ ಸಹಭಾಗಿತ್ವದ ಹಿಂದೆ ಅಭಿವೃದ್ಧಿಯ ಮಿಸ್ಸಿಂಗ್ ಲಿಂಕ್‌ನ ಹುಡುಕಾಟದ ಪಾತ್ರ ಇದೆ. ಪಾಪಿನಾಯಕನಹಳ್ಳಿಯಲ್ಲಿ ಊರವರೇ ಸ್ವತಂತ್ರವಾಗಿ ಸಂಘಟಿತರಾಗಿ ತಮ್ಮ ನೀರಿನ ಸಮಸ್ಯೆ ಪರಿಹಾರಕ್ಕೆ ಪ್ರಯತ್ನಿಸಿದರು. ಇಲ್ಲಿ ಪ್ರಭುತ್ವ ಯಾವುದೇ ಪಾತ್ರವಹಿಸಲಿಲ್ಲ. ಆದರೆ ವಿಫಲವಾಯಿತು ಏಕೆಂದರೆ ಸಾಂಘಿಕ ಚೌಕಟ್ಟಿನ ಕೊರತೆ ಕಂಡುಬಂದಿತ್ತು. ಮಹಮ್ಮದ್

ನಗರದಲ್ಲಿ ಆ ಕೆಲಸವನ್ನು ಸಹಕಾರಿ ಸಂಘ ಮಾಡಿದೆ. ಜನರು ನೇರವಾಗಿಲ್ಲದಿದ್ದರೂ ಪರೋಕ್ಷವಾಗಿ ತಮ್ಮ ಸದಸ್ಯರ ಮೂಲಕ ತಮ್ಮ ಆಶಯಗಳನ್ನು ವ್ಯಕ್ತಪಡಿಸಿದ್ದಾರೆ. ಸಹಭಾಗಿತ್ವಕ್ಕೆ ಅಗತ್ಯವಿರುವ ಅಂಶಗಳೆಂದರೆ ಸಮಾನತೆ ಮತ್ತು ಸ್ವಾತಂತ್ರ್ಯ ಹೀಗೆ ಲೇಖಕರು ತಮ್ಮ ಅಧ್ಯಯನದಲ್ಲಿ ಹಂತ-ಹಂತವಾಗಿ ಸಮುದಾಯ ಮತ್ತು ಜನರ ಸಹಭಾಗಿತ್ವ ವಾದವನ್ನು ವ್ಯಕ್ತಪಡಿಸಿದ್ದಾರೆ.

ಇದಕ್ಕೆ ಪೂರಕವಾಗಿ **ಸುಧಾ ಪೈ** ರವರು **ಸಮುದಾಯ ಮತ್ತು ಸಹಭಾಗಿತ್ವ** ಕುರಿತಂತೆ ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಗ್ರಾಮ ಪಂಚಾಯತಿ ರಾಜಕೀಯದ ಬಗ್ಗೆ ಅಧ್ಯಯನ ಮಾಡಿದ ಅವರು ಒಂದು ಸಮುದಾಯಕ್ಕೆ ಸೇರಿದವರ ನಡುವೆ ಸೋಶಿಯಲ್ ಕ್ಯಾಪಿಟಲ್ ಇರುತ್ತದೆ. ಆದರೆ ಎರಡು ಸಮುದಾಯಗಳ ನಡುವೆ ಸೋಶಿಯಲ್ ಕ್ಯಾಪಿಟಲ್ ಇರುತ್ತದೆ ಎನ್ನಲು ಸಾಧ್ಯವಿಲ್ಲ.

ಉತ್ತರ ಪ್ರದೇಶದಲ್ಲಿ ಮಾಯಾವತಿ ಮುಖ್ಯ ಮಂತ್ರಿಯಾಗಿದ್ದ ಸಂದರ್ಭದಲ್ಲಿ ಬಹುಜನ ಸಮಾಜವಾದಿ ಪಕ್ಷದ ಪ್ರಭಾವದಿಂದ ಅಲ್ಲಿ ಗ್ರಾಮೀಣ ಪ್ರದೇಶದಲ್ಲೂ ದಲಿತರು ರಾಜಕೀಯ ಸಂಘಟನೆಗಳಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳಲು ಆರಂಭಿಸಿದರು. ದಲಿತ ಸಂಘಟನೆಗಳು ಜಾತಿ ಆಧಾರದಲ್ಲೇ ರೂಪುಗೊಳ್ಳುತ್ತಿದ್ದವು ಮತ್ತು ರಾಜಕೀಯದಲ್ಲಿ ಪಾಲ್ಗೊಳ್ಳುತ್ತಿದ್ದವು. ಅವು ಗ್ರಾಮ ಪಂಚಾಯತ್‌ನಲ್ಲಿ ದಲಿತರ ಪ್ರಭಾವ ಹೆಚ್ಚಿದಂತೆ ಇತರ ಕೆಳಜಾತಿಯವರು ಮತ್ತು ದಲಿತರ ನಡುವೆ ಬಿರುಕು ಹೆಚ್ಚುತ್ತಾ ಹೋಯಿತು. ಹಲವಾರು ಕೆಳಜಾತಿಗಳು ದಲಿತರಷ್ಟೆ ಆರ್ಥಿಕವಾಗಿ ರಾಜಕೀಯವಾಗಿ ಹಿಂದುಳಿದವರು ಇಂತಹ ದಲಿತ ಸಂಘಟನೆಗಳಿಂದ ಹೊರಗುಳಿಯಬೇಕಾಯಿತು. ಒಂದು ಕಾಲದಲ್ಲಿ ದಲಿತರು ಮತ್ತು ಮೇಲ್ಜಾತಿಯ ನಡುವೆ ಬಿರುಕಿತ್ತು. ಆದರೆ ಹೊಸ ರಾಜಕೀಯ ಪ್ರಕ್ರಿಯೆಯಿಂದ ಕೆಳವರ್ಗದ ನಡುವೆ ಬಿರುಕು ಸೃಷ್ಠಿಯಾಯಿತೆಂದು ಅಧ್ಯಯನಕಾರರು ಅಭಿಪ್ರಾಯಪಡುತ್ತಾರೆ.

**ಡಾ. ಟಿ.ಆರ್. ಚಂದ್ರಶೇಖರ್‌ರವರು "ಜನರನ್ನು ಒಳಗೊಳ್ಳುವ ಅಭಿವೃದ್ಧಿ" (ಹೈದ್ರಾಬಾದ್-ಕರ್ನಾಟಕ ಪ್ರದೇಶ ೨೦೦೯)**[೧೮] ಎಂಬ ಅಧ್ಯಯನದಲ್ಲಿ ಜನರನ್ನು ಯಾವ ರೀತಿ ಅಭಿವೃದ್ಧಿಯ ಕರ್ತೃಗಳನ್ನಾಗಿ ಮತ್ತು ಅಭಿವೃದ್ಧಿಯ ಮೇಲಿನ ತಮ್ಮ ಹಕ್ಕುಗಳನ್ನು ಪಡೆದುಕೊಳ್ಳುವುದಕ್ಕಾಗಿ ಹೈದ್ರಾಬಾದ್-ಕರ್ನಾಟಕದ ಐದು ಜಿಲ್ಲೆಗಳ ಅದರಲ್ಲೂ ವಿಶೇಷವಾಗಿ ಗುಲ್ಬಾರ್ಗ ಜಿಲ್ಲೆಯ ಬಗ್ಗೆ ತಮ್ಮ ಅಧ್ಯಯನವನ್ನು ಕೈಗೊಂಡು ಈ ಕೆಳಕಂಡ ಕೆಲವೊಂದು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಜನರನ್ನು ಅಭಿವೃದ್ಧಿಯು ಎಷ್ಟರಮಟ್ಟಿಗೆ ಒಳಗೊಳ್ಳುತ್ತಿದೆಯೆಂಬುದನ್ನು ಸಾಮಾಜಿಕವಾಗಿ ಪರಿಶೀಲಿಸಿದಾಗ ನಮಗೆ ಅನೇಕ ವಿಚಾರಗಳು ಗೋಚರಿಸುತ್ತವೆ. ಬಹಳ ಮುಖ್ಯವಾಗಿ ಅದು ಪರಿಶಿಷ್ಟರನ್ನು ಎಷ್ಟು ಪ್ರಮಾಣದಲ್ಲಿ ಒಳಗೊಳ್ಳಬೇಕೋ ಅಷ್ಟು ಪ್ರಮಾಣದಲ್ಲಿ ಒಳಗೊಳ್ಳುತ್ತಿಲ್ಲ. ಹೈದ್ರಾಬಾದ್-ಕರ್ನಾಟಕ ಪ್ರದೇಶವು

ತೀವ್ರ ಸ್ವರೂಪದ ಪ್ರಾದೇಶಿಕ ಅಸಮಾನತೆಯಿಂದ ನರಳುತ್ತಿದೆ. ಹಾಗೂ ಅಲ್ಲಿ ಅಭಿವೃದ್ಧಿಯು ಜನರನ್ನು ಒಳಗೊಳ್ಳುವುದಕ್ಕೆ ಸಂಬಂಧಿಸಿದಂತೆ ಹಲವಾರು ಸಮಸ್ಯೆಗಳು ಉದಾ: ಪ್ರಾದೇಶಿಕ ಅಸಮಾನತೆ, ಪ್ರಾಥಮಿಕ ಶಿಕ್ಷಣ ಕೊರತೆ, ಅನಕ್ಷರತೆ ಲಿಂಗ ಅಸಮಾನತೆ ಒಣ ಭೂಮಿ ಬೇಸಾಯದ ಪ್ರದೇಶ ಜಮೀನ್ದಾರಿ ಪಾಳೆಗಾರಿಕೆ, ರಾಜಕೀಯ ಅನಭಿವೃದ್ಧಿ, ದು: ಸ್ಥಿತಿ-ಬಡತನ ಇತ್ಯಾದಿ ಸಮಸ್ಯೆಗಳ ಬಗ್ಗೆ ಚರ್ಚಿಸಿದ್ದಾರೆ.

ಈ ಭಾಗದ ಜನರಿಗೆ ವಿಶೇಷ ಅಭಿವೃದ್ಧಿ ಯೋಜನೆಗಳು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳುವಲ್ಲಿ **ಡಾ. ಡಿ. ಎಂ. ನಂಜುಂಡಪ್ಪ ಸಮಿತಿ** ವರದಿಯ **ಪ್ರಮುಖ ಶಿಫಾರಸ್ಸು ಮತ್ತು ಡಾ. ಬಿ. ಶೇಷಾದ್ರಿ (ಸಮಿತಿಯ ಸದಸ್ಯರು ಮತ್ತು ಕನ್ನಡ ವಿವಿಯ ವಿಶ್ರಾಂತಿ ಪ್ರಾಧ್ಯಾಪಕರು)** ಯವರುಗಳು ಶ್ರಮಿಸಿದರು. ಲೇಖಕರು ಕೊನೆಯದಾಗಿ ಹೈದರಾಬಾದ್-ಕರ್ನಾಟಕ ಪ್ರದೇಶದ ಅಭಿವೃದ್ಧಿಗೆ ಹತ್ತು ಸೂತ್ರಗಳನ್ನು ಪಟ್ಟಿಮಾಡಿದ್ದಾರೆ.

೧. ಅಕ್ಷರ ಕ್ರಾಂತಿ

೨. ಶಾಲಾ ದಾಖಲಾತಿ ಕ್ರಾಂತಿ

೩. ಪ್ರಾಥಮಿಕ ಶಿಕ್ಷಣ ಕ್ರಾಂತಿ

೪. ಪೌಷ್ಟಿಕತೆ ಕ್ರಾಂತಿ

೫. ಉದ್ಯೋಗ ಕ್ರಾಂತಿ

೬. ಸಾಮಾಜಿಕ ಬ್ಯಾಂಕಿಂಗ್ ಕ್ರಾಂತಿ

೭. ಆರೋಗ್ಯ ಕ್ರಾಂತಿ

೮. ಸಂತಾನೋತ್ಪತ್ತಿ ಆರೋಗ್ಯ ಕ್ರಾಂತಿ

೯. ಪ್ರಾದೇಶಿಕ ಅಭಿವೃದ್ಧಿ ಕ್ರಾಂತಿ

೧೦. ಲಿಂಗ ಸಮಾನತೆ ಕ್ರಾಂತಿ. ಇವೆಲ್ಲ ಸಂಗತಿಗಳು ಜನರನ್ನು ಒಳಗೊಳ್ಳುವ ಅಭಿವೃದ್ಧಿ ಕಾರ್ಯತಂತ್ರಗಳಾಗಿವೆ ಎಂದು ತಿಳಿಸಿದ್ದಾರೆ.

ಖ್ಯಾತ **ಅರ್ಥಶಾಸ್ತ್ರಜ್ಞರಾದ ಮಹೆಬೂಬ್-ಉಲ್-ಹಕ್‌ರವರ ಪ್ರಕಾರ** ಜನರ ಭಾಗವಹಿಸುವಿಕೆ ಕುರಿತಂತೆ ಹೀಗೆ ಅಭಿಪ್ರಾಯಪಟ್ಟಿದ್ದಾರೆ. ಸರ್ಕಾರದ ನೀತಿ ನಿಯಮಗಳು ಜನರ ಆಶೋತ್ತರಗಳಿಗೆ ತಕ್ಕಂತೆ ಸ್ಪಂಧಿಸುವಂತಿರಬೇಕು, ಜನತೆಯು ಸಕ್ರಿಯವಾಗಿ ಪಾಲ್ಗೊಳ್ಳಬೇಕು. ಜನತೆಯ ಮನೆ ಬಾಗಿಲಿಗೆ ಆಡಳಿತವು ಮತ್ತು ಅಧಿಕಾರವು ವಿಕೇಂದ್ರೀಕರಣಗೊಳ್ಳಬೇಕು. ಅಭಿವೃದ್ಧಿಯು 'ಜನತೆಯಿಂದ ಜನರಿಗೋಸ್ಕರ ಜನರಿಂದ ತಯಾರಾಗಬೇಕು'. ಅಭಿವೃದ್ಧಿಯ ಕೇಂದ್ರ ಬಿಂದು ಜನತೆಯೇ ಆಗಬೇಕು. ಭಾರತದಲ್ಲಿ ಪ್ರಚಲಿತವಿರುವ ಅತಿಕೆಳಮಟ್ಟದ ಯೋಜನೆ-ವಿಧಾನಗಳನ್ನು ಗಮನಿಸಿದರೆ, ಅಭಿವೃದ್ಧಿ

ಯೋಜನೆಗಳ ಪ್ರಕ್ರಿಯೆಯಲ್ಲಿ ಸಾಮನ್ಯ ಜನರ ಭಾಗವಹಿಸುವಿಕೆಗಿಂತ ಆಡಳಿತಗಾರರ ಮತ್ತು ರಾಜಕೀಯ ನಿರ್ಣಾಯಕರ ಭಾಗವಹಿಸುವಿಕೆ ಹೆಚ್ಚಾಗಿದೆ. ಇದರಿಂದ ಯಾವುದೇ ಯೋಜನೆಗಳು ಸಫಲಕಾರಿಯಾಗುವುದಿಲ್ಲ, ಒಂದು ವೇಳೆಯಾದರು, ಅದು ಪರಿಣಾಮತ್ಮಕವಾಗಿ ಅನುಷ್ಠಾನಗೊಳ್ಳಲು ಸಾಧ್ಯವಿಲ್ಲ. ಎಲ್ಲಿ ಜನರ ಪಾಲ್ಗೊಳ್ಳುವಿಕೆ ಇರುತ್ತದೆಯೇ ಅಲ್ಲಿ ಅಭಿವೃದ್ಧಿ ಕಾಣಲು ಸಾಧ್ಯ ಎನ್ನುವುದು ತಜ್ಞರ ವಾದವಾಗಿದೆ.

ಈ ಮೇಲಿನ ಹೇಳಿಕೆಗನ್ವಯವಾಗಿ **ಡಾ. ಕೆ.ಚಂದ್ರಶೇಖರ್‌ರವರು "ಅಭಿವೃದ್ಧಿ ಪಥದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು** (೨೦೦೯)[೧೯] ಎಂಬ ಪುಸ್ತಕದಲ್ಲಿ ಗ್ರಾಮಸಭೆಯ ಸಬಲೀಕರಣಕ್ಕೆ ಮತ್ತು ಜನರ ಭಾಗವಹಿಸುವಿಕೆ ಕುರಿತು ಚರ್ಚಿಸಿದ್ದಾರೆ. ಗ್ರಾಮ ಪಂಚಾಯಿತಿಗಳು ಹಾಗೂ ಅಧಿಕಾರಿಗಳು ಗ್ರಾಮಸಭೆಗಳಿಗೆ ಜವಾಬ್ದಾರಿಯಾಗಿ ಕೆಲಸ ಮಾಡಬೇಕು. ಗ್ರಾಮೀಣ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸಾಧ್ಯವಾದಷ್ಟು ಸ್ಥಳೀಯವಾಗಿ ಜನರು ನೇರವಾಗಿ ಭಾಗವಹಿಸಲು ಅವಕಾಶ ಮಾಡಬೇಕೆಂಬುದೇ ಗ್ರಾಮ ಸಭೆಯ ಉದ್ದೇಶ, ಪಂಚಾಯತ್ ರಾಜ್ ಸಂಸ್ಥೆಗಳು ಜನರು ತಮ್ಮ ಸಮಸ್ಯೆಗಳನ್ನು ಸ್ಥಳೀಯವಾಗಿ ಪರಿಹರಿಸಿಕೊಳ್ಳಲು ಸಹಾಯ ಮಾಡಬೇಕು. ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ಕಾರ್ಯಗಳಲ್ಲಿ ಪಾರದರ್ಶಕತೆ ಮತ್ತು ಕಾಮಗಾರಿ (ದೀರ್ಘಕಾಲಿಕ ಅಭಿವೃದ್ಧಿ ಯೋಜನೆಯ ಕಾಮಗಾರಿ) ಕೆಲಸಗಳಲ್ಲಿ ಗುಣಮಟ್ಟವನ್ನು ಕಾಪಾಡಿಕೊಂಡು ಬರಬೇಕು. ಜನರಿಗೆ ಉತ್ತಮ ಸೇವಾ ಸೌಲಭ್ಯಗಳನ್ನು ಒದಗಿಸಿ ಎಲ್ಲಾ ಅಭಿವೃದ್ಧಿಪರವಾದ ಕೆಲಸಗಳಲ್ಲಿ ಜನರು ಭಾಗವಹಿಸುವಂತೆ ಪ್ರೋತ್ಸಾಹಿಸಬೇಕು. ಅವರಿಗೆ ಬೇಕಾದ ಮಾಹಿತಿ ತಂತ್ರಜ್ಞಾನ ಸೌಲಭ್ಯಗಳನ್ನು ಒದಗಿಸಬೇಕು, ಈ ನಿಟ್ಟಿನಲ್ಲಿಯೇ ಕೇಂದ್ರ ಸರ್ಕಾರ ಕೆಳಹಂತ ಸಂಸ್ಥೆಗಳಿಗೆ ಹಣಕಾಸಿನ ಮತ್ತು ಆಡಳಿತಕ್ಕೆ ಸಂಬಂಧಿಸಿದಂತೆ ಸಬಲೀಕರಣ ಭದ್ರತೆ ಸಮಗ್ರತೆ ಸ್ಥಿರತೆಯನ್ನು ಕಾಪಾಡಬೇಕು.

೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ ಜಾರಿಗೆ ಬಂದು ೨ ದಶಕಗಳಾಗಿದ್ದರು ಈ ವ್ಯವಸ್ಥೆಗಳ ಕಾರ್ಯನಿರ್ವಹಣೆಯಲ್ಲಿ ಹಲವಾರು ಲೋಪದೋಷಗಳು, ಸಮಸ್ಯೆಗಳು ಕಂಡು ಬಂದಿವೆ. ಕರ್ನಾಟಕ ರಾಜ್ಯವು ವಿಕೇಂದ್ರೀಕರಣ ವ್ಯವಸ್ಥೆಗೆ ಬದ್ಧವಾಗಿದ್ದು ಎಲ್ಲಾ ಹಂತದಲ್ಲಿಯೂ ಅಧಿಕಾರವನ್ನು ಪೂರ್ಣವಾಗಿ ವಿಕೇಂದ್ರೀಕರಣಗೊಳಿಸುವ ಧ್ಯೇಯವನ್ನು ಸಾಧಿಸಬೇಕಾದರೆ ಕೇವಲ ಶಾಸನೀಯ ವಿಕೇಂದ್ರೀಕರಣದಿಂದ ಮಾತ್ರ ಸಾಧ್ಯವಿಲ್ಲ. ಆದ್ದರಿಂದ ಆಡಳಿತಾತ್ಮಕ ವಿಕೇಂದ್ರೀಕರಣ ಯೋಜನಾ ವಿಕೇಂದ್ರೀಕರಣ ಮತ್ತು ಸಂಪನ್ಮೂಲಗಳ ವಿಕೇಂದ್ರಿಕರಣವನ್ನು ಅನುಸರಿಸಬೇಕು ಎಂದು ತಿಳಿಸಿರುತ್ತಾರೆ.

**ಡಾ॥ ಎಂ.ಎಂ.ಭಟ್ಟರವರು**[೨೦] ಅಭಿವೃದ್ಧಿ ಯೋಜನೆಗಳಲ್ಲಿ ಜನ ಸಾಮಾನ್ಯರ ಹಿತಾಸಕ್ತಿಗೆ ಪ್ರೇರಣೆ ನೀಡುವುದು ಮುಖ್ಯಪ್ರಮೇಯವನ್ನಾಗಿಟ್ಟುಕೊಂಡು ವಿಷಯವನ್ನು ವಿವರಿಸಿದ್ದಾರೆ. ಗ್ರಾಮೀಣ ಪ್ರದೇಶಕ್ಕೆ ಸಂಬಂಧಿಸಿದಂತೆ ಸರ್ಕಾರವು ಹಮ್ಮಿಕೊಳ್ಳುವ ಅಭಿವೃದ್ಧಿ ಯೋಜನೆಯ

ನೆರವು ಅರ್ಹವ್ಯಕ್ತಿಗೆ ದೊರಕುವಂತೆ ಸರಿಯಾದ ಫಲಾನುಭವಿಯನ್ನು ಗುರುತಿಸಲು ಗ್ರಾಮಸಭೆಗೆ ನೆರವಾಗಬೇಕು. ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವಾಗ ಅದು ಯಶಸ್ವಿಯಾಗುವಂತೆ ಸಹಕರಿಸಬೇಕು, ಅದಕ್ಕೆ ಬೇಕಾದ ಸಂಪನ್ಮೂಲ (ಮಾನವ ಸಂಪನ್ಮೂಲ, ಹಣಕಾಸಿನ ಸಂಪನ್ಮೂಲ)ಗಳನ್ನು ಒದಗಿಸಿ, ಸಮುದಾಯ ಕಲ್ಯಾಣ ಕಾರ್ಯಗಳಿಗೆ ಜನರಿಂದ ಶ್ರಮದಾನವನ್ನು ನಗದು ಮತ್ತು ವಸ್ತುರೂಪದ ದೇಣಿಗೆಯನ್ನು ಸಂಗ್ರಹಿಸಬೇಕು. ಗ್ರಾಮದ ಸಮಗ್ರ ಅಭಿವೃದ್ಧಿ ಜನರ ಅಭಿವೃದ್ಧಿಯಾಗಿದ್ದು, ವಾರ್ಷಿಕ ಯೋಜನೆಗಳು ಜನರ ಹಿತಾಸಕ್ತಿ, ಬೇಕು-ಬೇಡಿಕೆಗಳಿಗೆ ಅನುಗುಣವಾಗಿ ಸಿದ್ದಪಡಿಸಬೇಕು. ಯೋಜನೆಗಳು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ.

**ಟಿ.ಎಂ. ಥಾಮಸ್ ಐಸಾಕ್, ರಿಚರ್ಡ್ ಡಬ್ಲೂ ಫ್ರಾಂಕ್** ರವರು ಕೇರಳದಲ್ಲಿನ ವಿಕೇಂದ್ರೀಕರಣ ಪ್ರಜಾಪ್ರಭುತ್ವ ಹಾಗೂ ಅಭಿವೃದ್ಧಿ ಕುರಿತು ಚರ್ಚಿಸಿದ್ದಾರೆ.[೨೧] ಅಭಿವೃದ್ಧಿಗೆ ಸಂಬಂಧಪಟ್ಟಂತೆ ಕೇರಳವು ಇಂದು ಎದುರಿಸುತ್ತಿರುವ **'ಕ್ರೈಸಿಸ್'**ನಿಂದ ಹೊರಬರಲು ಅದು ರೂಪಿಸಿಕೊಂಡಿರುವ ಪರಿಹಾರ ಕಾರ್ಯಕ್ರಮವೇ 'ವಿಕೇಂದ್ರೀಕೃತ ಯೋಜನೆಗಾಗಿ 'ಜನರ ಅಭಿಯಾನ'ವೆಂದು ಹೇಳಲಾಗಿದೆ.ಅಭಿವೃದ್ದಿಗೆ ಕುರಿತ ಮೂಲಧಾರೆ ಸಿದ್ಧಾಂತಗಳಿಗೂ ಮತ್ತು ಕೇರಳದಲ್ಲಿನ ಅಭಿವೃದ್ದಿಯ ಸ್ವರೂಪಕ್ಕೆ ವಿಭಿನ್ನತೆ ಇದೆ. ಈ ಕಾರಣಕ್ಕಾಗಿಯೇ ಅದು ಜಗತ್ತಿನ ಗಮನ ಸೆಳೆದಿದೆ." ಹಂಚಿಕೆ ಮೊದಲು; ಉತ್ಪಾದನೆ ನಂತರ" ಎಂಬ ಸೂತ್ರ ಅಳವಡಿಸಿಕೊಂಡು ಕೇರಳವು ಮುಂದುವರೆದಿದೆ. ಈ ದಿಶೆಯಲ್ಲಿ ಅದು ಅದ್ಭುತ ಸಾಧನೆಯನ್ನು ಮಾಡಿದೆ. ಜನರಿಗೆ ಆಹಾರದ ಭದ್ರತೆ ಅಕ್ಷರ ಜ್ಞಾನ, ಆರೋಗ್ಯ ಭಾಗ್ಯ ಮತ್ತು ತಲೆಯ ಮೇಲೊಂದು ಸೂರನ್ನು ಒದಗಿಸುವಲ್ಲಿ ಕ್ರಾಂತಿಕಾರಕ ಸಾಧನೆಯನ್ನು ಸಾಧಿಸಿದೆ.

ವಿಕೇಂದ್ರೀಕರಣವು ರಾಜಕೀಯ ನೆಲೆಯಿಂದ ಸಾಮಾಜಿಕ ಆರ್ಥಿಕ ನೆಲೆಯಿಂದ ಪಲ್ಲಟಗೊಂಡಿರುವುದನ್ನು ತಮ್ಮ ಪ್ರಸ್ತುತ ಗ್ರಂಥದಲ್ಲಿ ಹೇಳಿದ್ದಾರೆ. ಅಲ್ಲದೆ ವಿಕೇಂದ್ರೀಕರಣವು ಅಭಿವೃದ್ಧಿಯ ದೃಷ್ಟಿಯಿಂದ ಎಷ್ಟು ಅಗತ್ಯ ಮತ್ತು ಅನಿವಾರ್ಯವೆಂಬುದನ್ನು ತೋರಿಸಿಕೊಟ್ಟಿದ್ದಾರೆ. ವಿಕೇಂದ್ರೀಕರಣವನ್ನು ಕುರಿತಂತೆ ಅವರು ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಪರಿಶೀಲಿಸಲು ಪ್ರಯತ್ನಿಸಿದ್ದಾರೆ, ಜನ ತಾಂತ್ರಿಕ ಕೇಂದ್ರೀಕರಣ ಎನ್ನುವುದು ಕಮ್ಯುನಿಸ್ಟ್ ಪಕ್ಷದ ಸಂಘಟನಾತ್ಮಕ ನಿಯಮ ಇದಕ್ಕೆ ಪ್ರತಿಯಾಗಿ ಜನತಾಂತ್ರಿಕ ವಿಕೇಂದ್ರೀಕರಣವೆನ್ನುವುದು ರಾಜ್ಯ ನಿರ್ವಹಣೆಯ ತತ್ವ ಈ ತತ್ವಕ್ಕೆ ಕಮ್ಯುನಿಸ್ಟ್ ಪಕ್ಷವು ಬದ್ಧವಾಗಿದೆ. ಮತ್ತು ವಿಕೇಂದ್ರೀಕರಣವು ತಳಮಟ್ಟದಲ್ಲಿನ ಜನರ ಒತ್ತಡ ಹಾಗೂ ಅಭಿಲಾಷೆಯ ಮುಖಾಂತರ ನೆಲೆಗೊಳ್ಳಬೇಕಾಗಿದೆ ಎಂಬುವುದು ಲೇಖಕರ ಅಭಿಪ್ರಾಯವಾಗಿದೆ.

ವಿಕೇಂದ್ರೀಕರಣ ಕುರಿತಂತೆ **ಎಂ. ದೇವೇಂದ್ರ ಬಾಬು**[೨೨] ಅವರು ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ದಕ್ಷಿಣ ಭಾರತದ ಪ್ರಮುಖ ಮೂರು ರಾಜ್ಯಗಳಾದ ಕನಾಟಕ, ಆಂಧ್ರಪ್ರದೇಶ,

ತಮಿಳುನಾಡು, ರಾಜ್ಯಗಳ ಸಂವಿಧಾನದ ೭೩ರ ತಿದ್ದುಪಡಿಯ ನಂತರ ಬಂದಂತಹ ಪಂಚಾಯತ್ ರಾಜ್ಯ ವ್ಯವಸ್ಥೆಯ ಅಥವಾ ಸಂಸ್ಥೆಗಳ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆ ಕುರಿತು ತೌಲನಿಕ ಅಧ್ಯಯನವನ್ನು ಕೈಗೊಂಡಿದ್ದು, ಮೂರು ರಾಜ್ಯಗಳು ಮೂರು ಹಂತದ ಪಂಚಾಯತ್ ವ್ಯವಸ್ಥೆಯನ್ನು ಹೊಂದಿದ್ದು ರಚನೆ, ಕಾರ್ಯಕ್ಷಮತೆ, ಅಧಿಕಾರ ಹಂಚಿಕೆಗಳಲ್ಲಿ ಭಿನ್ನತೆ ಹೊಂದಿರುವುದನ್ನು ಗುರುತಿಸಿದ್ದಾರೆ. ಉದಾಹರಣೆ: ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಮೀಸಲಾತಿಯು ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಒಂದೇ ಆಗಿದ್ದು ಅಂದರೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಮಹಿಳೆಯರಿಗೆ ಮತ್ತು ಹಿಂದುಳಿದ ವರ್ಗದವರಿಗೆ ಮೀಸಲಾತಿ ಪ್ರಾತಿನಿಧ್ಯವಿದ್ದು, ಆದರೆ ತಮಿಳುನಾಡಿನಲ್ಲಿ ಹಿಂದುಳಿದ ವರ್ಗದವರಿಗೆ ಮೀಸಲಾತಿ ಪ್ರತಿನಿದ್ಯವಿಲ್ಲ, ಅಲ್ಲದೇ ಸದಸ್ಯರ ಆಯ್ಕೆಯಲ್ಲಿಯೂ ಸಹ ಇವೆರಡೂ ರಾಜ್ಯಗಳಿಗಿಂತ ಭಿನ್ನತೆ ಹೊಂದಿವೆಂದು,ಹೀಗೆ ಹಲವಾರು ಭಿನ್ನತೆಯ ರೂಪವನ್ನು ತಮ್ಮ ಲೇಖನದಲ್ಲಿ ಗುರುತಿಸಿದ್ದಾರೆ.

ಅಧಿಕಾರ ಹಂಚಿಕೆಯಲ್ಲಿ ಎರಡು ರಾಜ್ಯಗಳಿಗಿಂತ ಕರ್ನಾಟಕ ರಾಜ್ಯ ಸರ್ಕಾರವು ಕೆಳಹಂತದ ಸರ್ಕಾರಗಳಿಗೆ ಹೆಚ್ಚಿನ ಜವಬ್ದಾರಿಯನ್ನು ವಹಿಸಿಕೊಟ್ಟಿದೆ. ತಮಿಳುನಾಡಿನ ಪಂಚಾಯತ್ ರಾಜ್ ವ್ಯವಸ್ಥೆಯಡಿಯಲ್ಲಿ ಯಾವುದೇ ಯೋಜನೆಗಳ ಅನುಷ್ಠಾನದಲ್ಲಿ ವಿಳಂಬ ಮತ್ತು ವಿಫಲತೆಯನ್ನು ಹೊಂದಿದೆ. ಏಕೆಂದರೆ ಅಲ್ಲಿ ಅಧಿಕಾರಶಾಹಿತ್ವದ ಪ್ರಭಾವ ಅಧಿಕಾರ ಹಂಚಿಕೆಯಲ್ಲಿ ಶಾಸಕರುಗಳು ಹಸ್ತಕ್ಷೇಪ ಮತ್ತು ಜಿಲ್ಲಾ ಯೋಜನಾ ಸಮಿತಿಯ ವಿಫಲತೆ ಹೀಗೆ ಹಲವಾರು ಕಾರಣಗಳಿಂದ ವಿಕೇಂದ್ರೀಕರಣಕ್ಕೆ ಅಡ್ಡಿಯುಂಟಾದಂತಾಗಿದೆ.

ಒಟ್ಟಾರೆ ಅವರು ಮೂರು ರಾಜ್ಯಗಳ ತೌಲನಿಕ ಅಧ್ಯಯನ ನಡೆಸಿ ವಿಕೇಂದ್ರೀಕರಣ ದೃಷ್ಟಿಯಿಂದ ಕರ್ನಾಟಕವು ತನ್ನ ಎಲ್ಲಾ ಕಾರ್ಯಕಲಾಪಗಳಲ್ಲಿ [ಕಂದಾಯ, ತೆರಿಗೆ, ಹಣಕಾಸು, ಆಡಳಿತ, ಸಿಬ್ಬಂದಿ ವರ್ಗ ಇತ್ಯಾದಿ] ಪ್ರಥಮ ಸ್ಥಾನದಲ್ಲಿದ್ದು, ನಂತರದ ದ್ವಿತೀಯ ಮತ್ತು ತೃತೀಯ ಸ್ಥಾನಗಳಲ್ಲಿ ಆಂಧ್ರಪ್ರದೇಶ ಮತ್ತು ತಮಿಳುನಾಡು ಕ್ರಮವಾಗಿವೆಂದು ವಾದಿಸಿದ್ದಾರೆ.

**ಯರಿಸ್ವಾಮಿ ಎಂ.** ಅವರು "ಗ್ರಾಮಪಂಚಾಯತಿ ಮತ್ತು ಸಬಲೀಕರಣ" (೨೦೦೨) ಎಂಬ ಪಿ.ಎಚ್.ಡಿ. ಮಹಾಪ್ರಬಂಧದಲ್ಲಿ ಪ್ರಸ್ತುತ ಸಮಾಜದಲ್ಲಿ ವಿಕೇಂದ್ರೀಕರಣದ ಕೆಳಸ್ತರವಾದ ಗ್ರಾಮ ಪಂಚಾಯತಿಯ ಕಾರ್ಯ ನಿರ್ವಹಣೆ, ಇದರಿಂದ ಬಡವರ ಮತ್ತು ಕಳವರ್ಗಗಳ ಸಬಲೀಕರಣ ಹೇಗಾಗುತ್ತದೆ. ಇಲ್ಲಿಯ ತೊಡುಕುಗಳು, ಈ ವಿಚಾರಗಳ ಸೂಕ್ಷ್ಮ ಒಳನೋಟಗಳನ್ನು ಚರ್ಚಿಸಿದ್ದಾರೆ.

ವಿಕೇಂದ್ರೀಕರಣ ವ್ಯವಸ್ಥೆಯ ಭದ್ರಬುನಾದಿಯಾಗಿರುವ ಗ್ರಾಮ ಪಂಚಾಯಿತಿಯ ಮೂಲಕ ಕೆಳವರ್ಗಗಳ ಮತ್ತು ಬಡವರ ಸಬಲೀಕರಣ ಆರ್ಥಿಕ ಹಾಗೂ ಸಾಮಾಜಿಕ

ಪರಿವರ್ತನೆಯನ್ನು ಅಧ್ಯಯನ ಮಾಡುವುದು ಈ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿಟ್ಟುಕೊಂಡು ಅವರು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ನೀರಾವರಿ ಪ್ರದೇಶವಾದ ನಾಗೇನಹಳ್ಳಿ ಗ್ರಾಮ ಪಂಚಾಯಿತಿ ಮತ್ತು ಒಣ ಭೂಮಿ ಪ್ರದೇಶವಾದ ಬೈಲು ವದ್ದಿಗೇರೆ ಗ್ರಾಮ ಪಂಚಾಯಿತಿ ಹಾಗೂ ಕೂಡ್ಲಿಗಿ ತಾಲ್ಲೂಕಿನ ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ ಗ್ರಾಮಪಂಚಾಯಿತಿ ಮತ್ತು ಒಣಭೂಮಿ ಪ್ರದೇಶವಾದ ಉಜ್ಜನಿ ಗ್ರಾಮ ಪಂಚಾಯತಿಗಳನ್ನು ಆಯ್ಕೆ ಮಾಡಿಕೊಂಡು ಅವರು ಈ ನಾಲ್ಕು ಗ್ರಾಮ ಪಂಚಾಯತಿಗಳ ತೌಲನಿಕ ಅಧ್ಯಯನವನ್ನು ಕೈಗೊಂಡು ಕೆಳಕಂಡ ಅಂಶಗಳನ್ನು ವಿವರಿಸಿದ್ದಾರೆ.

ಅಧ್ಯಯನ ಕೈಗೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಯೋಜನೆಗಳ ಅನುಷ್ಠಾನವನ್ನು ಇಲ್ಲಿ ತುಲನಾತ್ಮಕವಾಗಿ ಚರ್ಚಿಸಿದ್ದಾರೆ, ಇಡೀ ಗ್ರಾಮ ಸಮುದಾಯಕ್ಕೆ ಅತಿ ಅವಶ್ಯಕವಾಗಿರುವ ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರು, ನೈರ್ಮಲ್ಯೀಕರಣ, ಶಿಕ್ಷಣ ವಸತಿ ಯೋಜನೆಗಳ ಅನುಷ್ಠಾನ, ಲಿಂಗವಾರು, ಜಾತಿವಾರು, ಪ್ರಾತಿನಿಧ್ಯ, ಜನರ ಭಾಗವಹಿಸುವಿಕೆ ಮತ್ತು ನಾಲ್ಕು ಗ್ರಾಮ ಪಂಚಾಯಿತಿಗಳಿಗೆ ಸಂಬಂಧಿಸಿದಂತೆ ಅಂಕಿ–ಅಂಶಗಳ ಸಮೇತ ವಿವರಿಸಿದ್ದು, ಒಣಭೂಮಿ ಗ್ರಾಮ ಪಂಚಾಯಿತಿಗಳ (ಬೈಲುವದ್ದಿಗೆರೆ ಮತ್ತು ಉಜ್ಜನಿ)ಲ್ಲಿ ಕಾಮಗಾರಿ ಕೆಲಸಗಳು ಮತ್ತು ಇನ್ನಿತರ ಅಭಿವೃದ್ಧಿ ಯೋಜನೆಗಳು ಉದ್ದೇಶಿತ ವರ್ಗಗಳಿಗೆ ತಲುಪಿಲ್ಲ. ವಿಕೇಂದ್ರೀಕರಣದ ಆಶಯ ಇಲ್ಲಿ ನಡೆಯದೆ ಇರುವುದಕ್ಕೆ ಅನೇಕ ಕಾರಣಗಳನ್ನು ಗುರುತಿಸಿದ್ದಾರೆ. ಉದಾ: ಗ್ರಾಮ ಸಭೆ ಸರಿಯಾಗಿ ನಡಯದೇ ಇರುವುದು. ಕೆಳವರ್ಗದ ಜನರ ಆರ್ಥಿಕ ಮತ್ತು ಸಾಮಾಜಿಕ ದೌರ್ಬಲ್ಯ, ಅಭಿವೃದ್ಧಿ ಸವಲತ್ತು ಪಡೆಯುವಲ್ಲಿ ಇನ್ನೂ ಶಕ್ತರಾಗಿಲ್ಲ, ಆದರೆ ಶೈಕ್ಷಣಿಕ ಸವಲತ್ತು ಹೊಸಪೇಟೆ ತಾಲ್ಲೂಕಿಗಿಂತ ಕೂಡ್ಲಿಗಿ (ಹಿಂದುಳಿದ ತಾಲ್ಲೂಕು)ಯ ಎರಡು ಗ್ರಾಮ ಪಂಚಾಯಿತಿಗಳ ಅದರ ಲಾಭವನ್ನು ಪಡೆದುಕೊಂಡಿವೆ. ಹೀಗೆ ಚಿಂತಕರು ಗ್ರಾಮ ಪಂಚಾಯತಿ ಯೋಜನೆಯ ಫಲಗಳು ಅರ್ಹವರ್ಗದವರಿಗೆ ತಲುಪಿಲ್ಲ ಎಂದು ತಿಳಿಸಿದ್ದಾರೆ.

**ಡಾ. ಟಿ.ಆರ್. ಚಂದ್ರಶೇಖರ್‌ರವರು** ವಿಕೇಂದ್ರೀಕರಣ ಮತ್ತು ಅಭಿವೃದ್ಧಿಗೆ ಸಂಬಂಧಪಟ್ಟಂತೆ **ಡಾ. ಡಿ.ಎಂ. ನಂಜುಂಡಪ್ಪರವರು** ಹೇಳಿರುವಂತೆ[೨೨] ಗ್ರಾಮೀಣ ಅಭಿವೃದ್ಧಿ ಎನ್ನುವುದು ಒಂದು ನೆಲೆಯಲ್ಲಿ 'ಪ್ರದೇಶ ಅಭಿವೃದ್ಧಿಯೇ ಆಗಿದೆ. ಒಂದು ಪ್ರದೇಶ ಅಭಿವೃದ್ಧಿ ಹೊಂದಿದರೆ, ಅದು ಇಡೀ ಸಮಾಜದ ಅಥವಾ ಒಂದು ದೇಶದ ಅಭಿವೃದ್ಧಿ ಎಂದಿದ್ದಾರೆ, ಇದಕ್ಕೆ ಪ್ರತಿಯಾಗಿ ಲೇಖಕರು ಗ್ರಾಮವನ್ನು ಅಥವಾ ಗ್ರಾಮ ಪಂಚಾಯಿತಿಯನ್ನು ಯೋಜನೆಯ ಘಟಕವನ್ನಾಗಿ ಮಾಡಿಕೊಂಡು ಅಭಿವೃದ್ಧಿಯನ್ನು ಸಂಘಟಿಸುವ ಪದ್ಧತಿ ಇನ್ನು ರೂಡಿಗೆ ಬಂದಿಲ್ಲ. ತಜ್ಞರೇನೋ ವಲಯವಾರು ಯೋಜನೆಗೆ ಪ್ರತಿಯಾಗಿ ಪ್ರದೇಶವನ್ನು ಘಟಕವನ್ನಾಗಿ ಮಾಡಿಕೊಂಡು ಅಭಿವೃದ್ಧಿ ಯೋಜನೆಯನ್ನು ರೂಪಿಸುವ ಆಗತ್ಯವನ್ನು ಒತ್ತಿ

ಹೇಳುತ್ತಿದ್ದಾರೆ. ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಪ್ರದೇಶಯೋಜನೆ ಪದ್ಧತಿ ಆಧರಿಸಿ ಅಭಿವೃದ್ಧಿ ಯೋಜನೆ ರೂಪುಗೊಳ್ಳಬೇಕು. ಜಿಲ್ಲೆ–ತಾಲ್ಲೂಕು–ಗ್ರಾಮ–ಗ್ರಾಮಪಂಚಾಯತಿ ಹೀಗೆ ಒಂದು ಘಟಕವನ್ನು ಮೂಲವಾಗಿಟ್ಟುಕೊಂಡು ಯೋಜನೆ ರೂಪಿಸುವ ಅಗತ್ಯವಿದೆ. ಇದರಿಂದ ಪ್ರದೇಶ ನಿರ್ದಿಷ್ಟ ಸಂಗತಿಗಳಿಗೆ ಒತ್ತು ದೊರೆಯುತ್ತದೆ. ಅಲ್ಲಿನ ಸಂಪನ್ಮೂಲಗಳ ಸೂಕ್ತ ಬಳಕೆ ಇದರಿಂದ ಸಾಧ್ಯವಾಗುತ್ತದೆ. ಪ್ರದೇಶ ಯೋಜನೆ ಪದ್ಧತಿಯಲ್ಲಿ ಮಾತ್ರ ಯೋಜನೆ ಸಿದ್ಧಪಡಿಸುವ ಕಾರ್ಯವು ತಳಮಟ್ಟಕ್ಕೆ ಹರಿದು ಬರುವುದು ಸಾಧ್ಯ. ವಲಯವಾರು ಯೋಜನೆಯಿಂದ ವಿಕೇಂದ್ರೀಕರಣಕ್ಕೆ ನ್ಯಾಯ ದೊರೆಯಲಾರದು, ನಿಜವಾದ ವಿಕೇಂದ್ರೀಕೃತ ವ್ಯವಸ್ಥೆಯ ಯೋಜನೆಗಳು ಪ್ರದೇಶವಾರು ತಕ್ಕಂತೆ ರೂಪಿಸಿದಾಗ ಮಾತ್ರ ವಿಕೇಂದ್ರೀಕರಣಕ್ಕೆ ನ್ಯಾಯ ದೊರೆತಂತಾಗುತ್ತದೆ.

**ಪದ್ಮರಾಜ ದಂಡಾವತಿ** ಎಂಬ ಲೇಖಕರು ವಿಕೇಂದ್ರೀಕರಣ ಕುರಿತು ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅಧಿಕಾರ ವಿಕೇಂದ್ರೀಕರಣ ಎಂಬುವುದು ಆಡಳಿತ ಪಕ್ಷ ವಿರೋಧ ಪಕ್ಷಗಳಿಗೆ ಹೇಳಲು ಆಚಾರ, ತಿನ್ನಲು ಬದನೆಕಾಯಿ ಎಲ್ಲರಲ್ಲೂ ಪಾಳೆಗಾರಿಕೆ ಮನಸ್ಸಿನ ಪಳೆಯುಳಿಕೆಗಳು ಇನ್ನೂ ಗಟ್ಟಿಯಾಗಿಯೇ ಇವೆ. ಯಾವ ಪಕ್ಷದ ಶಾಸಕರಿಗೂ ತಮ್ಮ ಅಧಿಕಾರವನ್ನು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಬಿಟ್ಟುಕೊಡಲು ಸಾಧ್ಯವಿಲ್ಲ. ಅಧಿಕಾರವೆಲ್ಲವೂ ತಮ್ಮಲ್ಲಿಯೇ ಇರಬೇಕು ಎಂಬ 'ಅಹಂ'ಕಾರ ಅವರಿಗೆ–ಇದು ಯಾವುದೇ ತಾಲೂಕಿನ ಗ್ರಾಮ ಪಂಚಾಯತಿಯಿಂದ ಹಿಡಿದು ಬೆಂಗಳೂರು ಮಹಾನಗರ ಪಾಲಿಕೆವರೆಗೂ ಅನ್ವಯಿಸುವ ಮಾತು. ಎಲ್ಲಾ ಕಡೆಯೂ ಶಾಸಕರ ಹಾಗೂ ಸಚಿವರ ಮಾತೇ ನಡೆಯಬೇಕು. ಕರ್ನಾಟಕದಲ್ಲಿ ಮೊದಲ ಸಲ ಪಂಚಾಯತ್ ರಾಜ್ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದಾಗ ಇದ್ದ ಅಡ್ಡಿಮಾಡುವ ಮನೋಭಾವ ಮೂರು ದಶಕಗಳೇ ಕಳೆದು ಹೋದರೂ ಈಗಲೂ ಬದಲಾಗಿಲ್ಲ. ಅದನ್ನು ಒಪ್ಪಿಕೊಳ್ಳಬೇಕೆಂಬ ತಿಳಿವಳಿಕೆ ಬಂದಿಲ್ಲ. ಒಟ್ಟಿನಲ್ಲಿ ತಮಗೆ (ಶಾಸಕರುಗಳಿಗೆ) ಅಧಿಕಾರ ಸಿಕ್ಕ ಮೇಲೆ ಪಂಚಾಯತಿ ರಾಜ್ ಸಂಸ್ಥೆಗಳು ಅವರ ಕೈ ಹಿಡಿತದಲ್ಲಿ ಎಂದು ವಾದಿಸಿದ್ದಾರೆ.

**ಡಾ॥ ಎಂ. ಚಂದ್ರಪೂಜಾರಿರವರು** ಆಡಳಿತ ವಿಕೇಂದ್ರೀಕರಣ ಮತ್ತು ಹಣಕಾಸಿನ ವಿಕೇಂದ್ರೀಕರಣಗಳ ಕುರಿತಾಗಿ ಹೀಗೆ ಹೇಳಿದ್ದಾರೆ.[೨೪] ಎರಡು ದೃಷ್ಟಿಕೋನಗಳು ವಿಕೇಂದ್ರೀಕರಣ ಪ್ರಕ್ರಿಯೆಯನ್ನು ಪ್ರಭಾವಿಸುತ್ತಿವೆ. ಒಂದು ಅಭಿವೃದ್ಧಿ ನಿರ್ವಹಣೆಯ ದೃಷ್ಟಿಕೋನ ಮತ್ತು ಎರಡು ವಿಕೇಂದ್ರೀಕೃತ ಪ್ರಜಾಪ್ರಭುತ್ವ ಅಥವಾ ಸ್ಥಳೀಯ ಸರ್ಕಾರದ ದೃಷ್ಟಿಕೋನ ಅಭಿವೃದ್ಧಿ ನಿರ್ವಹಣೆಯ ದೃಷ್ಟಿಕೋನದಿಂದ ನೋಡುವವರಿಗೆ ಅಭಿವೃದ್ಧಿ ಸವಲತ್ತುಗಳನ್ನು ಕಡಿಮೆ ವೆಚ್ಚದಲ್ಲಿ ಜನಸಾಮಾನ್ಯರಿಗೆ ತಲುಪಿಸುವುದು ವಿಕೇಂದ್ರೀಕರಣವಾಗಿದೆ, ಇದನ್ನು ಅರ್ಥಶಾಸ್ತ್ರೀಯ ವಿಕೇಂದ್ರೀಕರಣ ಎನ್ನಬಹುದು. ಅಭಿವೃದ್ಧಿಯನ್ನು ಮತ್ತೊಂದು ದಡದಲ್ಲಿ ಅಂದರೆ ಜನಸಾಮಾನ್ಯರ ಸ್ಥಾನದಲ್ಲಿ ನಿಂತು ಆಲೋಚನೆ ಮಾಡಿದರೆ ವಿಕೇಂದ್ರೀಕರಣದ ಇನ್ನೊಂದು

ರೂಪ ಪರಿಚಯವಾಗುತ್ತದೆ. ಇಲ್ಲಿ ವಿಕೇಂದ್ರೀಕರಣದ ಉದ್ದೇಶ ಅಭಿವೃದ್ಧಿ ಸವಲತ್ತುಗಳನ್ನು ಕಡಿಮೆ ವೆಚ್ಚದಲ್ಲಿ ಜನರಿಗೆ ತಲುಪಿಸುವುದಲ್ಲಿ ಜನಸಾಮನ್ಯರು ತಮ್ಮ ಆದ್ಯತೆಗಳಿಗನುಸಾರ ಆದರ್ಶ ಸಮಾಜ ರೂಪಿಸಿಕೊಳ್ಳುವುದು ಅಥವಾ ಕಾರ್ಯರೂಪಕ್ಕೆ ತರುವ ಸ್ವಾತಂತ್ರ್ಯ ಸಮಾನತೆ ಮತ್ತು ಅಧಿಕಾರವನ್ನು ಹೊಂದುವುದು ಬದಲೀ ವಿಕೇಂದ್ರೀಕರಣದ ಉದ್ದೇಶ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಕ್ಕೂ ಪೂರಕ ಸಂಬಂಧವನ್ನು ಲೇಖಕರು ಕಲ್ಪಿಸಿದ್ದಾರೆ.

ಹಾಗೆಯೇ ತಮ್ಮ ಅಧ್ಯಯನದಲ್ಲಿ ಆಡಳಿತ ವಿಕೇಂದ್ರೀಕರಣಕ್ಕೂ ಮತ್ತು ಹಣಕಾಸಿನ ವಿಕೇಂದ್ರೀಕರಣಕ್ಕೂ ಪೂರಕವಾಗಿದ್ದು, ಪ್ರಜಾಪ್ರಭುತ್ವ ಜಾರಿಗೆ ಬರಬೇಕಾದರೆ ಪಂಚಾಯತಿಗಳು ತಮ್ಮ ಬೇಕು-ಬೇಡಗಳನ್ನು ಆದ್ಯತೆಗಳನ್ನು ಗಮನದಲ್ಲಿಕೊಂಡು ಯೋಜನೆಗಳನ್ನು ಸಿದ್ಧಗೊಳ್ಳಿಸಬೇಕು. ಮತ್ತು ಅವುಗಳನ್ನು ಕಾರ್ಯರೂಪಕ್ಕೆ ತರಬೇಕು, ಅದಕ್ಕೆ ಬೇಕಾದ ಹಣಕಾಸಿನ ಸಂಪನ್ಮೂಲವನ್ನು ಹೊಂದಿಸಲು ಮೇಲ್‌ಸ್ತರದ ಸರಕಾರಗಳು ವಿಶೇಷ ಶ್ರಮಪಡುವ ಆಗತ್ಯವಿಲ್ಲ, ಆಯಾ ಕ್ಷೇತ್ರಗಳ ಜನಪ್ರತಿನಿಧಿಗಳ ಉದಾ: ಎಂ.ಪಿ., ಎಂ.ಎಲ್.ಎ. ಹಾಗೂ ಕೆಲವು ಎಂ.ಎಲ್.ಸಿ.ಗಳ ಅನುದಾನ ಹಣ ಮತ್ತು ಪ್ರತಿ ಪಂಚಾಯತ್ ವಾರ್ಷಿಕ ಎರಡು ಕೋಟಿ ರೂಪಾಯಿಗಳ ನೇರ ಅನುದಾನ, ಈ ಎಲ್ಲ ಅನುದಾನಗಳನ್ನು ಪಂಚಾಯತ್ ಮಟ್ಟಕ್ಕೆ ತಂದರೆ, ಕೂಡಲೇ ಕೆಲಸಗಳಾಗುವುದಿಲ್ಲ, ಸಿಬ್ಬಂದಿ, ನೇರ ನೇಮಕಾತಿ ಕಾಮಗಾರಿ ಕೆಲಸಗಳು, ಇತ್ಯಾದಿಗಳ ಸಮಸ್ಯೆಗಳಿಂದಾಗಿ ಜನಸಾಮಾನ್ಯರ ಸಶಕ್ತೀಕರಣ ಪ್ರಕ್ರಿಯೆಯನ್ನು ಸರಕಾರಗಳು ಕುಂಠಿತಗೊಳಿಸುತ್ತಿವೆ. ಹಣಕಾಸು ವಿಕೇಂದ್ರೀಕರಣ ಆಡಳಿತ ವಿಕೇಂದ್ರೀಕರಣ ಮತ್ತು ಸಾಂಸ್ಥಿಕ ವಿಕೇಂದ್ರೀಕರಣ ಪರಿಣಾಮಕಾರಿಯಾಗಿ ನಡೆಯಬೇಕಾದರೆ ಹಾಗೂ ವಿಕೇಂದ್ರೀಕರಣ ಪ್ರಜಾಪ್ರಭುತ್ವ ಆಚರಣೆಗೆ ಬರಬೇಕಾದರೆ, ಜನರ ಬೇಕು-ಬೇಡಿಕೆಗಳನ್ನು ಗಮನದಲ್ಲಿಟ್ಟುಕೊಂಡು ಪಂಚಾಯತ್ ಮಟ್ಟದಿಂದಲೇ ಯೋಜನೆಗಳನ್ನು ಸಿದ್ಧಪಡಿಸುವುದು. ಸಿದ್ಧಪಡಿಸಿದ ಯೋಜನೆಗಳನ್ನು ಅನುಷ್ಠಾನಗೊಳಿಸಲು ಹಣಕಾಸಿನ ಜೊತೆಗೆ ಆಡಳಿತ ಸಿಬ್ಬಂದಿಗಳ ನೇರ ನೇಮಕಾತಿ ಮಾಡಿಕೊಳ್ಳುವ ಕ್ರಮ ಜಾರಿಗೆ ಬರಬೇಕು. ಪಂಚಾಯತ್‌ಗಳನ್ನು ಏಣಿಶ್ರೇಣಿ ಯಲ್ಲಿರಿಸುವ ಕ್ರಮ ಬದಲಾಗಬೇಕು, ಪಂಚಾಯತ್‌ಗಳನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಸಂಘಟಿಸಲು ಸಹಕಾರಿಯಾಗುವಂತೆ ಪಂಚಾಯತ್ ಕಾಯ್ದೆಗೆ ತಿದ್ದುಪಡಿ ತರಬೇಕು ಎಂದು ಲೇಖಕರು ವಾದಿಸಿದ್ದಾರೆ.

**ಟಿ. ಗಿರೀಶ್ ನಾಯಕ ರವರು** ಸ್ಥಾಯಿ-ಸಮಿತಿಗಳ ಮಹತ್ವ ಮತ್ತು ಕಾರ್ಯಕ್ಷಮತೆಯನ್ನು ಗುರುತಿಸುತ್ತಾ,[೨೫] ಈ ಸ್ಥಾಯಿ-ಸಮಿತಿಗಳ ಮೂಲಕ ವಿಕೇಂದ್ರೀಕರಣವನ್ನು ಸಾಧಿಸಬಹುದೆಂದು ಹೇಳಿದ್ದಾರೆ, ಸ್ಥಾಯಿ ಸಮಿತಿಗಳು ಇಂದು ಸಂವಿಧಾನಿಕ ಶಾಶ್ವತ ಸಂಸ್ಥೆಗಳಾಗಿದ್ದು, ಅದರಲ್ಲೂ ಮುಖ್ಯವಾಗಿ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮಹತ್ವದ ಸಮಿತಿಗಳಾಗಿ ನಿರಂತರವಾಗಿ ಆಡಳಿತದಲ್ಲಿ ಕ್ರಿಯಾಶೀಲತೆ ಮೂಡಿಸುವ ತಾರತಮ್ಯ ಹೋಗಲಾಡಿಸುವ ಪೂರಕ ಸಂಸ್ಥೆಗಳಾಗಿ

ಕಾರ್ಯನಿರ್ವಹಿಸುತ್ತಿವೆ. ಸ್ಥಾಯಿ–ಸಮಿತಿಗೆ ಮೂಲ ಉದ್ದೇಶವೆಂದರೆ ಪಂಚಾಯತ್ ಸಂಸ್ಥೆಗಳನ್ನು ಬಲಪಡಿಸುವುದಾಗಿದೆ, ೭೩ನೇ ತಿದ್ದುಪಡಿ ಮೂಲಕ ಪಂಚಾಯತ್ ರಾಜ್ ವ್ಯವಸ್ಥೆ ಅಸ್ತಿತ್ವಕ್ಕೆ ತರಲಾಯಿತು. ಇದರಂತೆ ಕೆಳಹಂತದಿಂದ ಅಭಿವೃದ್ಧಿ ಯೋಜನೆಗಳನ್ನು ವಿಸ್ತೃತಗೊಳಿಸುವ ಪ್ರಯತ್ನಿಗಳು ನಡೆದರೆ ಮತ್ತೊಂದು ಕಡೆ ಪ್ರಜಾಪ್ರಭುತ್ವದ ವಿಕೇಂದ್ರೀಕರಣದ ಮೂಲಕ ಸ್ಥಾಯಿ–ಸಮಿತಿಗಳ ಕಾರ್ಯಗಳನ್ನು ತನ್ನ ಸದಸ್ಯರಲ್ಲಿ ಹಂಚುವ ಮೂಲಕ ಜವಬ್ದಾರಿಯನ್ನು ಹೆಚ್ಚಿಸಿದೆ. ಪಂಚಾಯತ್ ರಾಜ್ ವ್ಯವಸ್ಥೆ ಪರಿಸರ ಸ್ಥಾಯಿ ಸಮಿತಿಗಳ ಕಾರ್ಯಚರಣೆಗೆ ಹೀಗೆ ಪೂರಕವಾಗಿದೆ (ಉದಾ; ಸಾಮಾಜಿಕ ನ್ಯಾಯ ಸಮಿತಿ ಕೃಷಿ ಆರೋಗ್ಯ ವಲಯಗಳಲ್ಲಿನ ಸ್ಥಾಯಿ ಸಮಿತಿ) ಎಂದು ಗುರುತಿಸುವಲ್ಲಿ ವಿಶ್ಲೇಷಣೆ ಮಾಡುವುದು ಅವಶ್ಯಕವಾಗಿದೆ. ಅಲ್ಲದೇ ತಮ್ಮ ಲೇಖನದಲ್ಲಿ ಹಿಂದೆ ನಡೆದಿರುವ ಅಧ್ಯಯನಗಳ ಬಗ್ಗೆ ಈ ಸಮಿತಿಗಳು ನಿರೀಕ್ಷಿತ ಮಟ್ಟದಲ್ಲಿ ಕಾರ್ಯನಿರ್ವಹಿಸಿಲ್ಲ. ಇವುಗಳು ಔಪಚಾರಿಕತೆಯಿಂದ ಕೂಡಿವೆ. ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿಲ್ಲವೆಂದು ಇತ್ಯಾದಿ ಫಲಿತಗಳನ್ನು ತಮ್ಮ ಲೇಖನದಲ್ಲಿ ಕಂಡು ಕೊಂಡಿದ್ದಾರೆ.

**ಕೆಚಿಡಿ ಚನ್ನಪ್ಪ** ರವರು ಗ್ರಾಮ ಪಂಚಾಯತಿಗಳ ಬೆಳವಣೆಗೆಯ ಬಗ್ಗೆ ಹಂತ-ಹಂತವಾಗಿ ಚರ್ಚಿಸಿದ್ದಾರಲ್ಲದೆ,[೨೬] ಅಧಿಕಾರ ವಿಕೇಂದ್ರೀಕರಣ ಮತ್ತು ಅಭಿವೃದ್ಧಿ ಕಾರ್ಯಗಳ ಬಗ್ಗೆ ವಿವರಿಸಿದ್ದಾರೆ. ಪಂಚಾಯತ್ ರಾಜ್ ಅಧಿನಿಮಯದ ೬ನೇ ಪ್ರಕರಣದ ಪ್ರಕಾರ ಪ್ರತಿಯೊಂದು ಗ್ರಾಮ ಪಂಚಾಯಿತಿಯ ತನ್ನದೇ ಆದ ಕಾನೂನು ಬದ್ಧವಾದ ಅಸ್ತಿತ್ವವನ್ನು ಹೊಂದಿದೆ. ಇದು ಒಳಗೆ ಮತ್ತು ಹೊರಗೆ ಎಲ್ಲಾ ಬಗೆಯ ಚರ ಮತ್ತು ಸ್ಥಿರ ಆಸ್ತಿಯನ್ನು ಹೊಂದುವ ಮತ್ತು ಪರಭಾರೆ ಮಾಡುವ ಅಧಿಕಾರ ಹೊಂದಿದೆ. ಗ್ರಾಮ ಪಂಚಾಯಿತಿಯ ರಚನೆಯ ಮೂಲ ಉದ್ದೇಶವಾದ ಅಧಿಕಾರ ವಿಕೇಂದ್ರೀಕರಣ ಮತ್ತು ಅಭಿವೃದ್ಧಿ ಕಾರ್ಯಗಳನ್ನು ನಿರ್ವಹಿಸಲು ಅಗತ್ಯ ಅಧಿಕಾರ ಮತ್ತು ಹಣಕಾಸಿನ ನೆರವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನೀಡುತ್ತಿವೆ. ಯೋಜನೆಗಳನ್ನು ರೂಪಿಸುವಲ್ಲಿ ಮತ್ತು ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಕ್ಕೆ ತರುವಲ್ಲಿ/ತರುವ ನಿರ್ಧಾರದಲ್ಲಿ ಗ್ರಾಮ ಪಂಚಾಯತಿಯ ಪ್ರತಿನಿಧಿಗಳು ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳಬೇಕಾಗುತ್ತದೆ. ಗ್ರಾಮೀಣ ಸಮುದಾಯ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗದವರನ್ನು ವಿಶೇಷವಾಗಿ ಮಹಿಳೆಯರನ್ನು ಸಬಲೀಕರಣದತ್ತ ಕೊಂಡೊಯ್ಯಬೇಕಾಗಿದೆ. ೨೦೧೦ರಲ್ಲಿ ಜರುಗಿದ ತಾಲ್ಲೂಕು, ಮತ್ತು ಜಿಲ್ಲಾ ಪಂಚಾಯತ್ ಚುನಾವಣೆಗಳಲ್ಲಿ ಮಹಿಳೆಯರಿಗೆ ೫೦% ರಷ್ಟು ಪ್ರಾತಿನಿದ್ಯ ನೀಡಿದೆ. (೨೦೧೦ ರಲ್ಲಿ ನಡೆದ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಮಹಿಳೆಯರಿಗೆ ಶೇ.೩೩.೩೩ ಮೀಸಲಾತಿ) ಆದರೆ ಈ ಚುನಾವಣೆಗಳು ಮಹಿಳೆಯರ ಸಬಲೀಕರಣಕ್ಕೆ ಪೂರಕವಾಗಿಲ್ಲ. ಏಕೆಂದರೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪ್ರತಿನಿಧ್ಯ ಪರಿವರ್ತನೆಗೆ ಸೋಪಾನವಾಗಿಲ್ಲ. ತಳಮಟ್ಟದ ಪ್ರಜಾಪ್ರಭುತ್ವ ಆಡಳಿತದಲ್ಲಿ ಪುರಷರಿಗೆ ಸಮಾನವಾಗಿ

ಕಾರ್ಯನಿರ್ವಹಿಸುತ್ತಿವೆ. ಸ್ಥಾಯಿ-ಸಮಿತಿಗೆ ಮೂಲ ಉದ್ದೇಶವೆಂದರೆ ಪಂಚಾಯತ್ ಸಂಸ್ಥೆಗಳನ್ನು ಬಲಪಡಿಸುವುದಾಗಿದೆ. ೭೩ನೇ ತಿದ್ದುಪಡಿ ಮೂಲಕ ಪಂಚಾಯತ್ ರಾಜ್ ವ್ಯವಸ್ಥೆ ಅಸ್ತಿತ್ವಕ್ಕೆ ತರಲಾಯಿತು. ಇದರಂತೆ ಕೆಳಹಂತದಿಂದ ಅಭಿವೃದ್ಧಿ ಯೋಜನೆಗಳನ್ನು ವಿಸ್ತೃತಗೊಳಿಸುವ ಪ್ರಯತ್ನಿಗಳು ನಡೆದರೆ ಮತ್ತೊಂದು ಕಡೆ ಪ್ರಜಾಪ್ರಭುತ್ವದ ವಿಕೇಂದ್ರೀಕರಣದ ಮೂಲಕ ಸ್ಥಾಯಿ-ಸಮಿತಿಗಳ ಕಾರ್ಯಗಳನ್ನು ತನ್ನ ಸದಸ್ಯರಲ್ಲಿ ಹಂಚುವ ಮೂಲಕ ಜವಬ್ದಾರಿಯನ್ನು ಹೆಚ್ಚಿಸಿದೆ. ಪಂಚಾಯತ್ ರಾಜ್ ವ್ಯವಸ್ಥೆ ಪರಿಸರ ಸ್ಥಾಯಿ ಸಮಿತಿಗಳ ಕಾರ್ಯಚರಣೆಗೆ ಹೀಗೆ ಪೂರಕವಾಗಿದೆ (ಉದಾ; ಸಾಮಾಜಿಕ ನ್ಯಾಯ ಸಮಿತಿ ಕೃಷಿ ಆರೋಗ್ಯ ವಲಯಗಳಲ್ಲಿನ ಸ್ಥಾಯಿ ಸಮಿತಿ) ಎಂದು ಗುರುತಿಸುವಲ್ಲಿ ವಿಶ್ಲೇಷಣೆ ಮಾಡುವುದು ಅವಶ್ಯಕವಾಗಿದೆ. ಅಲ್ಲದೇ ತಮ್ಮ ಲೇಖನದಲ್ಲಿ ಹಿಂದೆ ನಡೆದಿರುವ ಅಧ್ಯಯನಗಳ ಬಗ್ಗೆ ಈ ಸಮಿತಿಗಳು ನಿರೀಕ್ಷಿತ ಮಟ್ಟದಲ್ಲಿ ಕಾರ್ಯನಿರ್ವಹಿಸಿಲ್ಲ. ಇವುಗಳು ಔಪಚಾರಿಕತೆಯಿಂದ ಕೂಡಿವೆ. ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿಲ್ಲವೆಂದು ಇತ್ಯಾದಿ ಫಲಿತಗಳನ್ನು ತಮ್ಮ ಲೇಖನದಲ್ಲಿ ಕಂಡು ಕೊಂಡಿದ್ದಾರೆ.

**ಕಿಚಿಡಿ ಚನ್ನಪ್ಪ ರವರು** ಗ್ರಾಮ ಪಂಚಾಯತಿಗಳ ಬೆಳವಣಿಗೆಯ ಬಗ್ಗೆ ಹಂತ-ಹಂತವಾಗಿ ಚರ್ಚಿಸಿದ್ದಾರಲ್ಲದೆ,[೨೬] ಅಧಿಕಾರ ವಿಕೇಂದ್ರೀಕರಣ ಮತ್ತು ಅಭಿವೃದ್ಧಿ ಕಾರ್ಯಗಳ ಬಗ್ಗೆ ವಿವರಿಸಿದ್ದಾರೆ. ಪಂಚಾಯತ್ ರಾಜ್ ಅಧಿನಿಮಯದ ೬ನೇ ಪ್ರಕರಣದ ಪ್ರಕಾರ ಪ್ರತಿಯೊಂದು ಗ್ರಾಮ ಪಂಚಾಯಿತಿಯ ತನ್ನದೇ ಆದ ಕಾನೂನು ಬದ್ಧವಾದ ಅಸ್ತಿತ್ವವನ್ನು ಹೊಂದಿದೆ. ಇದು ಒಳಗೆ ಮತ್ತು ಹೊರೆಗೆ ಎಲ್ಲಾ ಬಗೆಯ ಚರ ಮತ್ತು ಸ್ಥಿರ ಆಸ್ತಿಯನ್ನು ಹೊಂದುವ ಮತ್ತು ಪರಭಾರೆ ಮಾಡುವ ಅಧಿಕಾರ ಹೊಂದಿದೆ. ಗ್ರಾಮ ಪಂಚಾಯಿತಿಯ ರಚನೆಯ ಮೂಲ ಉದ್ದೇಶವಾದ ಅಧಿಕಾರ ವಿಕೇಂದ್ರೀಕರಣ ಮತ್ತು ಅಭಿವೃದ್ಧಿ ಕಾರ್ಯಗಳನ್ನು ನಿರ್ವಹಿಸಲು ಅಗತ್ಯ ಅಧಿಕಾರ ಮತ್ತು ಹಣಕಾಸಿನ ನೆರವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನೀಡುತ್ತಿವೆ. ಯೋಜನೆಗಳನ್ನು ರೂಪಿಸುವಲ್ಲಿ ಮತ್ತು ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಕ್ಕೆ ತರುವಲ್ಲಿ/ತರುವ ನಿರ್ಧಾರದಲ್ಲಿ ಗ್ರಾಮ ಪಂಚಾಯತಿಯ ಪ್ರತಿನಿಧಿಗಳು ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳಬೇಕಾಗುತ್ತದೆ. ಗ್ರಾಮೀಣ ಸಮುದಾಯ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗದವರನ್ನು ವಿಶೇಷವಾಗಿ ಮಹಿಳೆಯರನ್ನು ಸಬಲೀಕರಣದತ್ತ ಕೊಂಡೊಯ್ಯಬೇಕಾಗಿದೆ. ೨೦೧೦ರಲ್ಲಿ ಜರುಗಿದ ತಾಲ್ಲೂಕು, ಮತ್ತು ಜಿಲ್ಲಾ ಪಂಚಾಯತ್ ಚುನಾವಣೆಗಳಲ್ಲಿ ಮಹಿಳೆಯರಿಗೆ ೫೦% ರಷ್ಟು ಪ್ರಾತಿನಿದ್ಯ ನೀಡಿದೆ. (೨೦೧೦ ರಲ್ಲಿ ನಡೆದ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಮಹಿಳೆಯರಿಗೆ ಶೇ.೩೩.೩೩ ಮೀಸಲಾತಿ) ಆದರೆ ಈ ಚುನಾವಣೆಗಳು ಮಹಿಳೆಯರ ಸಬಲೀಕರಣಕ್ಕೆ ಪೂರಕವಾಗಿಲ್ಲ. ಏಕೆಂದರೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪ್ರತಿನಿಧ್ಯ ಪರಿವರ್ತನೆಗೆ ಸೋಪಾನವಾಗಿಲ್ಲ. ತಳಮಟ್ಟದ ಪ್ರಜಾಪ್ರಭುತ್ವ ಆಡಳಿತದಲ್ಲಿ ಪುರಷರಿಗೆ ಸಮಾನವಾಗಿ

ಎಲ್ಲಾ ಸಾರ್ವಜನಿಕ ಕ್ಷೇತ್ರಗಳನ್ನು ತೀವ್ರವಾಗಿ ಆವರಿಸಿಕೊಂಡು ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣ ನೀತಿಯೂ ಹಿಂದುಳಿದ ವರ್ಗಗಳ ರಾಜಕೀಯ ಹಿನ್ನಡೆಗೆ ಕಾರಣವಾಗಿದೆ. ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಸಂಭವಿಸಿದ ಈ ಬದಲಾವಣೆಯಿಂದಾಗಿ 'ಆರ್ಥಿಕ ಪ್ರಗತಿ' ಮಾತ್ರವೇ ರಾಜ್ಯದ ಮುಖ್ಯ ಉದ್ದೇಶ ಹಾಗೂ ಸಾಧನೆಯ ಮಾನದಂಡವೆಂದು ಬಿಂಭಿಸಲಾಗುತ್ತಿದ್ದು, ಇಂದು ಅದು ಸಾರ್ವಜನಿಕ ಕ್ಷೇತ್ರದಲ್ಲಿ ಕೇಂದ್ರಿಯ ಸ್ಥಾನವನ್ನು ಆಕ್ರಮಿಸಿಕೊಂಡಿದೆ, ಸರಕಾರವೇನಿದ್ದರೂ ಆರ್ಥಿಕ ಪ್ರಗತಿಗೆ ಅನುಕೂಲಕರ ರಾಜಕೀಯ, ಸಾಮಾಜಿಕ ವಾತಾವರಣವನ್ನು ಕಲ್ಪಿಸುವುದು ಹಾಗೂ ಶಾಂತಿ–ಸುವ್ಯವಸ್ಥೆಯನ್ನು ಕಾಪಾಡುವ ಸೀಮಿತ ಜವಬ್ದಾರಿಯನ್ನು ನಿರ್ವಹಿಸುವುದಷ್ಟೇ ಆಗಿದೆ. ಇದೆಲ್ಲದರ ಪರಿಣಾಮವೆಂಬಂತೆ ಸಾಮಾಜಿಕ ನ್ಯಾಯದ ಕಲ್ಪನೆಯು ಪರಧಿಗೆ ತಳ್ಳಲ್ಪಟ್ಟು ಆರ್ಥಿಕ ಪ್ರಗತಿಗೆ ಅನುಕೂಲವೆನಿಸುವ "ಸಾಮಾಜಿಕ ಸಾಮರಸ್ಯ'ದ ಕಲ್ಪನೆಯೇ ರಾಜ್ಯದ ಸಾಮಾಜಿಕ ನೀತಿಯನ್ನು ಪ್ರಧಾನವಾಗಿ ಗೋಚರಿಸುತ್ತದೆ ಎಂದು ತಿಳಿಸಿರುತ್ತಾರೆ.

**ಪ್ರೊ ಹೆಚ್.ವಿ ನಾಗೇಶ್‌ರವರು 'ಸಾಮಾಜಿಕ ನ್ಯಾಯ'** ಕುರಿತಂತೆ ಹೀಗೆ ಹೇಳಿದ್ದಾರೆ.[೨೯] ಆಧುನಿಕ ಭಾರತದಲ್ಲಿ ಸಾಮಾಜಿಕ ನ್ಯಾಯ ಒದಿಗಿಸುವ ಕೆಲಸ ಮತ್ತಷ್ಟು ಕಠಿಣವಾಗುತ್ತಿದೆ. ಇತರ ಅಭಿವೃದ್ಧಿಶೀಲ ರಾಷ್ಟ್ರಗಳಂತೆಯೇ ಭಾರತದಲ್ಲಿ ಈ ಬಂಡವಾಳ ಹೂಡುವಾಗ ಉತ್ಪಾದನೆ ಮತ್ತು ಲಾಭಗಳಿಸುವುದಕ್ಕೆ ಹೆಚ್ಚಿನ ಒತ್ತು ಕೊಡಲಾಗುತ್ತಿದೆ. ಹೊಸ ತಂತ್ರಜ್ಞಾನದ ಬೆಳವಣಿಗೆಯಿಂದ ಸಾಮಾಜಿಕ ನ್ಯಾಯ ತತ್ವಕ್ಕೆ ಹೊಡೆತ ಬೀಳುವ ಸಂಭವ ಹೆಚ್ಚಿದೆ. (ಇದರಿಂದ ವರ್ಗ ಅಸಮಾನತೆ ಉಂಟಾಗುತ್ತದೆ) ಇವೆಲ್ಲ ಪ್ರಭಾವಗಳು ಬಡ ದುರ್ಬಲ ವರ್ಗಗಳಿಗೆ ನ್ಯಾಯ ಒದಗಿಸುವ ಕೆಲಸವನ್ನು ಇನ್ನಷ್ಟು ಕಠಿಣಗೊಳಿಸುವುದು ಮತ್ತು ಆರ್ಥಿಕ, ಸಾಮಾಜಿಕ, ರಾಜಕೀಯ ಅಭಿವೃದ್ಧಿಗೆ ಸಾಮಾಜಿಕ ಶಾಂತಿ, ಸೌಹಾರ್ದ್ಯಗಳಿಗೆ ಸಾಮಾಜಿಕ ನ್ಯಾಯ ತತ್ವದ ಅನುಷ್ಠಾನ ಅವಶ್ಯಕವಾಗಿದೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಕೊನೆಯದಾಗಿ ಇವರು ಗ್ರಾಮ ಪಂಚಾಯತಿಗಳಲ್ಲಿ ದುರ್ಬಲವರ್ಗದವರಿಗೆ ಮಹಿಳೆಯರಿಗೆ ಜಾಗೆ ಕಾಯ್ದಿರಿಸಿದಾಗ, ಅಥವಾ ಇಂಥ ಹಲವು ಸಂದರ್ಭಗಳಲ್ಲಿ ಸಾಮಾಜಿಕ ನ್ಯಾಯವು ವಿಳಂಬದ ಕೆಲಸವಾಗಿ ಪರಿಣಮಿಸಿದೆ ಇದನ್ನು ಸರಿಪಡಿಸುವುದು ತುರ್ತಿನ ಕೆಲಸವಾಗಬೇಕು ಎಂದು ಉಪನ್ಯಾಸ ನೀಡಿದ್ದಾರೆ.

ಪಂಚಾಯಿತಿ ವ್ಯವಸ್ಥೆಯಲ್ಲಿ ಸಾಮಾಜಿಕ ನ್ಯಾಯ ಸಾಧಿಸುವುದಕ್ಕಾಗಿಯೇ ಸ್ಥಾಯಿ ಸಮಿತಿಗಳ ರಚನೆಯಲ್ಲಿ ಸಾಮಾಜಿಕ ನ್ಯಾಯ ಸಮಿತಿಯನ್ನು ರಚಿಸಿದ್ದು ಇದರಲ್ಲಿ ಸಾಮಾಜಿಕ ನ್ಯಾಯ ಸಮಿತಿ ರಚನೆ ಮಾಡಿ, ಪರಿಶಿಷ್ಟ ಜಾತಿಗಳ, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ ಆರ್ಥಿಕ ಸಾಂಸ್ಕೃತಿಕ ಹಾಗೂ ಸಾಮಾಜಿಕ ಅನ್ಯಾಯ ಮತ್ತು ಯಾವುದೇ ರೀತಿಯ ಶೋಷಣೆಗಳಿಗೆ ಒಳಗಾಗಿರುವಂತಹ ಜಾತಿಗಳಿಗೆ ಮತ್ತು ವರ್ಗಗಳಿಗೆ ರಕ್ಷಣೆ ಕೊಡುವುದು.

**ಡಾ॥ ಎಂ. ಚಂದ್ರಪೂಜಾರಿ** ಅವರು ಜನಾಯೋಜನೆ ಕುರಿತಂತೆ ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೩೦] ೧೯೯೩ರಲ್ಲಿ ಜಾರಿಗೆ ಬಂದಿರುವ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಯೋಜನಾ ಸಮಿತಿ ನೇಮಕವಾಯಿತು. ಜಿಲ್ಲಾ ಪಂಚಾಯತ್ ಅಧ್ಯಕ್ಷರು, ಮುಖ್ಯ ನಿರ್ವಾಹಕ ಅಧಿಕಾರಿಗಳು ಇದರ ಕಾರ್ಯದರ್ಶಿಗಳು, ನಗರ ಮತ್ತು ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಸಿದ್ದಪಡಿಸಿದ ಯೋಜನೆಗಳನ್ನು ಒಟ್ಟು ಸೇರಿಸಿ ಜಿಲ್ಲೆಯ ಮುನ್ನೋಟ ಯೋಜನೆಯನ್ನು ಸಿದ್ಧಪಡಿಸುವ ಜವಾಬ್ದಾರಿ ಜಿಲ್ಲಾ ಯೋಜನಾ ಸಮಿತಿಯದ್ದು ಜಿಲ್ಲಾ ಯೊಜನಾ ಸಮಿತಿ ರಚನೆಯಾಗಿ ಹಲವು ವರ್ಷಗಳು ಕಳೆದರೂ ಪಂಚಾಯತ್ ಮಟ್ಟದಿಂದ ಯೋಜನೆ ಸಿದ್ದಪಡಿಸುವ ಪ್ರಕ್ರಿಯ ಆರಂಭವಾಗಲೇ ಇಲ್ಲ. ೨೦೦೦ರಲ್ಲಿ ಸರ್ಕಾರ ನೇಮಿಸಿದ **"ವರ್ಕಿಂಗ್ ಕಮಿಟ ಆನ್ ಡಿಸೆಂಟ್ರಲೈಸೇಶನ್"** ಈ ಕೊರತೆಯನ್ನು ಗುರುತಿಸಿದೆ. ೨೦೦೩ರಲ್ಲಿ ರಾಜ್ಯ ಸರ್ಕಾರ ಪಂಚಾಯತ್ ಮಟ್ಟದಿಂದ ಯೋಜನೆ ಸಿದ್ದಗೊಳಿಸಲು ಕ್ರಮವಹಿಸಿತು. ಇದರ ಪ್ರಕಾರ ಜಿಲ್ಲಾ ಯೋಜನಾ ಸಮಿತಿಯಿಂದ ತಾಲೂಕು ಪಂಚಾಯಿತಿಗೆ ಕಳುಹಿಸಲಾಗುವುದು, ತಮ್ಮಲ್ಲಿ ಬಂದ ಮುನ್ನೋಟವನ್ನು ಪಂಚಾಯತ್‌ವಾರು ವಿಂಗಡಿಸಿ ಪಂಚಾಯಿತಿಗಳಿಗೆ ಕಳುಹಿಸುತ್ತಾರೆ. ಇಲ್ಲಿ ಜನರ ಒಪ್ಪಿಗೆ ಪಡೆಯಲು ಶಾಸ್ತ್ರ ಮಾತ್ರ ಇಲ್ಲಿ ಕಾರ್ಯಾರೂಪಕ್ಕೆ ಬರಲು ಸಾಧ್ಯ. ದುರಂತವೆಂದರೆ ಇಂತ ಆರೆಬೆಂದ ಯೋಜನೆ ಸಿದ್ದಪಡಿಸುವ ಕ್ರಮವನ್ನು ಕೂಡ ರಾಜ್ಯದ ಪಂಚಾಯತ್‌ಗಳು ರೂಢಿಸಿಕೊಂಡಿಲ್ಲ. ಮೇಲಿಂದ ಕೆಳಗೆ ಇಳಿಯುವ ಅಭಿವೃದ್ದಿ ಪರಿಕಲ್ಪನೆಯನ್ನು ಜಾರಿಗೆ ತರಬೇಕಾದರೆ ನಿಜವಾದ ಅರ್ಥದಲ್ಲಿ ಜನಾಯೋಜನೆ ನಡೆಯಬೇಕಾಗಿದೆ. ಜನರ ಬೇಕುಬೇಡಗಳು, ಆದ್ಯತೆಗಳು, ಸಂಪನ್ಮೂಲಗಳು ಯೋಜನೆಯ ಅಡಿಪಾಯವಾಗಬೇಕು. ಇಡೀ ದೇಶದ ಅಭಿವೃದ್ದಿ ಯೋಜನೆಯನ್ನು ಸಿದ್ದಪಡಿಸುವ ಪ್ರಕ್ರಿಯೆ ಪಂಚಾಯತ್ ಮಟ್ಟದಿಂದ ಆರಂಭವಾಗಬೇಕು. ವಾರ್ಡ್ ಸಭೆಗಳಲ್ಲಿ ಜನರ ಸಮಸ್ಯೆಗಳನ್ನು ಪಟ್ಟಿಮಾಡಿ ನಂತರ ಅವುಗಳ ಆದ್ಯತೆ ಪಟ್ಟಿ ಸಿದ್ದಪಡಿಸಬೇಕು. ಈ ಆದ್ಯತೆಗಳನುಸಾರ ಯೋಜನೆಗಳನ್ನು ಕ್ರೊಡ್ರೀಕರಿಸಿ ಅವುಗಳನ್ನು ತಾಲೂಕು, ಜಿಲ್ಲಾ, ರಾಜ್ಯ, ರಾಷ್ಟ್ರದ ಯೋಜನೆಗಳನ್ನು ಕ್ರೊಡ್ರೀಕರಿಸಿ ಸಿದ್ದಗೊಳ್ಳಬೇಕು. ಇದು ನಿಜವಾದ ಅರ್ಥದಲ್ಲಿ ವಿಕೇಂದ್ರೀಕೃತ ಪ್ರಜಾಪ್ರಭುತ್ವವನ್ನು ಜಾರಿಗೆ ತರುವ ವಿಧಾನ, ಆದರೆ ಇಂದು ನಿಜವಾದ ಯೋಜನೆಗಳು ರೂಪಿಸಲು ಸಾಧ್ಯವಾಗುತ್ತಿಲ್ಲ.

**ಡಾ॥ ಎನ್. ಶಿವಣ್ಣ ರವರು** ವಿಕೇಂದ್ರೀಕರಣದ ಪ್ರಕಿಯೆಯು ಪ್ರಮುಖವಾಗಿ ಮೂರು ದೃಷ್ಟಿಕೋನಗಳನ್ನು ಹೊಂದಿರುತ್ತದೆ ಎಂದು ಹೇಳುತ್ತಾರೆ.[೩೧] ಅವುಗಳೆಂದರೆ, ೧) ರಾಜಕೀಯ ವಿಕೇಂದ್ರೀಕರಣ, ೨) ಆಡಳಿತಾತ್ಮಕ ವಿಕೇಂದ್ರೀಕರಣ ೩) ಹಣಕಾಸಿನ ವಿಕೇಂದ್ರೀಕರಣ. ಪ್ರಸ್ತುತವಾಗಿ ಈ ಲೇಖನದಲ್ಲಿ ಲೇಖಕರು ರಾಜಕೀಯ ವಿಕೇಂದ್ರೀಕರಣದ ಬಗ್ಗೆ ಹೆಚ್ಚಿನ ಒತ್ತನ್ನು ನೀಡಿದ್ದಾರೆ. ರಾಜಕೀಯ ವಿಕೇಂದ್ರೀಕರಣ ಎಂದರೆ, ಅಧಿಕಾರ ವರ್ಗಾಹಿಸುವುದು

ಮೇಲಿರುವ ಕೇಂದ್ರ ಸರ್ಕಾರದಿಂದ ಹಿಡಿದು ಸ್ಥಳೀಯ ಸ್ವಾಯತ್ತತೆ ಹೊಂದಿರುವ ಸಂಸ್ಥೆಗಳವರಗೆ ಅಧಿಕಾರವನ್ನು ಸಂವಿಧಾನಾತ್ಮಕವಾಗಿ ವಿಭಾಗಿಸುವುದು, ಅಂದಾಗ ಮಾತ್ರ ರಾಜಕೀಯ ವಿಕೇಂದ್ರೀಕರಣ ಸಬಲೀಕರಣವಾಗುತ್ತದೆ. ಹಾಗೆಯೇ ಲೇಖಕರು ರಾಜಕೀಯ ವಿಕೇಂದ್ರೀಕರಣವು ಪರಿಣಾಮಕಾರಿಯಾಗಿ ಯಶಸ್ವಿಯಾಗಬೇಕಾದರೆ, ಗ್ರಾಮಸಭೆಗೆ ಮಹತ್ವ ನಿಡಬೇಕು ಏಕೆಂದರೆ, ಅವುಗಳು ಪಂಚಾಯತ್ ರಾಜ್ ವ್ಯವಸ್ಥೆಯ ಆತ್ಮ ಮತ್ತು ನೇರ ಪ್ರಜಾಪ್ರಭುತ್ವದ ಬೇರುಗಳು ಎಂದಿದ್ದಾರೆ.

**ಎಂ. ದೇವೇಂದ್ರಬಾಬುರವರ ಪುಸ್ತಕ "ಡಿಸೆಂಟ್ರಲೈಜೆಶನ್ಡ್ ಪ್ಲಾನ್ನಿಂಗ್ ಇನ್ ಕರ್ನಾಟಕ" – ರಿಯಾಲಿಟಿಸ್ ಆ್ಯಂಡ್ ಪ್ರಾಸ್ಪೆಕ್ಟ್ಸ್"**[೩೨] ಎಂಬುವುದರಲ್ಲಿ ಮೂರನೇ ಅಧ್ಯಾಯದ "ಪ್ರಿರೆಕ್ವಿಝಿಟ್ಸ್ ಫಾರ್ ಡಿಸೆಂಟ್ರಲೈಜೆಶನ್ ಪ್ಲಾನಿಂಗ್"ನಲ್ಲಿ ರಾಜಕೀಯ ವೀಕೇಂದ್ರೀಕರಣದ ಬಗ್ಗೆ ಹೀಗೆ ವಿವರಿಸಿದ್ದಾರೆ, ಪ್ರಸ್ತುತವಾಗಿ ಭಾರತ ದೇಶದಲ್ಲಿ ಕೆಲವು ರಾಜ್ಯಗಳು ಮಾತ್ರ ವಿಕೇಂದ್ರೀಕರಣ ತತ್ವಕ್ಕೆನುಗುಣವಾಗಿ ಯೋಜನೆಗಳು ಜಾರಿಯಲ್ಲಿ ಬರುತ್ತಿವೆ. ಅದರಲ್ಲಿ ನಮ್ಮ ಕರ್ನಾಟಕ ರಾಜ್ಯ ಒಂದಾಗಿದೆ  ಗ್ರಾಮ ಪಂಚಾಯಿತಿಯಲ್ಲಿ ಗ್ರಾಮಸಭೆಗಳ ಕಾರ್ಯಾ ಚಟುವಟಿಕೆಗಳು ಮತ್ತು ಅವುಗಳ ಪಾತ್ರ, ಪ್ರಮುಖವಾಗಿರುತ್ತದೆ. ಗ್ರಾಮ ಸಭೆಗಳು ಗ್ರಾಮದ ಶಾಸನಸಭೆ ಇದ್ದಂತೆ ಕನಿಷ್ಠ ಮೂರು ತಿಂಗಳೊಮ್ಮೆ ಸಭೆ ಸೇರಬೇಕು. ಸಂವಿಧಾನದ ೭೩ನೇ ತಿದ್ದುಪಡಿ ರಾಜಕೀಯ ವಿಕೇಂದ್ರೀಕರಣದ ಆಧಾರದ ಮೇಲೆ ಮಾಡಲಾಗಿದ್ದು. ೨೪೩ (ಡಿ) ಸ್ಥಾನಗಳ ಮೀಸಲಾತಿ ಜನಸಾಮನ್ಯರ ಪಾಲ್ಗೋಳ್ಳುವಿಕೆಗೆ ಪಂಚಾಯಿತಿಗಳೇ ಮೂಲಾಧಾರ ಎಂಬ ತತ್ವವನ್ನು ರೂಪಿಸಿತು.

**ಪದ್ಮರಾಜದಂಡಾ ವತಿಯವರ ಲೇಖನವಾದ "ಪಂಚಾಯತಿ ರಾಜ್ ಸಂಸ್ಥೆಗಳ ಆಶಯ ಮತ್ತು ಅನುಷ್ಠಾನದ ನಡುವಿನ ಸಂಘರ್ಷ"**[೩೩]ದಲ್ಲಿ ಆಶಯ ಮತ್ತು ಅನುಷ್ಠಾನ ನಡುವಿನ ಸಂಘರ್ಷ ಇಂದು ನಿನ್ನಯದಲ್ಲ. ಆಶಯಕ್ಕೆ ಒಳ್ಳೆಯ ಉದ್ದೇಶ ಇರುತ್ತದೆ. ಅನುಷ್ಠಾನಕ್ಕೆ ಅದು ಇರುವುದು ಅನುಮಾನ. ಆಶಯದಲ್ಲಿ ಹಿತಾಸಕ್ತಿ ಇರುವುದಿಲ್ಲ. ಅನುಷ್ಠಾನದಲ್ಲಿ ಇರುತ್ತದೆ. ನಮ್ಮ ಎಲ್ಲಾ ಯೋಜನೆಗಳ ಆಶಯ ಯಾವಾಗಲೂ ಚೆನ್ನಾಗಿಯೇ ಇರುತ್ತದೆ. ಅವುಗಳ ಅನುಷ್ಠಾನಗದಲ್ಲಿ ಸಮಸ್ಯೆ ಇರುವುದಕ್ಕೆ ಕಾರಣಗಳು ಎದ್ದು ಕಾಣುವಂತೆಯೇ ಇವೆ. ಆಶಯ ರೂಪಿಸಿದವರ ಕೈಗೆ ಕೆಸರು ಹತ್ತಿರುವುದಿಲ್ಲ: ಅನುಷ್ಠಾನ ಮಾಡುವವರ ಕೈಗೆ ಅದೇ ಮೆತ್ತಿಕೊಂಡಿರುತ್ತದೆ?

ವಿಕೇಂದ್ರೀಕರಣ ಆಶಯ ಎಷ್ಟು ಚೆನ್ನಾಗಿತ್ತು. ಪ್ರಜಾಪ್ರಭುತ್ವದ ಆಶಯವೇ ಅದು. ತೀರಾ ಕೆಳಹಂತದಿಂದ ಅಧಿಕಾರ ವಿಕೇಂದ್ರೀಕರಣ ಆಗುತ್ತ ಬರಬೇಕು. ದೂರದ ದೆಹಲಿಯಿಂದ ಹಾಗೂ ರಾಜ್ಯದ ರಾಜಧಾನಿಯಿಂದ ಆಡಳಿತ ಮಾಡುವುದಕ್ಕೂ ನಮ್ಮ ಹಳ್ಳಿಯಿಂದಲೇ

ಆಡಳಿತ ಮಾಡುವುದಕ್ಕೂ ಎಷ್ಟೊಂದು ವ್ಯತ್ಯಾಸವಿದೆ. ಆದರೆ ಆಶಯ ಮತ್ತು ಅನುಷ್ಠಾನದ ನಡುವೆ ಮತ್ತು ಸಂಘರ್ಷ. ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಅಧಿಕಾರ ಕೊಡಲು ಪಾಳೆಗಾರಿಕೆ ವ್ಯವಸ್ಥೆ ಒಪ್ಪುವುದಿಲ್ಲ. ಕರ್ನಾಟಕದಲ್ಲಿ ೮೦ರ ದಶಕದಲ್ಲಿ ಹೀಗೆಯೇ ಆಯಿತು. ಹಾಗೂ ಹೀಗೂ ಪಂಚಾಯತ್‌ರಾಜ್ ವ್ಯವಸ್ಥೆ ಇಲ್ಲಿ ಜಾರಿಗೆ ಬಂತು: ಈಗಲೂ ಅದರಲ್ಲಿ ಅನೇಕ ಲೋಪದೋಷಗಳು ಉಳಿದಿರಬಹುದು ಮತ್ತು ಈ ಲೋಪದೋಷಗಳು ಉಳಿದಿರುವುದಕ್ಕೆ 'ಹಿತಾಸಕ್ತ' ಶಾಸಕಾಂಗ ಅಡ್ಡಿಯಾಗಿದೆ ಎಂಬುದರಲ್ಲಿ ಯಾರಿಗೂ ಅನುಮಾನವೇನೂ ಇಲ್ಲ.



ಸಂವಿಧಾನದಲ್ಲಿಯೇ ಅದಕ್ಕೆ ಉತ್ತರ ಇದೆ. ರಾಜೀವ್‌ಗಾಂಧಿಯವರು ಕರ್ನಾಟಕದ ಪಂಚಾಯತಿ ರಾಜ್ ಯಶಸ್ಸನ್ನು ನೋಡಿ, ಇಡೀ ದೇಶದಲ್ಲಿ ಪಂಚಾಯತಿ ಸಂಸ್ಥೆಗಳ ಮತ್ತು ಪಟ್ಟಣ ಹಾಗೂ ನಗರಾಡಳಿತ ಸಂಸ್ಥೆಗಳಿಗೆ ಶಕ್ತಿ ತುಂಬಲು ಸಂವಿಧಾನಕ್ಕೆ ಕ್ರಮವಾಗಿ **೭೩** ಮತ್ತು **೭೪** ತಿದ್ದುಪಡಿಗಳನ್ನು ತರಲು ಬಯಸಿದ್ದರು, ಆದರೆ ಅವರಿಗೆ ರಾಜ್ಯಗಳಿಂದ ಸಿಗಬೇಕಾದ ಬೆಂಬಲ ಸಿಗಲಿಲ್ಲ. ಈ ಎರಡು ತಿದ್ದುಪಡಿಗಳು **೧೯೯೩**ರಲ್ಲಿ ಪಿ.ವಿ ನರಸಿಂಹರಾವ್ ಅವರು ಪ್ರಧಾನಿ ಆಗಿದ್ದಾಗ, ಜಾರಿಗೆ ಬಂದವು ಆದರೆ, ಅವರು 'ಹಿತಾಸಕ್ತಿ' ರಾಜ್ಯಗಳ ಜೊತೆಗೆ ರಾಜಿ ಮಾಡಿಕೊಳ್ಳಬೇಕಾಯಿತು. ಅವರು ತಿದ್ದುಪಡಿಯೆನ್ನೇನೋ ತಂದರು, ಅದರ ಅನುಷ್ಠಾನವನ್ನು ರಾಜ್ಯಗಳು ಮೇಲೆ ಹಾಕಿದರು.

ಸಂವಿಧಾನದ **೭೪**ನೇ ತಿದ್ದುಪಡಿಯ ಉದ್ದೇಶ ಮತ್ತು ಕಾರಣ ಆರಂಭ ಆಗುವುದು ಹೀಗೆ; ಅಸಮರ್ಪಕ ಅಧಿಕಾರ ವಿಕೇಂದ್ರೀಕರಣ ಮತ್ತು ದೀರ್ಘಕಾಲದವರೆಗೆ ಚುನಾವಣೆ ನಡೆಸದೇ ಆಡಳಿತಾಧಿಕಾರಿಗಳನ್ನು ನೇಮಿಸಿರುವುದರಿಂದ ಅನೇಕ ರಾಜ್ಯಗಳಲ್ಲಿ ಸ್ಥಳೀಯ ಸಂಸ್ಥೆಗಳು ದುರ್ಬಲವಾಗಿವೆ. ಮತ್ತು ಅವು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿಲ್ಲ. ಹೀಗಾಗಿ ರಾಜ್ಯ ಸರ್ಕಾರ ಮತ್ತು ಸ್ಥಳೀಯ ಸಂಸ್ಥೆಗಳ ನಡುವಿನ ಸಂಬಂಧವನ್ನು ಗಟ್ಟಿಯಾದ ಬುನಾದಿಯ ಮೇಲೆ ನಿರ್ಮಿಸಬೇಕಾಗಿದೆ.

ಒಟ್ಟಾರೆ ಲೇಖಕರ ವಾದದ ಪ್ರಕಾರ **೭೩**ರ ತಿದ್ದುಪಡಿಯನ್ವಯ ರಚಿಸಲಾದ ಪಂಚಾಯತ್ ರಾಜ್ ಸಂಸ್ಥೆಗಳ ಆಶಯ ಒಳ್ಳೆಯದು. ಆದರೆ ಅದರ ಅನುಷ್ಠಾನದಲ್ಲಿ ದೋಷ ಉಳಿದೇ ಉಳಿಯುತ್ತದೆ. ಏಕೆಂದರೆ ಅಧಿಕಾರ ವಿಕೇಂದ್ರೀಕರಣ ಎನ್ನುವುದು ಬರಿ ಆಶಯವಾಗಿರದೆ ಅದನ್ನು ಕಾರ್ಯರೂಪಕ್ಕೆ ತರುವ ಪ್ರಕ್ರಿಯೆ ನಡೆಯಬೇಕು. ಇದಕ್ಕೆ ಕೇಂದ್ರ ಸರ್ಕಾರದಿಂದ ಹಿಡಿದು ಗ್ರಾಮಸಭೆ/ವಾರ್ಡ್‌ಸಭೆಗಳವರೆಗೆ ಎಲ್ಲಿ ಅಧಿಕಾರಿಗಳು ಅಧ್ಯಕ್ಷರು, ಸದಸ್ಯರುಗಳು ಕಾರ್ಯತತ್ಪರರಾಗಬೇಕಾದ ಅನಿವಾರ್ಯತೆ ಇದೆ. ಇದನ್ನು ಚಾಚು ತಪ್ಪದೇ ಮಾಡಬೇಕಾದ ಜವಾಬ್ದಾರಿಗಳು ನಮ್ಮೆಲ್ಲರದಾಗಿದೆ.

**ಪಂಚಾಯತ್ ಬಲವರ್ಧನೆ:** ಅನುಷ್ಠಾನದ ಸವಾಲುಗಳು ಕರ್ನಾಟಕದಲ್ಲಿ ಮೂರು

ದಶಕಗಳ ಕಾಲ ನಡೆದಿರುವ ಪಂಚಾಯತ್ ರಾಜ್ ಪ್ರಯೋಗಕ್ಕೆ ಈಗ ಒಂದು ಹೊಸ ತಿರುವು ಬಂದಂತೆ ಕಾಣುತ್ತಿದೆ. ಅದಕ್ಕಾಗಿ ವಿಧಾನಸಭೆಯ ಮಾಜಿ ಅಧ್ಯಕ್ಷ ರಮೇಶ್ ಕುಮಾರ್ ಅವರ ಹಿರಿತನದಲ್ಲಿ ನೇಮಿಸಲಾಗಿದ್ದ ಪಂಚಾಯತ್ ರಾಜ್ ಕಾನೂನು ತಿದ್ದುಪಡಿಸಮಿತಿ ತನ್ನ ವರದಿಯನ್ನು ಸಲ್ಲಿಸಿದೆ. ಅದನ್ನು ಶೀಘ್ರವಾಗಿ ಅನುಷ್ಠಾನ ಮಾಡಿದರೆ, ಕಾರಣಾಂತರಗಳಿಂದ ತನ್ನ ಮುಖ್ಯ ಗುರಿಯಿಂದ ವಿಮುಖವಾಗಿದ್ದ ಪಂಚಾಯತ್ ರಾಜ್ ವ್ಯವಸ್ಥೆ ಕಳೆದುಕೊಂಡ ತನ್ನ ಹೊಳಹನ್ನು ಮರಳಿ ಪಡೆದು ಗಾಂಧೀಜಿಯ ಕನಸಾದ ಗ್ರಾಮ ಸ್ವರಾಜ್ಯ ಕಲ್ಪನೆಯನ್ನು ಸಾಕಾರ ಮಾಡವಲ್ಲಿ ದಾಪುಗಾಲು ಹಾಕುವ ನಿರೀಕ್ಷೆ ಇದೆ. ಇಡೀ ದೇಶದಲ್ಲಿಯೇ ಮೊದಲಬಾರಿ ಅಧಿಕಾರ ವಿಕೇಂದ್ರೀಕರಣ ಪ್ರಯೋಗವನ್ನು ಕೈಗೊಂಡ ಕೀರ್ತಿಗೆ ಭಾಜನವಾಗಿದ್ದ ಕರ್ನಾಟಕವು ಗಾಂಧೀಜಿಯ ಸ್ವರಾಜ್ಯದ ಕಲ್ಪನೆಗೆ ಮೂರ್ತ ಸ್ವರೂಪಕೊಟ್ಟ ದೇಶದ ಮೊದಲ ರಾಜ್ಯವೆಂಬ ಇನ್ನೊಂದು ಗರಿಯನ್ನು ತನ್ನ ಕಿರೀಟಕ್ಕೆ ಸೇರಿಸಿಕೊಳ್ಳಬಹುದಾಗಿದೆ.

ಇದನ್ನು ಈಡೇರಿಸುವುದಕ್ಕೆ ಸರ್ಕಾರವು ಕಾರ್ಯಗತ ಮಾಡುವಲ್ಲಿ ವಿಳಂಬ ತಪ್ಪಿಸಲು ಸಮಿತಿಯೇ ಸೂಕ್ತ ತಿದ್ದುಪಡಿ ಕರಡನ್ನು ತಯಾರಿಸಿ ತನ್ನ ವರದಿಯ ಜೊತೆಗೆ ಸರ್ಕಾರಕ್ಕೆ ಸಲ್ಲಿಸಿದೆ. ಸಮಿತಿಯ ಅಧ್ಯಕ್ಷರಾದ ರಮೇಶ್ ಕುಮಾರ್ ರವರ ಆಶಯದಂತೆ ಎಲ್ಲವೂ ನಡೆದರೆ ಮುಂದಿನ ಪ್ರಶ್ನೆಗಳಲ್ಲಿ ಇದು ಕಾರ್ಯಗತವಾಗಬೇಕು.

ಪಂಚಾಯತ್ ರಾಜ್ ಕಾನೂನಿಗೆ ತರುವಂತಹ ವಿಧೇಯಕಗಳು ಆಶಯಗಳಂತೆ ಅನುಷ್ಠಾನಗೊಳ್ಳಬೇಕು. ಉದಾ: ೧೯೮೩ರ ಮೊದಲ ವಿಧೇಯಕ ಪಕ್ಷದ ಒಳಗಿನವರು ಮತ್ತು ಹೊರಗಿನವರೆಲ್ಲರ 'ಸಾಮ್ಹೂಹಿಕ ಪ್ರಯತ್ನ'ದಿಂದ ಮೂಲೆ ಗುಂಪಾಗುವ ಪ್ರಸಂಗ ಬಂದಾಗ ಅವರನ್ನು ಓಲೈಸಲು ಶಾಸಕರಿಗೂ ಸಂಸದರಿಗೂ ಅಂದಿನ ಜಿಲ್ಲಾ ಪರಿಷತ್ತಿನ ಪದನಿಮಿತ್ತ ಸದಸ್ಯಸ್ಥಾನ ಕೊಟ್ಟಿದ್ದು ಈಗ ಇತಿಹಾಸ. ಎರಡು ಹಂತದಿಂದ ಮೂರು ಹಂತದ ಪಂಚಾಯತ್ ರಾಜ್ ವ್ಯವಸ್ಥೆ ಬಂದಾಗಲೂ ಇದೇ ಒಲೈಕೆ ಮುಂದುವರಿಯಿತು. ಒಂದು ಚುನಾಯಿತ ಸಭೆಗೆ ಆರಿಸಿಬಂದ ಸದಸ್ಯರು ಬೇರೊಂದು ಚುನಾಯಿತು ಸಭೆಯ ಪದನಿಮಿತ್ತ ಸದಸ್ಯರಾಗುವುದು ಅಸಂಗತ. ರಾಜಕೀಯ ಅನುಕೂಲಕ್ಕಾಗಿ ಅಸಂಗತವನ್ನು ಸಂಗತಿಮಾಡುವ ಅನಿವಾರ್ಯತೆ ಬರುವುದರ ನಿದರ್ಶನವಿದು. ಶಾಸಕರಿಗೆ ಇನ್ನೂ ಒಂದು ಆಸೆ ಇತ್ತು. ಅದೆಯೆಂದರೆ ಇದರ ಮೂಲಕ ಜಿಲ್ಲಾ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿಗಳ ಅಧ್ಯಕ್ಷರಾಗುವುದು. ಅದೊಂದಕ್ಕೆ ಸರ್ಕಾರ ಸೊಪ್ಪು ಹಾಕಲಿಲ್ಲ.

ಪದನಿಮಿತ್ತ ಸ್ಥಾನದಿಂದ ಪಂಚಾಯತ್ ರಾಜ್ ಸಂಸ್ಥೆಗಳಿಗಾಗಲಿ ಶಾಸಕರಿಗಾಗಲಿ ಯಾವುದೇ ಉಪಯೋಗವಾಗಿಲ್ಲ. ಎಷ್ಟೋಬಾರಿ ಶಾಸಕರು ಪಂಚಾಯತ್ ರಾಜ್ ಸಂಸ್ಥೆಗಳ ಸಭೆಗೆ ಹಾಜರು ಆಗುವುದಿಲ್ಲ. ಈ ಸಂಸ್ಥೆಗಳ ಸಮಸ್ಯೆಗಳನ್ನು ವಿಧಾನಮಂಡಲ. ಅಧಿವೇಶನಗಳಲ್ಲಿ

ಎತ್ತಿ ಸರ್ಕಾರದ ಗಮನಸೆಳೆದು ತಮ್ಮ ಉಪಯುಕ್ತತೆಯನ್ನು ತೋರಿಸಲಿಲ್ಲ. ಅದರ ಬದಲು ಅವಕಾಶ ಸಿಕ್ಕಾಗಲೆಲ್ಲ ಪಂಚಾಯತ್ ರಾಜ್ ಸಂಸ್ಥೆಗಳನ್ನು ಹೀಗೆಳೆದು ಅವರಿಗೆ ಕೊಟ್ಟಿರುವ ಅಧಿಕಾರ ಹಿಂಪಡೆಯುವದರ ಬಗ್ಗೆಯೇ ಮಾತನಾಡುತ್ತಲೇ ಇರುತ್ತಾರೆ. ಮೊದಲ ಪಂಚಾಯತ್ ರಾಜ್ ಮತ್ತು ಗ್ರಾಮೀಣಾಭಿವೃದ್ಧಿ ಮಂತ್ರಿ ದಿ. ನಜೀರ್‌ಸಾಬ್‌ರವರನ್ನು ಬಿಟ್ಟರೆ ಉಳಿದ ಮಾರ್ಗದರ್ಶಕರು ಮತ್ತು ತತ್ವಜ್ಞಾನಿಗಳು ಪಾತ್ರ ವಹಿಸಲಿಲ್ಲ.

**ದಿ॥ ಎಂ.ವೈ. ಘೋರ್ಪಡೆಯವರಿಗೆ** ಪಂಚಾಯತ್ ರಾಜ್ ವ್ಯವಸ್ಥೆಯ ಬಗ್ಗೆ ಹೆಚ್ಚಿನ ಸದಾಶಯ ಸಹಾನುಭೂತಿ ಇದ್ದರೂ ಅದರ ಲಕ್ಷ್ಯವೆಲ್ಲ ಅಧಿಕಾರಿಗಳ ಮಾರ್ಗದರ್ಶನದಲ್ಲಿ ಬೆಳೆಯುವ ಪಂಚಾಯತ್ ರಾಜ್ ವ್ಯವಸ್ಥೆ ಇತ್ತೇ ಹೊರತು ಪ್ರಜೆಗಳ ಸಹಭಾಗಿತ್ವದಿಂದ ಬೆಳೆಯುವಂತಹ ವ್ಯವಸ್ಥೆಯಲ್ಲ. ರಾಜ್ಯದ ಆಡಳಿತರೂಢ ಕಾಂಗ್ರೇಸ್‌ನಿಂದ ತೊಡಗಿ ಎಲ್ಲಾ ರಾಜಕೀಯ ಪಕ್ಷಗಳೂ ಇದರಲ್ಲಿ ನಿರಾಸಕ್ತರಾಗಿರುವುದು ರಹಸ್ತವಾಗಿಲ್ಲ. ಇದಕ್ಕೆ ಹೊರತಾಗಿರುವುದು/ವಾಗಿರುವರು ನಜೀರ್‌ಸಾಬ್‌ರವರ ಅವಧಿಯಲ್ಲಿ ಆದ ಬದಲಾವಣೆಗಳನ್ನು ಗಮನಿಸಿ ಅದು ಮುಂದುವರಿಯಬೇಕೆಂಬ ಸದಾ ಆಶಯವುಳ್ಳ ಬೆರಳೆಣಿಕೆಯ ರಾಜಕಾರಣಿಗಳು ಮಾತ್ರ ಆದರಲ್ಲಿ ಮುಖ್ಯಮಂತ್ರಿಯೂ ಸೇರಿದ್ದಾರೆ. ಆದ್ದರಿಂದಲೇ ಕಾನೂನಿನ ತಿದ್ದುಪಡಿಗೆ ಒಂದು ಸಮಿತಿ ರಚಿಸಲಾಯಿತು.

ಪರಿಸ್ಥಿತಿ ಹೀಗಿರುವಾಗ ತಿದ್ದುಪಡಿಯ ಅಧ್ಯಕ್ಷರ ಆಶಯದಂತೆ ಶಾಸಕರು ವರ್ತನೆ, ಪಂಚಾಯತ್ ರಾಜ್ ಆಂದೋಲನದಲ್ಲಿ ಹೊಸ ಮನ್ವಂತರ ಆರಂಭವಾಗಲು ಅನುವು ಮಾಡಿಕೊಡುತ್ತಾರೆಯೇ ಎಂಬ ಪ್ರಶ್ನೆ ಕಾಡುತಿದೆ.

ಶಾಸಕರು ಮತ್ತು ರಾಜಕೀಯ ಪಕ್ಷಗಳ ಗೊಂದಲ ನಿಲುವುಗಳು ಏನೇ ಇರಲಿ, ತಿದ್ದುಪಡಿ ಸಮಿತಿ ನೀಡಿವುದು ಒಂದು ಉತ್ತಮ ವರದಿ ಎನ್ನುವದರಲ್ಲಿ ಯಾವ ಅನುಮಾನಗಳೂ ಇಲ್ಲ. ರಾಮಕೃಷ್ಣ ಹೆಗಡೆ, ನಜೀರ್‌ಸಾಬ್ ಕನಸಿನ ಒಂದು ಸ್ವರೂಪವೇ ವಿಕೇಂದ್ರೀಕರಣ ಪ್ರಯೋಗದ ಮೊದಲು ಮಸೂದೆ ಜಾರಿಗೆ ಬಂದು ಅದರನ್ವಯ ಎರಡು ಹಂತದ ಚುನಾಯಿತ ಸಂಸ್ಥೆಗಳು ಕಾಲಿಟ್ಟಿದ್ದು, ೧೯೮೭ರಲ್ಲಿ ವಿಕೇಂದ್ರೀಕರಣದ ಮುಖ್ಯ ಸಿದ್ಧಾಂತಗಳಾದ, ಜನರ ಸಾರ್ವಭೌಮತ್ವವನ್ನು ಸಾಬೀತುಪಡಿಸುವುದಕ್ಕೆ ಅಗತ್ಯವಿರುವ ಸಾಂಸ್ಥಿಕ ರೂಪ ಇದರಲ್ಲಿತ್ತು. ಜಿಲ್ಲೆಯ ಅಭಿವೃದ್ಧಿ ಬೇಡಿಕೆಗಳನ್ನು ನೋಡಿಕೊಳ್ಳುವ ಜಿಲ್ಲಾ ಸರ್ಕಾರವಾದ ಜಿಲ್ಲಾ ಪರಿಷತ್ತು ಮತ್ತು ಗ್ರಾಮ ಮಟ್ಟದಲ್ಲಿ ಇದನ್ನು ಸಾಧಿಸಲು/ಸಾಧಿಸುವ ಮಂಡಲ ಪಂಚಾಯಿತಿಗಳು ಕಾರ್ಯನಿರ್ವಹಿಸಲು ಶುರುಮಾಡಿದಾಗ ರಾಜ್ಯದ ಗ್ರಾಮೀಣ ಭಾಗದಲ್ಲಿ ಆಡಳಿತ ಮತ್ತು ರಾಜಕೀಯದ ವಿಕೇಂದ್ರೀಕರಣದ ಹೊಸಗಾಳಿ ಬೀಸಲು ತೊಡಗಿತ್ತು.

ಈ ರೀತಿ ಹೊಸ ವಾತಾವಾರಣವಿದ್ದದ್ದು ಬರೀ ಎರಡು ವರ್ಷಗಳ ಕಾಲ ಮಾತ್ರ, ೧೯೮೯ರ ವಿಧಾನಸಭಾ ಚುನಾವಣೆಯಲ್ಲಿ ಜನತಾದಳದ ಪರಾಭವ ಹೊಸ ಪಂಚಾಯತ್

ಪ್ರಯೋಗಕ್ಕೆ ಹಿನ್ನಡೆ ತಂದಿತು. ಅದರ ನಂತರ ಈ ವ್ಯವಸ್ಥೆ ಚೇತರಿಸಿಕೊಂಡಿಲ್ಲ. ಹೀಗಾಗಿ ವಿಕೇಂದ್ರೀಕರಣ ಪ್ರಯೋಗ ಮೂಲೆ ಗುಂಪಾಯಿತು.

**ಸಂತೋಷ್ ಕುಮಾರ್.ಹೆಚ್** ರವರು ತಮ್ಮ ಲೇಖನವಾದ "ಪಂಚಾಯತ್ ರಾಜ್ ವ್ಯವಸ್ಥೆಯ ಬಲವರ್ಧನೆಯಲ್ಲಿ ಗ್ರಾಮಸಭೆಯ ಮಹತ್ವ" ಎಂಬ ಶೀರ್ಷಿಕೆಯಡಿಯಲ್ಲಿ ಗ್ರಾಮೀಣ ಜನರು ಆಡಳಿತದಲ್ಲಿ ಭಾಗವಹಿಸುವಿಕೆ ಜೊತೆಗೆ ಗ್ರಾಮಸಭೆಯನ್ನು ಬಲವರ್ಧನೆಗೊಳಿಸುವುದು ಎಂಬ ಅಂಶಗಳ ಕುರಿತು ಒಂದು ವಿಶ್ಲೇಷಣೆಯನ್ನು ನೀಡಿದ್ದಾರೆ. ಅವರ ಅಧ್ಯಯನದ ಪ್ರಮುಖ ಉದ್ದೇಶ ಅಧಿಕಾರದ ವಿಕೇಂದ್ರೀಕರಣ ಮತ್ತು ಗ್ರಾಮೀಣ ಜನರನ್ನು ಆಡಳಿತದಲ್ಲಿ ಭಾಗವಹಿಸುವಂತೆ ಮಾಡುವುದು ಹಾಗೂ ಗ್ರಾಮ ಸಭೆಯನ್ನು ಬಲವರ್ಧನೆಗೊಳಿಸುವುದು.

ಪಂಚಾಯತ್ ರಾಜ್ ವ್ಯವಸ್ಥೆಯ ಮೂಲ ಆಶಯವೇ ಅಧಿಕಾರದ ವಿಕೇಂದ್ರೀಕರಣ ಮತ್ತು ಜನರನ್ನು ಆಡಳಿತದಲ್ಲಿ ಭಾಗವಹಿಸುವಂತೆ ಮಾಡುವುದಾಗಿದೆ. ಭಾರತದ ಪ್ರಥಮ ಪ್ರಧಾನಿ ಜವಹಾರ್‌ಲಾಲ್ ನೆಹರುರವರು ೧೯೫೯ ಅಕ್ಟೋಬರ್ ೦೨ ರಂದು ಪಂಚಾಯತ್ ರಾಜ್ ವ್ಯವಸ್ಥೆಯನ್ನು ರಾಜಸ್ಥಾನದ 'ನಾಗೂರಿ'ನಲ್ಲಿ ಪ್ರಥಮ ಬಾರಿಗೆ ಪ್ರಾರಂಭಿಸಿದರು. ಈ ಪ್ರಯುಕ್ತ ಗ್ರಾಮೀಣ ಪ್ರಜಾಪ್ರಭುತ್ವ ಮತ್ತು ಸ್ಥಳೀಯ ಸಂಸ್ಥೆಗಳ ಪರಿಕಲ್ಪನೆಗೆ ನಾಂದಿಯಾಯಿತು. ಭಾರತ ಸರ್ಕಾರ ೨೦೦೯ನೇ ಇಸವಿಯನ್ನು ಪಂಚಾಯತ್ ವ್ಯವಸ್ಥೆಯ ಪಂಚಾಯತ್ ವ್ಯವಸ್ಥೆಯ ಸುವರ್ಣ ಮಹೋತ್ಸವರ್ಷಾಚರಣೆಯನ್ನಾಗಿ ಆಚರಿಸಿತು. ಸುವರ್ಣ ವರ್ಷಾಚರಣೆಯಭಾಗವಾಗಿ ೨೦೦೦-೨೦೧೦ನ್ನು 'ಗ್ರಾಮ ಸಭೆಯ ವರ್ಷ' ಎಂದು ಘೋಷಿಸಿತು. ಇದರ ಉದ್ದೇಶ ಗ್ರಾಮಸಭೆಯ ಮಹತ್ವವನ್ನು ಜನರಿಗೆ ತಿಳಿಸುವುದರ ಜೊತೆಗೆ ಗ್ರಾಮ ಸಭೆಯನ್ನು ಬಲವರ್ಧನೆಗಳೊಳಿಸುವುದಾಗಿದೆ.

ಮೂರು ಹಂತಗಳ ಸ್ಥಳೀಯ ಸರ್ಕಾರ ವ್ಯವಸ್ಥೆಯಲ್ಲಿ ಗ್ರಾಮ ಪಂಚಾಯತ್‌ಗೆ ತುಂಬಾ ಮಹತ್ವದ ಸ್ಥಾನವಿದೆ. ಗ್ರಾಮೀಣ ಜನರ ಆಶೋತ್ತರಗಳನ್ನು ಪ್ರತಿನಿಧಿಸುವ ವೇದಿಕೆಯಾಗಿ ಗ್ರಾಮ ಪಂಚಾಯತಿ ಕಾರ್ಯನಿರ್ವಹಿಸುತ್ತಿದೆ. ಈ ಪಂಚಾಯತಿಗಳ ಮೂಲಕ ಗ್ರಾಮೀಣ ಜನರು ಅಧಿಕಾರ ವಿಕೇಂದ್ರೀಕರಣದಲ್ಲಿ ಭಾಗವಹಿಸಲು ಸಹಕಾರಿಯಾಗಿದೆ. ಗ್ರಾಮ ಸ್ವರಾಜ್ಯ ಕಲ್ಪನೆಗೆ ಆಶಯ ಬಂದಂತಾಗಿದೆ.

**ಗ್ರಾಮ ಸಭೆ**

ಸಂವಿಧಾನಾತ್ಮಕವಾಗಿ ರಚನೆಯಾಗಿರವ (**೭೩**ನೇ ತಿದ್ದುಪಡಿಯ ಮೂಲಕ, **೨೪೩**(ಎ) ವಿಧಿಯನ್ವಯ) ಗ್ರಾಮಸಭೆ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ತುಂಬಾ ಮಹತ್ವವಾದುದು. ಇದು ಹಳ್ಳಿಯ ವಯಸ್ಕ ಮತದಾರರನ್ನು ಪ್ರತಿನಿಧಿಸುತ್ತದೆ. ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಗ್ರಾಮಸಭೆ ಕನಿಷ್ಠ ೦೬ ತಿಂಗಳಗೊಮ್ಮೆ ಸಭೆ ಸೇರಬೇಕು. ಗ್ರಾಮಸಭೆಗಳಲ್ಲಿ ಪಂಚಾಯಿತಿಯು

ಕಾರ್ಯಗಳು ಮತ್ತು ನಿರ್ಣಯಗಳನ್ನು ಚರ್ಚಿಸಬಹುದಾಗಿದೆ. ವಿವಿಧ ವರದಿಗಳನ್ನು ಚರ್ಚಿಸಿ ನಿರ್ಣಯಗಳನ್ನು ಕೈಗೊಳ್ಳಲು ಅನುಕೂಲವಾಗುತ್ತದೆ. ಹಳ್ಳಿಗಳ ಮಟ್ಟದಲ್ಲಿ ಗ್ರಾಮಸಭೆ ವೀಕ್ಷಕನಂತೆ ಕಾರ್ಯನಿರ್ವಹಿಸಲು ಸಹಕಾರಿಯಾಗಿದೆ. ಗ್ರಾಮಸಭೆಯ ಮುಖ್ಯ ಉದ್ದೇಶ ಯೋಜನೆ ಮತ್ತು ಅದರ ಮೌಲ್ಯಮಾಪನವನ್ನು ವಿಕೇಂದ್ರೀಕರಿಸಿ ಸ್ಥಳೀಯ ಜನರಲ್ಲಿ ತೀರ್ಮಾನಗೊಳ್ಳುವ ಚಟುವಟಿಕೆಗಳಲ್ಲಿ/ವಿಷಯಗಳಲ್ಲಿ ಭಾಗವಹಿಸುವಂತೆ ಮಾಡುವುದಾಗಿದೆ. ಗ್ರಾಮಸಭೆಯ ಮೂಲಕ ಸಾಮಾಜಿಕ ಲೆಕ್ಕ ಪರಿಶೋಧನೆಯನ್ನು ಯಶಸ್ವಿಯಾಗಿ ಕೈಗೊಂಡು ಪಂಚಾಯತಿಗಳ ಅವ್ಯವಹಾರಗಳನ್ನು (ಅಕ್ರಮ) ಬಯಲಿಗೆಳೆಯಬಹುದು. ಹಳ್ಳಿಯ ಪ್ರತಿಯೊಬ್ಬ ಮತದಾರರ ನಿರ್ಣಯ ತೆಗೆದುಕೊಳ್ಳುವ ವಿಷಯದಲ್ಲಿ ಅಧಿಕಾರಿಯುತವಾಗಿ ಭಾಗವಹಿಸಲು ವೇದಿಕೆಯಾಗಿ ಕಾರ್ಯನಿರ್ವಹಿಸುತ್ತಿದೆ.

ಪ್ರಸ್ತುತ ಪರಿಸ್ಥಿತಿಯಲ್ಲಿ ಗ್ರಾಮ ಸಭೆಗಳಲ್ಲಿ ಜನರ ಸಹಭಾಗಿತ್ವ ಪ್ರಮಾಣ ಕಡಿಮೆಯಾಗಿದೆ. ಸಭೆಗಳು ಕೇವಲ ಔಪಚಾರಿಕವೆಂಬಂತೆ ನಡೆಯುತ್ತಿವೆ ಕನಿಷ್ಠ ಕೋರಂನ ಕೊರತೆಯಿಂದ ಎಷ್ಟೋ ಗ್ರಾಮಸಭೆಗಳನ್ನು ಮುಂದೂಡಲಾಗಿದೆ. ವ್ಯವಸ್ಥಿತಿ ವಿಷಯಗಳ ಚರ್ಚೆ ಕಡಿಮೆಯಾಗುತ್ತಿದೆ. ಅಧಿಕಾರಿಗಳಿಗೆ ಆಧ್ಯತಾ ವಿಷಯಗಳ ಬಗ್ಗೆ ಮಾಹಿತಿ ಇಲ್ಲ. ಪಂಚಾಯತಿ ಅಧಿಕಾರಿಗಳು ಗ್ರಾಮ ಸಭೆಗಳ ಬಗ್ಗೆ ಅಸಡ್ಡೆಯ ಭಾವನೆ ಹೊಂದಿರದೆ, ಫಲಾನುಭವಿಗಳ ಆಯ್ಕೆ ಗ್ರಾಮಸಭೆಯ ಮೂಲಕ ಸರಿಯಾದ ರೀತಿಯಲ್ಲಿ ನಡೆಯಬೇಕು. ಗ್ರಾಮ ಸಭೆಯನ್ನು ಬಲವರ್ಧನೆಗೊಳಿಸುವುದು ನಮ್ಮ ನೀತಿ ನಿರೂಪಕರ ಪ್ರಮುಖ ಕಾರ್ಯವಾಗಿದೆ ಎಂಬುವುದು ಲೇಖಕರ ವಾದವಾಗಿದೆ.

ಲೇಖಕರು ತಮ್ಮ ಲೇಖನದಲ್ಲಿ ಈ ಕೆಳಕಂಡ ಕೆಲವೊಂದು ಸಲಹೆ/ಕ್ರಮಗಳನ್ನು ನೀಡಿದ್ದಾರೆ.

ಅ) ಗ್ರಾಮೀಣ ಜನರಲ್ಲಿ ಗ್ರಾಮಸಭೆಯ ಮಹತ್ವ ಮತ್ತು ಅದರ ಅವಶ್ಯಕತೆಯ ಬಗ್ಗೆ ಜಾಗೃತಿ ಮೂಡಿಸುವುದರ ಮೂಲಕ ಜನರನ್ನು ಸಭೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡುವುದು.

ಆ) ಗ್ರಾಮ ಸಭೆಗಳನ್ನು ವ್ಯವಸ್ಥಿತವಾಗಿ ನಡೆಸಲು ಅಧಿಕಾರಿ ಮತ್ತು ಜನಪ್ರತಿನಿಧಿಗಳಿಗೆ ತರಬೇತಿ ನೀಡುವುದು. ಇವರುಗಳು ಜನರ ಸಮಸ್ಯೆಗಳಿಗೆ ಸ್ಪಂದಿಸುವಂತೆಮಾಡುವುದು.
ಇ) ಫಲಾನುಭವಿಗಳ ಆಯ್ಕೆ, ಚರ್ಚಿತ ವಿಷಯಗಳನ್ನು ಬಹಿರಂಗೊಳಿಸುವುದು ಯುವಕ ಮಂಡಳಿಗಳು, ರೈತ ಸಂಘಗಳು ಮಹಿಳಾ ಸ್ವ-ಸಹಾಯ ಗುಂಪುಗಳು ಮತ್ತು ಸ್ಥಳೀಯ ಸರ್ಕಾರೇತರ ಸಂಸ್ಥೆಗಳನ್ನು ಸಕ್ರೀಯವಾಗಿ ತೊಡಗಿಸಿಕೊಳ್ಳುವುದು. ಹೀಗೆ ಮಾಡುವುದರಿಂದ ಗ್ರಾಮೀಣ ಪ್ರದೇಶದಲ್ಲಿ ಉತ್ತಮ ಆಡಳಿತ ನಿರ್ವಹಣೆಗೆ ಗ್ರಾಮಸಭೆ ಮುಖ್ಯವಾಗಿದೆ.

ಈ ಮೇಲಿನ ಎಲ್ಲಾ ಕ್ರಮಗಳು ಅನುಸರಿಸಬೇಕಾದರೆ, ಮೂಲಭೂತವಾಗಿ ಜನಸಾಮಾನ್ಯರಿಗೆ ಗ್ರಾಮಸಭೆ ಎಂದರೇನು? ಗ್ರಾಮಸಭೆ ನಡೆಸುವುದರಿಂದಾಗುವ ಉಪಯೋಗಗಳು ಅಥವಾ ಗ್ರಾಮಸಭೆಯ ಬದಲಿಗೆ ಮೊದಲು ವಾರ್ಡ್‌ಸಭೆಗಳನ್ನು ಮಾಡುವುದು. ಈ ಸಭೆಗಳ ಸದಸ್ಯರ ಮೂಲಕ ಸಮಸ್ಯೆಗಳ ಪಟ್ಟಿಯನ್ನು ತಯಾರಿಸುವುದು, ಎಲ್ಲಾ ವಾರ್ಡ್‌ಗಳಲ್ಲಿ ಯಾವ ಸಮಸ್ಯೆಗಳಿಗೆ ಹೆಚ್ಚು ಒತ್ತು ನೀಡಲಾಗಿದೆ ಎಂದು ಒಂದು ಆದ್ಯತಾ ಪಟ್ಟಿ ತಯಾರಿಸಿ (**ಜನಾಯೋಜನೆ ಹೈ.ಕ. ಅನುಭವಗಳು, ಡಾ.ಎಂ.ಚಂದ್ರಪೂಜಾರಿ**) ಅದಕ್ಕೆ ತಕ್ಕಂತೆ/ಬೇಕಾದಂತ ಪರಿಹಾರೋಪಾಯಗಳನ್ನು ಗ್ರಾಮಸಭೆಗಳ ಮೂಲಕ ಕಂಡುಕೊಳ್ಳುವುದು. ಇದರಿಂದ ಜನರ ಸಮಸ್ಯೆಗಳನ್ನು ಮುಕ್ತವಾಗಿ ಹೇಳಿಕೊಳ್ಳಲು ಸಾಧ್ಯವಾಗುತ್ತದೆ ಮತ್ತು ಜನ ಪಾಲ್ಗೊಳ್ಳುವಿಕೆಗೂ ಒಂದು ಅರ್ಥಬರುತ್ತದೆ.

**ಟಿ.ಆರ್. ರಘುನಂದನ್‌ರವರು** ತಮ್ಮ ಲೇಖನವಾದ "Decentralization and local Governmntes"ದಲ್ಲಿ ಕೆಳಸ್ತರದ ಸರ್ಕಾರ ಸಂಸ್ಥೆಗಳಿಗೆ ಅಧಿಕಾರ ವಿಕೇಂದ್ರೀಕರಣವು ಸಂವಿಧಾನದ ಒಂದು ಕೊಡುಗೆಯಾಗಿದೆ. ಇದರಿಂದಾಗಿ ಹಂತ-ಹಂತವಾಗಿ ಪಂಚಾಯತ್ ರಾಜ್ ಸಂಸ್ಥೆಗಳು ತಮ್ಮ ವಿಕಸನವನ್ನು ಹೊಂದುತ್ತಿವೆ. ಅದಕ್ಕಾಗಿ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರಗಳು ಅನುವು ಮಾಡಿಕೊಡಬೇಕು. ಉತ್ತಮ ಆಡಳಿತ ಜಾರಿಗೆ ತರಬೇಕಾದರೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಜನಸಾಮಾನ್ಯರ ಪಾಲ್ಗೊಳ್ಳುವಿಕೆ ಅತ್ಯವಶ್ಯಕ. ಇದು **೭೩**ನೇ ಸಂವಿದಾನದ ತಿದ್ದುಪಡಿ ಜನರ ಪರವಾದ ತಿದ್ದುಪಡಿಯಾಗಿದ್ದರಿಂದ ಇಂದು ಪಂಚಾಯತ್ ರಾಜ್ ಸಂಸ್ಥೆಗಳು ಬಲಯುತವಾಗಿ ಮತ್ತು ಸ್ವಾಯತ್ತತೆಯಾಗಿ ಬೆಳವಣಿಗೆ ಹೊಂದಲು ಸಾದ್ಯವಾಗಿವೆ.

ಎಂ. ಚಂದ್ರಪೂಜಾರಿ ಅವರ **"ದೇಶಿಯತೆಯ ನೆರಳಲ್ಲಿ ವಿಕೇಂದ್ರೀಕರಣ"** ಎಂಬ **ಪುಸ್ತಕದ "ತಳಮಟ್ಟದ ತಳಮಟ್ಟ ರಾಜಕೀಯ"** ಎಂಬ ಲೇಖನದಲ್ಲಿ ವಿಕೇಂದ್ರೀಕರಣ ವ್ಯವಸ್ಥೆ ಮತ್ತು ಕೆಳವರ್ಗದವರ ಸಶಕ್ತೀಕರಣ ಕುರಿತು ವಿವರಿಸಿದ್ದಾರೆ. ಅವರ ಅಧ್ಯಯನದ ಮುಖ್ಯ ಉದ್ದೇಶ ತಳಮಟ್ಟದ ರಾಜಕೀಯ ವ್ಯವಸ್ಥೆ/ಪ್ರಕಿಯೆಯಲ್ಲಿ ಗ್ರಾಮಪಂಚಾಯತಿಗಳಲ್ಲಿ ಕೆಳಜಾತಿ ಅಥವಾ ವರ್ಗಗಳ ಆಶೋತ್ತರಗಳಿಗೆ ಪ್ರಾತಿಧ್ಯತೆ, ಮತ್ತು ಅವರುಗಳ ಸಶಕ್ತೀಕರಣ ನಡೆದಿದೆಯೇ? ಹಾಗೂ ಯಾವ ಯಾವ ಅಂಶಗಳು ವಿಕೇಂದ್ರೀಕರಣ ತಳಮಟ್ಟದಲ್ಲಿ ಪ್ರಕಟಗೊಳ್ಳುವಲ್ಲಿ ಅಡ್ಡಿಯಾಗಿವೆಂದು ವಿಶ್ಲೇಷಿಸುವುದು.

ಇದಕ್ಕಾಗಿ ಲೇಖಕರು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಪಾಪಿನಾಯಕನಹಳ್ಳಿ ಗ್ರಾಮ ಪಂಚಾಯತ್‌ನ್ನು ಆಯ್ಕೆ ಮಾಡಿಕೊಂಡು ಮೇಲಿನ ಉದ್ದೇಶವನ್ನು ಈಡೇರಿಸಲು ಪ್ರಯತ್ನಿಸಿದ್ದಾರೆ. ಇದೊಂದು ಎಂಪರಿಕಲ್ ಅಧ್ಯಯನವಾಗಿದೆ. ಸಮಯ ಮತ್ತು ಸಂಪನ್ಮೂಲ

ಕೊರತೆಯಿಂದ ಕೇವಲ ಒಂದು ಭೂಪ್ರದೇಶದ ಗ್ರಾಮ ಪಂಚಾಯತ್‌ಗೆ ಅಧ್ಯಯನವನ್ನು ಸೀಮಿತಗೊಳಿಸಿದ್ದಾರೆ.

ವಿಕೇಂದ್ರೀಕರಣ ಮತ್ತು ಸಶಕ್ತೀಕರಣ ಎರಡು ಪದಗಳನ್ನು ಲೇಖಕರು ವಿವರಿಸಿದ ನಂತರ ಅಧ್ಯಯನವನ್ನು ಪ್ರಾರಂಭಿಸಿದ್ದಾರೆ. ವಿಕೇಂದ್ರೀಕರಣವನ್ನು ಆಡಳಿತದ ರಚನೆಗಳಲ್ಲಿ ಆಗುವ ಹೆಚ್ಚಳವಾಗಿದ್ದು, ಅಂದರೆ ಆಡಳಿತದ ರಚನೆಗಳು ತಳಮಟ್ಟಕ್ಕೆ ತಲುಪುವಂತಾಗಬೇಕು ಹಾಗೂ ಗ್ರಾಮಸ್ಥರು ಹೊಸ ಅರಿವು, ಹೊಸ ವಿಚಾರಗಳೊಂದಿಗೆ ಆರೋಗ್ಯ, ಶಿಕ್ಷಣ, ವಸತಿ, ಭಾಗವಹಿಸುವಿಕೆ ಮತ್ತು ಇತರ ಮೂಲಭೂತ ಸೌಲಭ್ಯಗಳ ಹೊಂದುವಿಕೆ ಇತ್ಯಾದಿಗಳಿಂದ ಸಶಕ್ತೀಕರಣವನ್ನು ಗುರುತಿಸಿದ್ದಾರೆ.

ಪ್ರಸ್ತುತ ಲೇಖನದಲ್ಲಿ ಪಾಪಿನಾಯಕನಹಳ್ಳಿಯ ಸಂಪೂರ್ಣ ಚಿತ್ರಣವನ್ನು ನೀಡಿದ್ದು, ಪ್ರಮುಖವಾಗಿ ಅಲ್ಲಿರುವ ಸಮಾಜ, ಸಮುದಾಯ, ಸಂಸ್ಕೃತಿ, ಶಿಕ್ಷಣ ಅರೋಗ್ಯ, ಸಂಪನ್ಮೂಲ ಸಂಗ್ರಹ, ಸಂಪನ್ಮೂಲಗಳ ಬಳಕೆ, ವಸತಿ ಇತ್ಯಾದಿಗಳ ಬಗ್ಗೆ ಚರ್ಚಿಸಿದ್ದಾರೆ, ಈ ಎಲ್ಲಾ ಸಂಗತಿಗಳಿಗೂ ಮತ್ತು ವಿಕೇಂದ್ರೀಕರಣ ತತ್ವಕ್ಕೂ ಸಂಬಂಧವಿದೆ ಎಂದು ವಾದಿಸಿದ್ದಾರೆ.

ವಿಕೇಂದ್ರೀಕರಣದ ಉದ್ದೇಶ ಸಮಗ್ರ ಗ್ರಾಮೀಣಾಭಿವೃದ್ಧಿ. ಸಮಗ್ರತೆ ಕುರಿತು ಚರ್ಚಿಸುವಾಗ ಯಾವುದೇ ಒಂದು ವರ್ಗ ಅಥವಾ ಕೆಲವು ಜಾತಿಗೆ ಸೇರಿದವರ ಆಸಕ್ತಿ ಪೂರಕವಾದ ಕಾರ್ಯಕ್ರಮಗಳ ಕುರಿತು ಪರಿಭಾವಿಸುವುದು ಅಸಂಬದ್ಧ ಅನ್ನಿಸಬಹುದು. ಆದರೆ ಅಸಂಬದ್ಧತೆಯ ಪ್ರಶ್ನೆ ಬರುವುದೇ ಸಮಾನತೆಯನ್ನು ಮೆಕ್ಯಾನಿಕಲ್ ಆಗಿ ಪರಿಭಾವಿಸುವುದರಿಂದ. ಹಲವಾರು ಭಾಷೆ, ಜಾತಿ, ಧರ್ಮ, ಸಂಸ್ಕೃತಿ, ಇದರಲ್ಲಿ ಎಲ್ಲರಿಗೂ ಒಂದೇ ಕಾನೂನು ಅನ್ವಯವಾಗಬೇಕನ್ನುವುದು ಸಮಾನತೆ ಆಗುವುದಿಲ್ಲ; ಅಸಮಾನತೆ ಆಗುತ್ತದೆ. ಇದರಿಂದಾಗಿ ಭಾಷಾ ಅಲ್ಪಸಂಖ್ಯಾತರ ಆಸಕ್ತಿ ಮೂಲೆಗುಂಪಾಗಬಹುದು.

ಗ್ರಾಮ ಪಂಚಾಯತ್ ವ್ಯವಸ್ಥೆಯಲ್ಲಿ ನಿರ್ದಿಷ್ಟ ಜಾತಿ/ವರ್ಗದ ಆಸಕ್ತಿಗೆ ಪೂರಕವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಷ್ಟು ಸ್ವಾತಂತ್ರ್ಯ ತಳಮಟ್ಟದ ಸಂಸ್ಥೆಗಳಿಗೆ ಇದೆಯೇ? ಈ ಪ್ರಶ್ನೆ ಯಾಕೆಂದರೆ ಕರ್ನಾಟಕದಲ್ಲಿ ಚಾಲ್ತಿಯಲ್ಲಿರುವ ಪಂಚಾಯತ್ ರಾಜ್ ತಳಮಟ್ಟದ ಜನರ ಭಾಗವಹಿಸುವಿಕೆಗೆ ಅಷ್ಟೊಂದು ಮಹತ್ವ ಕೊಡುವುದು ಕಾಣುತ್ತಿಲ್ಲ. ವಿಕೇಂದ್ರೀಕರಣ ಎನ್ನುವುದು ಒಂದು ಸಮಾಜ ಅಥವಾ ಸಮುದಾಯಕ್ಕೆ ಸಂಬಂದಿಸಿದ್ದಾದರೆ ಸಶಕ್ತಿಕರಣವು ಸಮಾಜದಲ್ಲಿರುವಂತಹ ಸಂಗತಿಗಳ ಯಶಸ್ವಿಗೆ ಕಾರಣವಾಗಿರುತ್ತದೆ.

**ಕೊನೆಯ ಟಿಪ್ಪಣಿಗಳು**

೧. ಡಾ. ಅಬ್ದುಲ್ ಅಜೀಜ್,"ಎಂಪವರಿಂಗ್ ಪಂಚಾಯತಿ ರಾಜ್ ಇನ್ಸಿಟ್ಯೂಶನ್ಸ್" ಎ ಸ್ಟಡಿಇನ್ ಕರ್ನಾಟಕ (೨೦೦೨)
೨. ಎಂ.ಚಂದ್ರ ಪೂಜಾರಿಯವರು ಪುಸ್ತಕವಾದ "ಕರ್ನಾಟಕದ ಪಂಚಾಯತ್ ರಾಜ್ ಸಮಸ್ಯೆ ಮತ್ತು ಪರಿಹಾರಗಳು" ೨೦೧೧
೩. ಎಂ.ಗೋವಿಂದ, ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫
೪. ಸುರಜಿತ್ ಸಿಂಗ್ ಶರ್ಮ, ರೂರಲ್ ಅಡ್ಮಿನಿಸ್ಟ್ರೇಷನ್ ಇನ್ ಇಂಡಿಯಾ (೧೯೭೯)
೫. ಡಾ. ಕೆ. ಚಂದ್ರಶೇಖರ "ಅಭಿವೃದ್ಧಿ, ಪಥದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು",೩೨೬.೮ (ಸಿ.ಹೆಚ್)ಅಹನ್ ಪಬ್ಲಿಕೇಶನ್ ನಾಗರಭಾವಿ, ಬೆಂಗಳೂರು-೨೦೦೯ ಮುಟ ಸಂಖ್ಯೆ: ೧೨೫-೧೩೫.
೬. ಡಾ. ಕೆ. ಚಂದ್ರಶೇಖರ "ಅಭಿವೃದ್ಧಿ ಪಥದಲ್ಲಿ ಅಧಿಕಾರಿಗಳು ಮತ್ತು ಜನತೆ ಪಾತ್ರ", ಕರ್ನಾಟಕ ವಿಕಾಸ, ಬೆಂಗಳೂರು, ನವ್ಹೆಂಬರ್ ೨೦೧೫
೭ ಎಂ. ಗೋವಿಂದರಾವ್ ಮಾನವ ಅಭಿವೃದ್ಧಿಗಾಗಿ ಸಾಂಸ್ಥಿಕ ಸುಧಾರಣೆಗಳು- ಪಂಚಾಯತ್ ರಾಜ್ ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫ ಮುಟ ಸಂಖ್ಯೆ: ೨೮೦-೨೮೧, ೨೮೭
೮. ಅಮರನಾಥ ಮತ್ತು ವಾಣಿ, ಕರ್ನಾಟಕದಲ್ಲಿ ಹಣಕಾಸು ವಿಕೇಂದ್ರೀಕರಣ (೨೦೦೪) ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ ೧೯೯೩
೯. ಡಾ॥ ಅಬ್ದುಲ್ ಅಜೀಜ್, ಎಂಪವರಿಂಗ್ ಪಂಚಾಯತಿ ರಾಜ್ ಇನ್ಸಿಟ್ಯೂಷನ್ ಎ ಸ್ಟಡಿ ಇನ್ ಕರ್ನಾಟಕ ಎಡಿಟರ್, ಡಿ ಸುಂದರಂ ರಾಮ್ ಪ್ರಕಾಶನ ಆಕಾಡೆಮಿ ಆಫ್ ಗ್ರಾಸ್‌ರೂಟ್ಸ್ ಸ್ಟಡಿಸ್ ಆಂಡ್ ರಿಸರ್ಚ್ ಆಫ್ ಇಂಡಿಯಾ, ತಿರುಪತಿ (ಎ.ಪಿ), ಕನಿಷ್ಕ ಪಬ್ಲಿಷರ್ಸ್ ನ್ಯೂಡೆಲ್ಲಿ, ೨೦೦೭ ಮುಟ ಸಂಖ್ಯೆ: ೪೨-೪೮
೧೦. ಡಾ॥ ಎಂ. ಚಂದ್ರ ಪೂಜಾರಿ, "ಕರ್ನಾಟಕ ಪಂಚಾಯತ್ ರಾಜ್ ಸಮಸ್ಯೆ ಮತ್ತು ಪರಿಹಾರಗಳು" ಪ್ರಕಾಶನ, ಕರ್ನಾಟಕ ರಾಜ್ಯ ಗ್ರಾಮ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಸದಸ್ಯರ ಒಕ್ಕೂಟ, (ಕ್ರೀಯಾ ಪ್ರಕಾಶನ) ಬೆಂಗಳೂರು, ೨೦೧೧, ಮುಟ ಸಂಖ್ಯೆ: ೧೭-೨೦, ೩೪
೧೧. ಡಾ.ಎಂ. ಚಂದ್ರಮೂಜಾರಿ, 'ಜನಾಯೋಜನೆ' ಹೈದರಾಬಾದ್ ಕರ್ನಾಟಕದ ಅನುಭಗಳು, ಪ್ರಕಾಶನ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೪, ಮುಟ ಸಂಖ್ಯೆ: ೨-೬
೧೨. ಡಾ॥ ಅಬ್ದುಲ್ ಅಜೀಜ್, "ಡಿಸೆಂಟ್ರಲೈಜೆಶನ್ಡ್ ಗವರ್ನನ್ಸ ಇನ್ ಏಛಿಯಾ ಕಂಟ್ರಿಸ್" ಪ್ರಕಾಶನ, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ-೧೯೯೬.
೧೩. ಜಯಪ್ರಕಾಶ್ ನಾರಾಯಣ, "ಜನರಿಗಾಗಿ ಸ್ವರಾಜ್" ವರ್ಕಿಂಗ್ ಆಫ್ ಗ್ರಾಮಸಭಾ ಇನ್ ಕರ್ನಾಟಕ ಸ್ಟಡೀ ಅಟ್ ಮೈಕ್ರೋಲೆವೆಲ್, ಎಸ್.ಟಿ.ಭಾರ್ಗವ್, ವ್ಯಾಲ್ಯೂಮ್ ೧೩, ಜೂನ್, ೨೦೧೧
೧೪. ಬಿ.ಎಸ್. ವಸಂತಕುಮಾರ್ "ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್, ೨೦೧೧
೧೫. ಹಿರಾಚಂದ ಲಕ್ಷ್ಮಿನಾಗನಾಥ್ ವಾಘ್ಮಾರ, (ಅನುವಾದ) ಪ್ರೋ. ಹನುಮಂತು, "ಗ್ರಾಮ ಸಭೆಗೆ ಅಧಿಕಾರ ಬೇಕೆ?", ೧೯೯೬
೧೬.ಪ್ರೋ.ಟಿ.ಆರ್. ಚಂದ್ರಶೇಖರ, "ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ", ರಾಜಕೀಯ ವೈಫಲ್ಯದ ಒಂದು ಸಂಕಥನ, (೨೦೦೪)

೧೭.ಜೀನ್‌ಡ್ರಿಜ್, ಡಾ॥ ಟಿ.ಆರ್. ಚಂದ್ರಶೇಖರ್‌ರವರ ಗ್ರಾಮ ಪಂಚಾಯತಿಗಳು ವಿಕೇಂದ್ರೀಕರಣದ ಅಡಿಪಾಯ' – ಉತ್ತರ ಪ್ರದೇಶದ ಪಲಾನಪುರ್ ಎಂಬ ಗ್ರಾಮವನ್ನು ಕುರಿತಂತೆ ನಡೆಸಿದ ಅಧ್ಯಯನ (೧೯೫೭–೧೯೯೩)
೧೮. ಟಿ.ಆರ್. ಚಂದ್ರಶೇಖರ್, "ಜನರ–ಯೋಜನೆ–ಕರ್ನಾಟಕದ ಅನುಭವಗಳು" ೨೦೦೫ (ಮಂಟಪ ಮಾಲೆ ೧೩೦)
೧೯.ಡಾ॥ ಎಂ. ಚಂದ್ರಪುಜಾರಿ, "ದೇಶಿಯತೆಯ ನೆರಳಲ್ಲಿ ವಿಕೇಂದ್ರೀಕರಣ" ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮
೨೦. ಎಂ. ಚಂದ್ರಪುಜಾರಿ, "ಸಮುದಾಯ ಮತ್ತು ಸಹಭಾಗಿತ್ವ" ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨
೨೧. ಡಾ॥ ಟಿ.ಆರ್. ಚಂದ್ರಶೇಖರ್, "ಜನರನ್ನು ಒಳಗೊಳ್ಳುವ ಅಭಿವೃದ್ಧಿ"(ಹೈದ್ರಾಬಾದ್–ಕರ್ನಾಟಕ ಪ್ರದೇಶ), ೨೦೦೯
೨೨. ಡಾ॥ ಕೆ.ಚಂದ್ರಶೇಖರ್ "ಅಭಿವೃದ್ಧಿ ಪಥದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು",೨೦೦೯
೨೩. ಡಾ॥ ಎಂ.ಎಂ.ಭಟ್ಟ "ಕರ್ನಾಟಕ ಗ್ರಾಮ ಪಂಚಾಯತಿ ೧೯೯೩ರ ಶಾಸನ ಪರಿಚಯ"೧೯೯೪
೨೪.ಟಿ.ಎಂ. ಥಾಮಸ್ ಐಸಾಕ್, ರಿಚರ್ಡ್ ಡಬ್ಲೂ ಪ್ರಾಂಕ್, "ಲೋಕಲ್ ಡೆಮಾಕ್ರಸಿ ಅಂಡ್ ಡೆವಲಪ್‌ಮೆಂಟ್ ಪೀಪಲ್ಸ್ ಕ್ಯಾಂಪೈನ್ ಫಾರ್ ಡಿಸೆಂಟ್ರಲೈಸ್ಡ್ ಪ್ಲ್ಯಾನಿಂಗ್ ಇನ್ ಕೇರಳ", ೨೦೦೨
೨೫. ಎಂ. ದೇವೇಂದ್ರ ಬಾಬು "ಡಿ ಸೆಂಟ್ರಲೈಜೆಷನ್ ಸ್ಟಡೀಸ್ ಇನ್ ತ್ರೀ ಸೌತ್ ಇಂಡಿಯಾನ್ ಸ್ಟೇಟ್ಸ್ –೨೦೦೪ ಜರ್ನಲ್ ಆಪ್ ಕರ್ನಾಟಕ ಸ್ಟಡಿ]
೨೬. ಡಾ॥ ಟಿ.ಆರ್. ಚಂದ್ರಶೇಖರ್, "ವಿಕೇಂದ್ರೀಕರಣ ಪ್ರಯೋಗ–ಗ್ರಾಮೀಣ ಅಭಿವೃದ್ಧಿ:– ಕರ್ನಾಟಕದ ಅನುಭವಗಳು (೨೦೦೪)
೨೭. ಪದ್ಮರಾಜ ದಂಡಾವತಿ,"ಬುಟಾಟಿಕೆಗೂ ಒಂದು ಮಿತಿ ಇರಬೇಡವೆ?", ಪ್ರಜಾವಣಿ: ದಿನಪತ್ರಿಕೆ ಭಾನುವಾರ ೧೭ರ ಫೇಬ್ರವರಿ ೨೦೧೩
೨೮.ಡಾ॥ ಎಂ. ಚಂದ್ರ ಪೂಜಾರಿ, "ಕರ್ನಾಟಕದ ಪಂಚಾಯತ್ ರಾಜ್ ಸಮಸ್ಯೆ ಮತ್ತು ಪರಿಹಾರಗಳು" (೨೦೧೧)
೨೯.ಟಿ.ಗಿರೀಶ್ ನಾಯಕ, "ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಸ್ಥಾಯಿ ಸಮಿತಿಗಳು", ಅಭಿವೃದ್ಧಿ ಅಧ್ಯಯನ ವಿಭಾಗ ಸಂಪಾದಕರು. ಡಾ॥ ಸಿದ್ದಗಂಗಮ್ಮ ಸಂ:೮, ಸಂಚಿಕೆ:೨ ಜು–ಡಿ.೨೦೧೦
೩೦.ಕಿಚಿಡಿ ಚನ್ನಪ್ಪ, "ಕರ್ನಾಟಕದಲ್ಲಿ ಗ್ರಾಮ ಪಂಚಾಯಿತಿ ಬೆಳವಣಿಗೆ ಅಂದು–ಇಂದು, ಅಭಿವೃದ್ಧಿ ಅಧ್ಯಯನ ವಿಭಾಗ: ಸಂಪಾದಕರು ಡಾ॥ ಸಿದ್ದಗಂಗಮ್ಮ ಸಂಪುಟ.೮ ಸಂಚಿಕೆ : ೨ ಜು;ಡಿ.೨೦೧೦
೩೧. ಟಿ.ಆರ್. ಚಂದ್ರಶೇಖರವರು "ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ" ೨೦೦೪
೩೨. ಡಾ॥ ಎಂ.ದಿನೇಶ್ ಹೆಗ್ಡೆ, "ಅಭಿವೃದ್ಧಿ ಅಂಚಿನ ಸಮುದಾಯಗಳು ಹಿಂದುಳಿದ ವರ್ಗಗಳ ಒಂದು ಅದ್ಯಯನ, ಸಂಪಾದಕರು ಎಂ.ಚಂದ್ರಪುಜಾರಿ ಸಂಪುಟ:೯, ಸಂಚಿಕೆ;೨, ಜು–ಡಿ೨೦೦೭
೩೩.ಪ್ರೊ. ಹೆಚ್.ವಿ ನಾಗೇಶ್, "ಭಾರತದಲ್ಲಿ ಸಾಮಾಜಿಕ ನ್ಯಾಯ ಹಾಗೂ ಡಾ.ಬಿ.ಆರ್. ಅಂಬೇಡ್ಕರರ ಕೊಡುಗೆ" ೫೪೫ (ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೨೦೦೯),
೩೪. ಡಾ॥ ಎಂ. ಚಂದ್ರಪೂಜಾರಿ, "ಕರ್ನಾಟಕದ ಪಂಚಾಯತ್ ರಾಜ್ ಸಮಸ್ಯೆ ಮತ್ತು ಪರಿಹಾರಗಳು" ೨೦೧೧
೩೫. ಡಾ॥ ಎನ್. ಶಿವಣ್ಣ, "ಪಾಲಿಟಿಕಲ್ ಡಿಸೆಂಟ್ರಲೈಜೆಶನ್ ಆ್ಯಂಡ್ ಇಶ್ಯೂ ಆಫ್ ಅಂಕೌಂಟೆಬಿಲಿಟಿ: ದಿ ಕೇಸ್ ಆಫ್ ಗ್ರಾಮ ಸಭಾ ಇನ್ ಕರ್ನಾಟಕ".

**ಅಧ್ಯಾಯ : ಮೂರು**

## ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಬೆಳೆದು ಬಂದ ಹಾದಿ

# ಅಧ್ಯಾಯ - ಮೂರು

# ಭಾರತ ಮತ್ತು ಕರ್ನಾಟಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ನಡೆದು ಬಂದಹಾದಿ

**ಪ್ರಸ್ತಾವನೆ**

ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಪ್ರಜೆಗಳೆಲ್ಲರೂ ಆಡಳಿತದಲ್ಲಿ, ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಬೇಕು, ರಾಜ್ಯದ ಆಗು ಹೋಗುಗಳು ಎಲ್ಲರಿಗೂ ಅರಿವಾಗಬೇಕು. ಸ್ಥಳೀಯ ಸರ್ಕಾರಗಳ ಮೂಲಕ ಈ ಉದ್ದೇಶ ಯಶಸ್ವಿಯಾಗಿ ನೇರವೇರುವುದಕ್ಕೆ ಸಾಕಷ್ಟು ಅವಕಾಶಗಳಿವೆ. ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಆಯಾ ಜನರಿಂದಲೇ ಆಡಳಿತ ನಿರ್ವಹಣೆಯಾದಾಗ ಆಡಳಿತ ವೆಚ್ಚದಲ್ಲಿ ಕಡಿಮೆಯಾಗುವುದಕ್ಕೆ ಮತ್ತು ದಕ್ಷತೆ ಹೆಚ್ಚುವುದಕ್ಕೆ ಸಾಧ್ಯತೆ ಇದೆ. ಸ್ಥಳೀಯ ಸ್ವಯಂ ಸರ್ಕಾರದ ಪಂಚಾಯಿತಿಗಳು ಸಾಮಾಜಿಕ ಬದಲಾವಣೆ ಮತ್ತು ಆರ್ಥಿಕ ಅಭಿವೃದ್ಧಿಯನ್ನು ಗ್ರಾಮೀಣ ಪ್ರದೇಶಗಳಲ್ಲಿ ತರುವುದರಲ್ಲಿ ಪ್ರಮುಖ ಪಾತ್ರವಹಿಸುತ್ತಾ ಬಂದಿದೆ, ಇವುಗಳ ಕಾರ್ಯವ್ಯಾಪ್ತಿ ಮುಖ್ಯವಾಗಿ ಗ್ರಾಮಗಳ ಅಭಿವೃದ್ಧಿಯಾಗಬೇಕಾದರೆ ಜನರೇ ಯೋಜನೆಗಳನ್ನು ತಯಾರಿಸಿ ಕಾರ್ಯರೂಪಕ್ಕೆ ತರುವಂತಿರಬೇಕು. ವಿಲ್ಫರ್ಡ್ ಡಿಸೋಜರವರು ತಮ್ಮ ಲೇಖನವಾದ **"ಪ್ರಜಾಪ್ರಭುತ್ವ ಮತ್ತು ವಿಕೇಂದ್ರೀಕರಣ"**ದಲ್ಲಿ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ, ಪಂಚಾಯತ್‌ರಾಜ್ ವ್ಯವಸ್ಥೆಯ ಮೂಲಕ ಪ್ರಜಾಪ್ರಭುತ್ವ ವಿಕೇಂದ್ರೀಕರಣದ ಕಲ್ಪನೆಯನ್ನು ಈಡೇರಿಸುವ ಜೊತೆಗೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ರಾಜಕೀಯ ಅಭಿವೃದ್ಧಿ ಅವಶ್ಯಕವಾಗಿದ್ದು, ಇವುಗಳಲ್ಲಿ ಮುಖ್ಯವಾಗಿ ರಾಜಕೀಯ ವಿಕೇಂದ್ರೀಕರಣವಲ್ಲದೆ, ಆಡಳಿತ ವಿಕೇಂದ್ರೀಕರಣ ಮತ್ತು ಹಣಕಾಸಿನ ವಿಕೇಂದ್ರೀಕರಣ ಮಾಡುವ/ಆಗುವ ಬಗ್ಗೆ ಹೊಸದಾಗಿ ಮತ್ತು ವ್ಯಾಪಕವಾಗಿ ವಿಚಾರ ಮಾಡಬೇಕಾದ ಅವಶ್ಯಕತೆ ತುಂಬಾ ಇದೆ.

ಅಧಿಕಾರ ವಿಕೇಂದ್ರೀಕರಣ ಮತ್ತು ಅಭಿವೃದ್ಧಿ ಚಟುವಟಿಕೆಗಳಲ್ಲಿ ಜನ ಸಮುದಾಯದ ಭಾಗವಹಿಸುವಿಕೆಯನ್ನು ಖಚಿತಪಡಿಸಿಕೊಳ್ಳುವಲ್ಲಿ ಪಂಚಾಯತಿ ರಾಜ್ ಸಂಸ್ಥೆಯನ್ನು ಈಗ ಒಂದು ಪ್ರಮುಖ ಸಂಸ್ಥೆ/ವ್ಯವಸ್ಥೆಯೆಂದು ಗುರುತಿಸಲಾಗಿದೆ. ನಮ್ಮದು ಸಂಸದೀಯ ಪ್ರಜಾಪ್ರಭುತ್ವ

ವ್ಯವಸ್ಥೆಯನ್ನು ಅಳವಡಿಸಿಕೊಂಡಿರುವ ದೇಶ. ಈ ವ್ಯವಸ್ಥೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸ್ವಯಂ ಆಡಳಿತವನ್ನು ಸ್ಥಾಪಿಸಿ ಅವುಗಳಿಗೆ ಸೂಕ್ತವಾದ ಅಧಿಕಾರವನ್ನು ವರ್ಗಾಯಿಸುವ ಪ್ರಯತ್ನ ಮಾಡಲಾಯಿತು.

**೩.೧.ಭಾರತದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯ ಐತಿಹಾಸಿಕ ಹಿನ್ನೆಲೆ**

ಸಂವಿಧಾನಕ್ಕೆ ೭೩ನೇ ತಿದ್ದುಪಡಿ ಆದ ನಂತರ ಇಡೀ ದೇಶದಲ್ಲಿ ಒಂದೇ ರೀತಿಯ ಪಂಚಾಯಿತಿ ವ್ಯವಸ್ಥೆ ಬರಲಿಲ್ಲ. ಕೇರಳದ ಪಂಚಾಯತ್‌ಗೂ ಕರ್ನಾಟಕದ ಪಂಚಾಯತ್‌ಗೂ ವ್ಯತ್ಯಾಸ ಏದೆ. ಪಶ್ಚಿಮ ಬಂಗಾಳದ ಪಂಚಾಯತಿಗೂ ಬಿಹಾರದ ಪಂಚಾಯತಿಗು ಅಜಗಜಾಂತರ ವ್ಯತ್ಯಾಸ ಕಾಣುತ್ತೇವೆ. ಆದರೆ ಪ್ರಸ್ತುತ-ವಿರುವ ಪಂಚಾಯತ್ ವ್ಯವಸ್ಥೆಗೂ ಹಿಂದಿನ ಕಾಲದಲ್ಲಿ ಅಂದರೆ ರಾಜ-ಮಹಾರಾಜರ ಕಾಲದಲ್ಲಿ ಗ್ರಾಮಗಳಲ್ಲಿ ಇದ್ದ ವ್ಯವಸ್ಥೆ ಬಹುತೇಕ ಎಲ್ಲಾ ರಾಜ್ಯಗಳಲ್ಲಿ ಒಂದೇ ಹೋಲಿಕೆಯಾಗುತ್ತಿದ್ದವು. ಹಿಂದೆ ಹಳ್ಳಿಗಳ ಆಡಳಿತ ನಡೆಸುತ್ತಿದ್ದ ಪಂಚರುಗಳು ಕೆಲವು ರಾಜ್ಯಗಳಲ್ಲಿ ಪ್ರದೇಶಗಳಲ್ಲಿ ಆಧುನಿಕ ಪಂಚಾಯತ್‌ಗಳ ಆಡಳಿತ ವ್ಯವಸ್ಥೆಯಲ್ಲಿ ವ್ಯತ್ಯಾಸ ಇರುವುದು ಕಾಣುತ್ತದೆ.

**ಪಂಚಾಯತ್ ರಾಜ್ ವ್ಯವಸ್ಥೆಯು ಈ ಕೆಳಕಂಡ ಹಂತಗಳಲ್ಲಿ ವಿಕಸನ ಹೊಂದಿತು.**

೩.೨. **ಬ್ರಿಟಿಷರ ಅವಧಿಯಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ**

ಸುಮಾರು ೨೦೦೦ ವರ್ಷಗಳ ಹಿಂದೆಯೇ ಗ್ರಾಮ ಪಂಚಾಯಿತಿಗಳು ಗ್ರಾಮೀಣ ಭಾರತದ ಅಬಿಭ್ಯಾಜ್ಯ ಅಂಗವಾಗಿದ್ದವು ವೇದಗಳ ಕಾಲದಲ್ಲಿ ಹಳ್ಳಿಗಳನ್ನು ಆಡಳಿತ ಮೂಲ ಹಂತ ಎಂದು ಪರಿಗಣಿಸಲಾಗಿತ್ತು. ಋಗ್ವೇದದಲ್ಲಿ ಗ್ರಾಮದ ನಾಯಕನನ್ನು ಗ್ರಾಮೀಣಿ ಎಂದು ಕರೆಯಲಗಿದೆ, ಅಲ್ಲದೆ,' ಕುಲ, ಗಣ, ಜಾತಿ ಪುಗ, ವುತ, ಶ್ರೇಣಿ, ಸಂಘ, ಸಮುದಾಯ, ಸಮೂಹ, ಸಾಂಭೂಯ-ಸಮುತ್ಥಾನ, ಪರಿಷತ್, ಚರಣ ವಾಲ್ಮೀಕಿ ರಾಮಾಯಣದಲ್ಲಿ ಬರುವ ಜನಪದವನ್ನು "ಗ್ರಾಮ ಗಣತಂತ್ರಗಳ ಒಕ್ಕೂಟ" ಎಂದು ಅರ್ಥೈಸಲಾಗಿದೆ. ಮಹಾಭಾರತದ ಸಭಾಪರ್ವದಲ್ಲಿ ಸರ್ಕಾರದ ಮತ್ತು ಪಂಚಾಯಿತಿಗಳ ನಡುವೆ ನಿಕಟ ಸಂಬಂಧವಿತ್ತೆಂಬುದು ತಿಳಿದುಬರುತ್ತದೆ.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬರುವ ಸಭಾ ಮತ್ತು ಗೋಪ (ಕೇಲವು ಹಳ್ಳಿಗಳ ಆಡಳಿತ ಜವಬ್ದಾರಿ ಇವನದಾಗಿತ್ತು) ಎಂಬ ಮಾತುಗಳು ಗ್ರಾಮೀಣ ಸ್ಥಳೀಯ ಸಂಸ್ಥೆಗಳ ಪ್ರಾಚೀನತೆಯನ್ನು ತಿಳಿಸುತ್ತವೆ. ಮೌರ್ಯರಕಾಲದಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಬೆಳವಣಿಗೆಯಾಗಿದ್ದವು, ಶಂಕರಚಾರ್ಯರ ನೀತಿಶಾಸ್ತ್ರವು ಗ್ರಾಮ ಪಂಚಾಯಿತಿಯ ಬಗ್ಗೆ ತಿಳಿಸುತ್ತದೆ. ಸಭಾ ಮತ್ತು ಮಹಾಸಭಾ ಎಂಬ ಗ್ರಾಮೀಣ ಸಂಸ್ಥೆ ಎಂಬ ಸಂಸ್ಥೆಗಳು ದಕ್ಷಿಣ ಭಾರತದಲ್ಲಿಯೂ ಇದ್ದವು ಮೊಗಲರ ಕಾಲದಲ್ಲಿ ಆಡಳಿತ ಶಾಹಿಯ ಸ್ಥಳೀಯ ಸರ್ಕಾರಗಳು ಇದ್ದವು ಮರಾಠರ ಕಾಲದಲ್ಲಿ ಹಳ್ಳಿಗಳು ನಿಜವಾದ ಸ್ವ-ಸರ್ಕಾರವನ್ನು ಹೊಂದಿದ್ದವು.

ಹಂಗಾಮಿ ಗವರ್ನರ್ ಜನರಲ್ ಆಗಿದ್ದ ಸರ್ ಚಾರ್ಲಸ್ ಮೆಟ್‌ಕಾಫೆ ೧೮೩೨ರಲ್ಲಿ ಬರೆದಿರುವುದೆಂದರೇ ತಮ್ಮಗೆ ಬೇಕಿರುವುದನ್ನೆಲ್ಲಾ ಹೊಂದಿರುವುಂತಹ ಮತ್ತು ಬಹುಮಟ್ಟಿಗೆ ವಿದೇಶಾಂಗ ನೀತಿಯಿಂದ ಸ್ವತಂತ್ರವಾಗಿರುವ ಗ್ರಾಮ ಸಮುದಾಯಗಳು ಪುಟ್ಟ ಗಣತಂತ್ರಗಳಾಗಿದ್ದವು".

ಭೂಮಾಲೀಕತ್ವದಿಂದಾಗಿ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಮೊಗಲರ ಕಾಲದಿಂದತೀ ಕ್ರಮೇಣವಾಗಿ ಕಳೆಗುಂದಿದವು. ಆದರೆ ನಗರ ಸಂಸ್ಥೆಗಳು ರೂಪಗೊಳ್ಳತೊಡಗಿದವು. ೧೬೮೭ರಲ್ಲಿ ಮದ್ರಾಸಿಗೆ ಮುನಿಸಿಪಲ್ ಕಾರ್ಪೋರೇಷನ್ ಸ್ಥಾಪಿಸಲಾಯಿತು.೧೭೯೩ರ ಚಾರ್ಟರ್ ಕಾಯಿದೆಯು ಪುರಸಭಾ ಆಡಳಿತ ವ್ಯವಸ್ಥೆಯನ್ನು ಮದ್ರಾಸ್, ಮುಂಬೈ ಮತ್ತು ಕಲ್ಕತ್ತಗೆ ತಂದಿತ್ತು. ೧೮೦೨ ಮತ್ತು ೧೮೧೬ರಲ್ಲಿ ನ್ಯಾಯಿಕ ವ್ಯವಸ್ಥೆಯಲ್ಲಿ ಪಂಚಾಯಿತಿ ಪದ್ಧತಿಯನ್ನು ತರುವ ಪ್ರಯತ್ನಗಳು ವಿಫಲವಾದವು. ೧೮೭೦ರ ಲಾರ್ಡ್ ಮೇಯೋ ಮಸೂದೆಯು ಆಡಳಿತದ ವಿಕೇಂದ್ರೀಕರಣ ವನ್ನು ಪ್ರತಿಪಾದಿಸಿ, ಸ್ಥಳೀಯ ಸಂಸ್ಥೆಗಳಲ್ಲಿ ಭಾರತೀಯರು ಸಕ್ರಿಯ ಪಾತ್ರವಹಿಸಲಿ ಎಂದು ಆಶಿಸಿತು. ವಿಕೇಂದ್ರೀಕರಣದ ಬಗೆಗಿನ ಪ್ರಭುತ್ವದ ಆಯೋಗವು ೧೯೦೭-೦೮ರಲ್ಲಿ ಸ್ವ-ಸರ್ಕಾರದ ಸಮಸ್ಯೆಯನ್ನು ಪರೀಶಿಲಿಸಿತು. ಇದರ ಶಿಫಾರಸ್ಸುಗಳು ಮೇರೆಗೆ ಬಂಗಾಳ, ಮದ್ರಾಸು, ಉತ್ತರ ಪ್ರದೇಶ, ಬಿಹಾರ, ಸೆಂಟ್ರಲ್ ಪ್ರಾವಿಸನ್, ಪಂಜಾಬ್, ಮತ್ತು ಅನೇಕ ರಾಜರ ಸಂಸ್ಥಾನಗಳಲ್ಲಿ ಸ್ವ-ಸರ್ಕಾರದ ಕಾಯಿದೆಗಳನ್ನು ಅಂಗೀಕರಿಸಲಾಯಿತು. ಆದರೆ (ಪ್ರಗತಿಯು ಅತ್ಯಲ್ಪ, ಕಾಂಗ್ರೇಸ್ ಪಕ್ಷವು ಸ್ಥಳೀಯ ಸರ್ಕಾರದ ಸ್ಥಾಪನೆಯನ್ನು ಪ್ರತಿಪಾದಿಸುತ್ತಾ ಮತ್ತು ಬೆಂಬಲಿಸುತ್ತಾ ಬಂದಿತು. ೧೯೨೦ರಲ್ಲಿ ಕಾಂಗ್ರೆಸ್ ಪಕ್ಷವು ಒಂದು ಮಸೂದೆಯನ್ನೇ ಈ ಬಗ್ಗೆ ಅಂಗೀಕರಿಸಿತು ಅಲ್ಲಿಂದ ಮುಂದಕ್ಕೆ ಕಾಂಗ್ರೇಸ್ ಪಕ್ಷವು ಸ್ಥಳೀಯ ಸರ್ಕಾರದ ಸ್ಥಾಪನೆಯ ಬಗ್ಗೆ ಕಟ್ಟಾ ಪ್ರತಿಪಾದಕರಾಗಿದ್ದರು. ೧೯೨೪ ಮತ್ತು ೧೯೨೬ರಲ್ಲಿ ಜವಾಹರ್‌ಲಾಲ್ ನೆಹರೂ ಅಲಹಾಬಾದ್ ಪುರಸಭೆಯ ಸಭಾಪತಿ ಆಗಿದ್ದರು ಹಾಗೂ ನೇತಾಜಿ ಸುಭಾಷ ಚಂದ್ರಬೋಸರು ೧೯೩೦ರ ದಶಕದ ಪ್ರಾರಂಭದಲ್ಲಿ ಕಲ್ಕತ್ತಾದ ಮೇಯರ್ ಆಗಿದ್ದರು.

ಬ್ರಿಟಿಷರ ಅವಧಿಗಿಂತ ಮುಂಚೆ ಭಾರತದಲ್ಲಿ ಹಿಂದಿನಿಂದಲೂ ಗ್ರಾಮ ಪಂಚಾಯಿತಿ ಗಳಿದ್ದದನ್ನು ಗುರುತಿಸಬಹುದಾಗಿದೆ. ಕೆ.ಎಂ. ಫಣಿಕರ್‌ರವರು ಹೇಳಿರುವಂತೆ ಪಂಚಾಯಿತಿಗಳು ಭಾರತ ಇತಿಹಾಸದ ಖಾಯಂ ಆಧಾರಗಳಾಗಿವೆ, ಮತ್ತು ಗ್ರಾಮ ಪಂಚಾಯಿತಿಗಳು ಪ್ರಾಚೀನ ಭಾರತೀಯ ಆಡಳಿತ ಪ್ರಧಾನ ನಿದರ್ಶನಗಳಾಗಿರುವುವು ಎಂದಿದ್ದಾರೆ. ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ ಗ್ರಾಮ ಪಂಚಾಯತಿಗಳಿಗೆ ಬಹಳವಾಗಿ ಪೆಟ್ಟು ಬಿದ್ದಿತು. ಅವು ಪರಂಪರಾಗತವಾಗಿ ನಿರ್ವಹಿಸುತ್ತಿದ್ದ ಕಾರ್ಯಗಳಲ್ಲಿ ಹೆಚ್ಚಿನ ಹಸ್ತಕ್ಷೇಪವಾಯಿತು. ಆಡಳಿತವನ್ನು ಕೇಂದ್ರೀಕರಿಸಲಾಯಿತು. ೧೮೮೧ ರವರೆಗೆ ಅವರು ಸರ್ಕಾರಗಳ ಮೂಲಕ ರಾಜ್ಯಭಾರ

ನಡೆಸಿದರು. ನಂತರ ಬ್ರಿಟಿಷರು ತಮ್ಮದೇ ಆದ ಆಡಳಿತಾತ್ಮಕ ಕಾರ್ಯಗಳಿಗಾಗಿ ಸ್ಥಳೀಯಾಡಳಿತ ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆಗಳನ್ನು ತರಲು ಕಾರಣೀಕರ್ತರಾದವರಲ್ಲಿ ಮೊದಲಿಗರೆಂದರೆ, ಬ್ರಿಟಿಷ್ ವೈಸರಾಯ್ ಲಾರ್ಡ್‌ರಿಪ್ಪನ್ ೧೮೮೨ರಲ್ಲಿ ಕೈಗೊಂಡ ಸ್ಥಳಿಯ ಸ್ವಯಂ ಆಡಳಿತ ರಾಷ್ಟ್ರ ವ್ಯಾಪ್ತಿಯಾಗಿ ವಿಸ್ತರಿಸುವ ಗುರಿ ಹೊಂದಿದರು ಇವರ ಶಿಫಾರಸ್ಸಿನ ಆಧಾರದ ಮೇಲೆ ಸ್ಥಳೀಯ ಮಂಡಳಿಗಳ ಕಾಯಿದೆ-೧೮೮೫ ಅಸ್ತಿತ್ವಕ್ಕೆ ಬಂದಿತು. ಸ್ಥಳೀಯ ಸ್ವಯಂ ಸಂಸ್ಥೆಗಳ ಸ್ಥಾಪನೆಗೆ ಇದು ಆಧಾರವಾಯಿತು. ಆದರೆ ಗ್ರಾಮ ಮಟ್ಟದಷ್ಟು ಕೆಳಗಿನ ಹಂತದವರೆಗೂ ಇದರಲ್ಲಿ ಬಹುಪಾಲು ನಾಮಕರಣ ಸದಸ್ಯರೇ ತುಂಬಿದ್ದರು.

**೧೯೦೯ರ ರಾಯಲ್ ಆಯೋಗ** ಮುಂದೆ ಲಾರ್ಡ್‌ರಿಪ್ಪನ್‌ರವರು ಸ್ಥಳಿಯ ಜನರನ್ನು ಒಳಗೊಳ್ಳುವಂತೆ ಮತ್ತು ವಿಕೇಂದ್ರೀಕರಣವನ್ನು ಕುರಿತಂತೆ ಈ ಮೇಲಿನ ಆಯೋಗದಲ್ಲಿ ವಿವರಿಸಿದ್ದರು.

**೧.೯೧೯ರ ಮಂಟೇಗ್ಯೂ-ಚೆಲ್ಸ್‌ಪೋರ್ಡ್ ಸುಧಾರಣೆಗಳು**

ಈ ಕಾಯ್ದೆಯ ಮೂಲಕ ಸ್ಥಳೀಯ ಸ್ವಯಂ ಆಡಳಿತವನ್ನು ಪ್ರಾಂತ್ಯಗಳಲ್ಲಿ ಭಾರತೀಯ ಮಂತ್ರಿಗಳ ನಿಯಂತ್ರಣದ ಅಡಿಯಲ್ಲಿ ತರಲಾಯಿತು. ಆದರೆ ಇದು ಪಂಚಾಯಿತಿ ಸಂಸ್ಥೆಗಳನ್ನು ನಿಜವಾದ ಅರ್ಥದಲ್ಲಿ ಪ್ರಜಾಸತ್ತಾತ್ಮಕವಾಗಿ ಮಾಡಲಿಲ್ಲ, ಕೆಲವೊಂದು ಪ್ರಾಂತ್ಯಗಳಲ್ಲಿ ಮಾತ್ರ ಪಂಚಾಯಿತಿಗಳು ಸ್ಥಾಪನೆಗೊಂಡವು ಉದಾ; ೧೯೧೯ರ ಬಂಗಾಳ ಗ್ರಾಮ ಸ್ವಯಂ ಮಂಡಳಿ ಕಾಯ್ದೆ ೧೯೨೦ರ ಮದ್ರಾಸ್, ಬಾಂಬೆ ಹಾಗೂ ಯುನೈಡೆಡ್ ಪ್ರಾಂತ್ಯಗಳ ಗ್ರಾಮ ಪಂಚಾಯಿತಿ ಕಾಯ್ದೆ. ೧೯೨೬ರ ಬಿಹಾರ್ ಓರಿಸ್ಸಾ, ಅಸ್ಸಂ, ಗ್ರಾಮೀಣ ಸ್ವಯಂ ಮಂಡಳಿ ಕಾಯ್ದೆ ಹೀಗೆ ಇತ್ಯಾದಿ, ಪಂಚಾಯಿತಿ ಕಾಯ್ದೆಗಳು ಜಾರಿಗೆ ಬಂದವು. ಆದರೆ ಇವುಗಳ ಸ್ವರೂಪದಲ್ಲಿ ವಿಭನ್ನವಾಗಿದ್ದವು.

೧೯೩೫ರ ಕಾಯ್ದೆ [ಭಾರತ ಸರ್ಕಾರ ಕಾಯ್ದೆ-೧೯೩೫] ಈ ಕಾಯ್ದೆಯು ಭಾರತದಲ್ಲಿ ರಾಜಕೀಯ ಸುಧಾರಣೆಯ ಹೊಸ ಶಕೆ ಪ್ರಾರಂಭಗೊಂಡಿತು. ಏಕೆಂದರೆ ಒಕ್ಕೂಟ ಮತ್ತು ಪ್ರಾಂತೀಯ ಸ್ವಯಂ ಅಧಿಕಾರ ಜಾರಿಗೊಳಿಸುವುದರ ಜೊತೆಗೆ ಸ್ಥಳೀಯ ಸರ್ಕಾರಗಳಿಗೆ ಸ್ವಾಯತ್ತತೆ ನೀಡಿದವು ಆದರೆ ಯಾವುದೇ ರೀತಿಯ ಅಭಿವೃದ್ಧಿ ಯೋಜನೆಗಳಾಗಲಿ, ಪಾಲ್ಗೊಳ್ಳುವಿಕೆಯಾಗಲಿ ನಡೆದಿರಲಿಲ್ಲ. ಇವು ನಿಜವಾದ ಅರ್ಥದಲ್ಲಿ ಪ್ರಜಾಸತ್ತಾತ್ಮಕವಾಗಿರಲಿಲ್ಲ. ಏಕೆಂದರೆ ಸದಸ್ಯರಲ್ಲಿ ಬಹುಪಾಲು ಸದಸ್ಯರು ಸರ್ಕಾರದಿಂದ ನಾಮಕರಣ ಹೊಂದಿದ್ದವರಾಗಿದ್ದರೇ ವಿನಃ ಚುನಾಯಿತ ಸದಸ್ಯರಾಗಿರಲಿಲ್ಲ.

ಕಳೆದ ಕೆಲವು ದಶಕಗಳಿಂದ ಗ್ರಾಮ ಪಂಚಾಯಿತಿಗಳನ್ನು ಸ್ಥಾಪಿಸಲು ಅಪಾರ ಸಂಖ್ಯೆಯ ರಾಜ್ಯ ಸರ್ಕಾರಗಳ ಹಲವಾರು ಕಾಯ್ದೆಗಳ ಜಾರಿಗೆ ಬಂದಿದ್ದರೂ, ಸ್ಥಳೀಯ ಮಟ್ಟದಲ್ಲಿ ಯಾವುದೇ ರೀತಿಯ ಬದಲಾವಣೆಗಳು ಆಗಿರಲಿಲ್ಲ ಭಾರತವು ತನ್ನ ಸ್ವಾತಂತ್ರ್ಯವನ್ನು ಗಳಿಸುವವರೆಗೆ ಪರಿಸ್ಥಿತಿಯು ಹೆಚ್ಚು ಕಡಿಮೆ ಅದೇ ಸ್ಥಿತಿಯಲ್ಲಿತ್ತು.

**೩.೩. ಸ್ವಾತಂತ್ರ್ಯ ನಂತರದ ಅವಧಿಯಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯ ಕುರಿತಾದ ಸಮಿತಿಗಳು ಮತ್ತು ಆಯೋಗಗಳ ಶಿಫಾರಸ್ಸುಗಳು:**

ಸ್ವಾತಂತ್ರ್ಯ ನಂತರ ಭಾರತವು ಸ್ಥಳೀಯ ಸರ್ಕಾರಗಳಿಗೆ ಹೆಚ್ಚಿನ ಮಹತ್ವ ನೀಡಲಾರಂಭಿಸಿತು. ಇದಕ್ಕೆ ಕಾರಣ

ಅ) ಗ್ರಾಮ ಸ್ವರಾಜ್ಯ ಕಲ್ಪನೆಯ ಅನುಷ್ಠಾನ

ಆ) ಜನರ ಪಾಲ್ಗೊಳ್ಳುವಿಕೆಗೆ ಪ್ರಾಶಸ್ತ್ಯ ನೀಡಲು

ಇ) ಜನತೆಗೆ ಹೊಣೆಗಾರಿಕೆಯನ್ನು ವಹಿಸಲು

ಈ) ಪಂಚಾಯಿತಿಗಳ ಪುನರುಜ್ಜೀವನ ಮಾಡಲು

ಸ್ವಾತಂತ್ರ್ಯ ಭಾರತವು ಮೇಲಿನ ನಾಲ್ಕು ಉದ್ದೇಶಗಳ ಸಾಧನೆಗಾಗಿ ಸ್ಥಳೀಯ ಸರ್ಕಾರಿ ವ್ಯವಸ್ಥೆಗಳನ್ನು ಬಲಪಡಿಸುವ ನಿಟ್ಟಿನಲ್ಲಿ ಮುಂದಾಯಿತು. ಇದೇ ಉದ್ದೇಶದಿಂದ ಸಂವಿಧಾನದಲ್ಲಿನ ರಾಜ್ಯ ನೀತಿ-ನಿರ್ದೇಶನದ ತತ್ವಗಳಲ್ಲಿ ಇದನ್ನು ಅಳವಡಿಸಿಲಾಯಿತು. (ಕಲಮು-೪೦ ಗ್ರಾಮ ಪಂಚಾಯಿತಿಗಳ ಸಂಘಟನೆ) ಈ ನಿಟ್ಟಿನಲ್ಲಿಯೇ ಕೇಂದ್ರ ಸರ್ಕಾರ, ಗ್ರಾಮೀಣ ಪ್ರದೇಶಗಳ ಸಾಮಾಜೋ-ಆರ್ಥಿಕ ರೂಪಾಂತರವನ್ನು ಕುರಿತು ಪ್ರಥಮಬಾರಿಗೆ ಅಭಿವೃದ್ಧಿ ಕಾರ್ಯಕ್ರಮವೇ ಸಮುದಾಯ ಸಮುದಾಯ ಅಭಿವೃದ್ಧಿ ಯೋಜನೆ' (ಸಿಡಿಪಿ) ಆಗಿತ್ತು. ಇದನ್ನು ೧೯೫೨ರಲ್ಲಿ ಜಾರಿಗೆ ತರಲಾಯಿತು. ಹಾಗೂ ರಾಷ್ಟ್ರೀಯ ವಿಸ್ತರಣಾ ಸೇವೆಯನ್ನು ಕಾರ್ಯಾಚರಣೆಗೆ ತರಲಾಯಿತು. ರಾಷ್ಟ್ರ-ರಾಜ್ಯ, ಜಿಲ್ಲೆ ಮತ್ತು ಮಂಡಲದ ಮಟ್ಟದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವ ಪ್ರಥಮ ಹೆಜ್ಜೆಯಾಗಿತ್ತು. ಆದರೆ ಈ ಕಾರ್ಯಕ್ರಮಗಳ ಮೂಲಕ ಜನರ ಪಾಲ್ಗೊಳ್ಳುವಿಕೆ, ಸ್ವಾವಲಂಬನೆಯ ಉದ್ದೇಶವನ್ನು ಈಡೇರಿಸಲಾಗಲಿಲ್ಲ, ಇವುಗಳನ್ನು ಕುರಿತಂತೆ ಅಧ್ಯಯನ ನಡೆಸಲು ಬಲವಂತರಾಯ .ಜಿ ಮೆಹ್ತಾ ನೇತೃತ್ವದಲ್ಲಿ ೧೯೫೬-೫೭ರಲ್ಲಿ ಕೇಂದ್ರ ಸರ್ಕಾರ ಸಮಿತಿಯೊಂದನ್ನು ರಚಿಸಿತು.

**ಬಲವಂತರಾಯ್ ಮೆಹ್ತಾ ಸಮಿತಿ**. ಇದು ೧೯೫೮ರಲ್ಲಿ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಈ ವರದಿಯಲ್ಲಿ ಗ್ರಾಮೀಣ ಅಭಿವೃದ್ಧಿ ಯೋಜನೆಗಳ ವಿಫಲತೆಗೆ ಮುಖ್ಯ ಕಾರಣ ಯೋಜನೆಗಳಲ್ಲಿ ನೇರವಾಗಿ ಅಧಿಕಾರಿಗಳೇ ಭಾಗವಹಿಸುತ್ತಿದ್ದು ಚುನಾಯಿತ ಗ್ರಾಮೀಣ ಜನತೆಯ ಭಾಗವಹಿಸುವಿಕೆ ಇಲ್ಲದಿದ್ದುದೇ ಇದಕ್ಕೆ ಕಾರಣ ಎಂದು ತಿಳಿಸಿತು. ಅಲ್ಲಿದೆ ಅನೇಕ ಶಿಫಾರಸ್ಸುಗಳನ್ನು ಮಾಡಿತು. ನಿಜವಾಗಲೂ ಗ್ರಾಮೀಣ ಅಭಿವೃದ್ಧಿಯಾಗಬೇಕೆಂದು ಈ ಸಂಸ್ಥೆಗಳನ್ನು ರಚಿಸಿ ಅವುಗಳಿಗೆ ಅಧಿಕಾರ ಮತ್ತು ಜವಾಬ್ದಾರಿಯನ್ನು ನೀಡಿದಾಗ ಮಾತ್ರ ಸಾಧ್ಯವೆಂದು ಸ್ಪಷ್ಟಪಡಿಸಿತು. ಮೂರು ಹಂತದ ಪಂಚಾಯತ್ ರಾಜ್ಯ ವ್ಯವಸ್ಥೆಗೆ ಅವಕಾಶ ಕಲ್ಪಿಸಿತು. ಇದಕ್ಕೆ ಸಂಬಂಧಿಸಿದಂತೆ ೧೯೫೯ರಲ್ಲಿ ರಾಜಸ್ಥಾನ ಮತ್ತು ಆಂದ್ರಪ್ರದೇಶ ರಾಜ್ಯಗಳು ಈ ವ್ಯವಸ್ಥೆಯನ್ನು ಆಳವಡಿಸಿಕೊಳ್ಳವಲ್ಲಿ ಪ್ರಥಮ ಸ್ಥಾನದಲ್ಲಿದ್ದವು. ೧೯೬೦ರಲ್ಲಿ

ಕರ್ನಾಟಕ ಅಸ್ಸಾಂ, ಹಾಗೂ ತಮಿಳುನಾಡು ರಾಜ್ಯಗಳು ಮುಂದಾದವು. ಹೀಗೆ ವಿವಿಧ ರಾಜ್ಯಗಳು ಅಳವಡಿಸಿಕೊಂಡವು ಆದರೆ ಆಚರಣೆಯಲ್ಲಿ ಏಕರೂಪತೆಯಿರಲಿಲ್ಲ. ೧೯೬೦ರ ಹಸಿರುಕ್ರಾಂತಿ ಮತ್ತು ೧೯೭೦ರ ದಶಕದಲ್ಲಿ 'ಟಾರ್ಗೆಟ್ ಗ್ರೂಪ್ ಅಪ್ರೋಚ್'ದಂತಹ ಅಭಿವೃದ್ಧಿ ಕ್ರಮಗಳಲ್ಲಿ ಪ್ರಯೋಗ ಮಾಡುವುದರಲ್ಲಿ ವ್ಯಗ್ರರಾಗಿದ್ದರು, ಇದರಿಂದ ಸಂವಿಧಾನದ ಮೂಲಕ ಭರವಸೆಯನ್ನು ಪಡೆದಿದ್ದು ಸ್ಥಳೀಯ ಸ್ವಯಂ ಆಡಳಿತ ಕ್ಷೀಣಿಸತೊಡಗಿತು. ಅಭಿವೃದ್ಧಿಯ ಆಯೋಜನೆಯಲ್ಲಿ ಸಮುದಾಯದ ಪಾಲ್ಗೊಳ್ಳುವಿಕೆ ನಿರೀಕ್ಷೆಯ ಮಟ್ಟದಲ್ಲಿ ಮುಂದೆ ಬಂದಿರಲಿಲ್ಲ, ೧೯೭೭ರಲ್ಲಿ ಕೇಂದ್ರದಲ್ಲಿ ಸರ್ಕಾರ ಬದಲಾದ ಮೇಲೆ (ಕಾಂಗ್ರೇಸ್‌ತರ ಸರ್ಕಾರ] ಪಂಚಾಯಿತ್ ರಾಜ್ ವ್ಯವಸ್ಥೆಯನ್ನು ಒಂದು ಹೊಸ ದೃಷ್ಟಿಕೋನದಿಂದ ಪರಿಶೀಲಿಸಲು ಅಶೋಕ್ ಮೆಹ್ತಾ ಸಮಿತಿಯನ್ನು ರಚಿಸಲಾಯಿತು.

**ಅಶೋಕ್ ಮೆಹ್ತಾ ಸಮಿತಿ**

ಈ ಸಮಿತಿಯನ್ವಯ ಎರಡು ಹಂತಗಳ ಪಂಚಾಯತಿಗೆ ಅವಕಾಶ ನೀಡಿತು. (ಜಿಲ್ಲಾ ಪರಿಷತ್ ಹಾಗೂ ಗ್ರಾಮ ಮಟ್ಟದಲ್ಲಿ ಮಂಡಲ ಪಂಚಾಯತ್)

ಈ ಸಮಿತಿಯ ಮುಖ್ಯ ಶಿಫಾರಸ್ಸುಗಳು.

–ಜಿಲ್ಲೆಯ ವಿಕೇಂದ್ರೀಕರಣದ ಮೂಲ ಬಿಂದು ಆಗಬೇಕು.

–ರಾಜ್ಯದ ಮುಖ್ಯ ಚುನಾವಣಾ ಅಧಿಕಾರಿಯು ಪಂಚಾಯಿತಿಗಳಲ್ಲಿ ಚುನಾವಣೆ ನಡೆಸುವ ಜವಬ್ದಾರಿಯನ್ನು ವಹಿಸಬೇಕು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಚುನಾವಣೆಯನ್ನು ನಡೆಸಬೇಕು.

–ಜಿಲ್ಲೆಗೆ ಸಂಬಂಧಪಟ್ಟ ಅಭಿವೃದ್ಧಿ ಕಾರ್ಯಗಳೆಲ್ಲವನ್ನು ಸಾಧ್ಯವಾದಷ್ಟು ಜಿಲ್ಲಾ ಪರಿಷತ್ತಿಗೆ ವರ್ಗಾಯಿಸುವುದು,

–ಈ ಸಂಸ್ಥೆಗಳು ತಮ್ಮ ಸಂಪನ್ಮೂಲಭಿವೃದ್ಧಿಗಾಗಿ ತೆರಿಗೆ ವಿಧಿಸಲು ಅವಕಾಶ ನೀಡುವುದು.

–ಜಿಲ್ಲಾ ಮಟ್ಟದ ಯೋಜನೆಗಳಿಗೆ ಜಿಲ್ಲಾ ಪರಿಷತ್ ಸಿದ್ಧಪಡಿಸಲು ಅನುವು ಮಾಡಿಕೊಡುವುದು.

ಈ ಸಮಿತಿಯು ಅನೇಕ ಶಿಫಾರಸ್ಸುಗಳನ್ನು ಮಾಡಿತಾದರೂ ಇದರ ಅನುಷ್ಠಾನವಾಗಲಿಲ್ಲ, ಇದಕ್ಕೆ ಮುಖ್ಯ ಕಾರಣ ೧೯೭೭ರಲ್ಲಿ ಅಧಿಕಾರಕ್ಕೆ ಬಂದಿದ್ದ ಜನತಾ ಸರ್ಕಾರವು ಅಧಿಕಾರವನ್ನು ಕಳೆದುಕೊಂಡು ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದುದರ ಫಲವಾಗಿ ಇದರ ಅನುಷ್ಠಾನಕ್ಕೆ ಆಸಕ್ತಿ ತೋರಲಿಲ್ಲ. ಆದಾಗ್ಯೂ ಕಾಂಗ್ರೇಸ್ಸೇತರ ಸರ್ಕಾರಗಳಿದ್ದ ಕರ್ನಾಟಕ, ಪಶ್ಚಿಮ ಬಂಗಾಳ, ಆಂಧ್ರಪ್ರದೇಶ ರಾಜ್ಯಗಳು ಜಾರಿಗೆ ತಂದವು.

ಹೀಗೆ ಬಲವಂತರಾಯ್ ಮೆಹ್ತಾ ಹಾಗೂ ಅಶೋಕ ಮೆಹ್ತಾ ಸಮಿತಿಗಳೆರಡೂ

ಗ್ರಾಮೀಣ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಗ್ರಾಮ ಪಂಚಾಯಿತಿಗಳ ಧೃಢೀಕರಣ ಹಾಗೂ ಸಬಲೀಕರಣಕ್ಕೆ ಆದ್ಯತೆಯನ್ನು ನೀಡಿ ಅನೇಕ ಶಿಫಾರಸ್ಸುಗಳನ್ನು ಮಾಡಿದ್ದರೂ ಸಹ ಅವುಗಳ ಅನುಷ್ಠಾನ ಸಾಧ್ಯವಾಗದೆ ಇದ್ದುದು, ಆದರು ಈ ಸಮಿತಿಗಳ ಶಿಫಾರಸ್ಸಿನಂತೆ ಪಂಚಾಯತ್ ವ್ಯವಸ್ಥೆಯನ್ನು ರಚಿಸಿ ಪಂಚಾಯತ್ ಪದ್ಧತಿಗೆ ಭದ್ರ ಬುನಾದಿಯನ್ನು ಒದಗಿಸುವಲ್ಲಿ ಯಶಸ್ವಿಯಾದವು.

**ಜಿ.ವಿ.ಕೆ ರಾವ್ ಸಮಿತಿ**

ಯೋಜನಾ ಆಯೋಗವು ೧೯೮೫ರಲ್ಲಿ ಜಿ.ವಿ.ಕೆ. ರಾವ್ ಸಮಿತಿಯನ್ನು ನೇಮಿಸಿತು. ಇದರ ಮುಖ್ಯ ಉದ್ದೇಶ ಗ್ರಾಮೀಣ ಅಭಿವೃದ್ಧಿಗೆ ಅಂದು ಜಾರಿಯಲ್ಲಿದ್ದ ಆಡಳಿತಾತ್ಮಕ ಏರ್ಪಾಡುಗಳು ಮತ್ತು ಬಡತನ ಪರಿಹಾರ ಕಾರ್ಯಕ್ರಮಗಳನ್ನು ಪರಿಶೀಲಿಸುವುದು ಹಾಗೂ ಸಂಯೋಜಿತ ಕ್ರಮದಲ್ಲಿ ಅವುಗಳನ್ನು ಯೋಜಿಸಿ ಪರಿಣಾಮಕಾರಿಯಾಗಿ ಅನುಷ್ಠಾನ ಗೊಳಿಸುವುದನ್ನು ಒತ್ತಿ ಹೇಳಿತು. ಈ ಸಮಿತಿಯು ಹಲವಾರು ಶಿಫಾರಸ್ಸುಗಳನ್ನು ಸೂಚಿಸಿತು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಕ್ಷೇತ್ರಮಟ್ಟದಲ್ಲಿ ವಿವಿಧ ಸಂಸ್ಥೆಗಳು ನಿರ್ವಹಿಸುವ ಎಲ್ಲಾ ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ಗ್ರಾಮೀಣ ಅಭಿವೃದ್ಧಿಯು ಒಳಗೊಳ್ಳುವಂತಹ ಸಮಗ್ರ ಅಭಿವೃದ್ಧಿ ನೀತಿಯ ಆಯೋಜನೆ ಮತ್ತು ಕಾರ್ಯಕ್ರಮ ಅನುಷ್ಠಾನಕ್ಕೆ ಜಿಲ್ಲೆಯು ಮೂಲ ಘಟಕವಾಗಿರಬೇಕು.

ಜನ ಸಾಮಾನ್ಯರು ಕ್ರಿಯಾಶೀಲರಾಗಿ ಭಾಗವಹಿಸುವುದು ಹಾಗೂ ಈ ಸಂಸ್ಥೆಗಳಿಗೆ ಚುನಾವಣೆಗಳು ನಡೆಯಬೇಕು.

ಒಟ್ಟಾರೆ ಈ ಸಮಿತಿಯ ಜಿಲ್ಲಾ ಪರಿಷತ್ತಿಗೆ ಹೆಚ್ಚಿನ ಆದ್ಯತೆ ನೀಡಿತು. ಆದರ ಪ್ರಜಾಪ್ರಭುತ್ವ ವಿಕೇಂದ್ರೀಕರಣದ ಪ್ರಕ್ರಿಯೆಗೆ ರಾಜ್ಯಗಳು ಸಾಮಾನ್ಯವಾಗಿ ಉದಾಸೀನ ಭಾವವನ್ನು ತೋರಿಸುತ್ತಾ ಬಂದಿವೆ ಎಂದು ಹೇಳಿದ್ದಾರೆ.

**ಎಲ್.ಎಲ್.ಸಿಂಘ್ವಿ ಸಮಿತಿ**

೧೯೮೬ರಲ್ಲಿ ಭಾರತ ಸರ್ಕಾರವು ಡಾ.ಎಲ್.ಎಮ್.ಸಿಂಘ್ವಿರವರ ನೇತೃತ್ವದಲ್ಲಿ ೧೯೮೬ರಲ್ಲಿ ಸಮಿತಿಯನ್ನು ನೇಮಿಸಿತು. ಪಂಚಾಯಿತಿಗಳ ಪರಿಕಲ್ಪನೆಯ ಪೂರ್ಣ ಸ್ವರಾಜ್ಯ ಮತ್ತು ಗ್ರಾಮ ಸ್ವರಾಜ್ಯ ತತ್ವದ ಒಂದು ಭಾಗ ಎಂದು ಈ ಸಮಿತಿಯು ಭಾವಿಸಿತು.

ಈ ಸಮಿತಿಯು ವರದಿಯಲ್ಲಿ ಹೀಗೆ ತಿಳಿಸಲಾಗಿದೆ. "ಪಂಚಾಯತ್ ರಾಜ್ ಸಂಸ್ಥೆಗಳು ಆಡಳಿತಾತ್ಮಕ ಕಾರ್ಯಕ್ರಮಗಳು ಮತ್ತು ಅಭಿವೃದ್ಧಿ ಯೋಜನೆಗಳಿಗೆ ಮೂಲತಃ ಅನುಕೂಲಕರ ಸಾಧನಗಳು ಎಂದು ಭಾವಿಸುವುದು ಮೂಲಭೂತ ದೋಷವಾಗಿದೆ. ಈ ದೋಷವು ಸ್ವಯಂ ಆಡಳಿತದ ಘಟಕಗಳಾದ ಈ ಸಂಸ್ಥೆಗಳು ಪಾತ್ರವನ್ನು ಬಹುಮಟ್ಟಿಗೆ ಅಥವಾ

ಕೆಲಮಟ್ಟಿಗೆ ಅಪಮೌಲ್ಯೀಕರಣ ಮಾಡಿದೆ ಮತ್ತು ಕೆಳಮಟ್ಟಕ್ಕೆ ಇಳಿಸಿದೆ ಹಾಗೂ ಅವನ್ನು ತನ್ಮೂಲಕ ಪ್ರಜಾಪ್ರಭುತ್ವ ಮತ್ತು ಅಭಿವೃದ್ಧಿ ಎರಡಕ್ಕೂ ಹಾನಿ ಮತ್ತು ಆಚರಣೆ ಉಂಟುಮಾಡಿದೆ". ಎಂದು ಸ್ಪಷ್ಟಪಡಿಸಿತು.

ಈ ಸಮಿತಿಯು ಹಲವಾರು ಶಿಫಾರಸ್ಸುಗಳನ್ನು, ನಿರ್ಣಯಗಳನ್ನು ತೆಗೆದುಕೊಂಡಿತು. ಅದರಲ್ಲಿ ಮುಖ್ಯವಾದವುಗಳೆಂದರೆ ಗ್ರಾಮಸಭೆಗೆ ಬಹಳಷ್ಟು ಮಹತ್ವವನ್ನು ಕೊಟ್ಟಿತ್ತು. ಅದನ್ನು ಪ್ರತ್ಯಕ್ಷ ಪ್ರಜಾಪ್ರಭುತ್ವದ ಸಾರ್ಕಾರ ರೂಪ ಎಂದು ಪರಿಗಣಿಸಿತ್ತು. ಪಂಚಾಯತ್ ರಾಜ್ ಸಂಸ್ಥೆಗಳು ಸಂವಿಧಾನಾತ್ಮಕವಾಗಿ ಸರ್ಕಾರದ ಮೂರನೆಯ ಹಂತ ಎಂದು ಘೋಷಿಸಬೇಕು.

ನಂತರದಲ್ಲಿ ಬಂದಂತಹ ೧೯೮೮ರ ಪಿ.ಕೆ. ತುಂಗನ್ ಸಮಿತಿ ಮತ್ತು ವಿ.ಎನ್. ಗಾಡ್ಗಿಳ್ ಸಮಿತಿ ಪಂಚಾಯತ್ ರಾಜ್ ಬಲಪಡಿಸುವುದಕ್ಕೆ ಶಿಫಾರಸ್ಸುಗಳನ್ನು ಮಾಡಿದವು. ಹೀಗೆ ಕೇಂದ್ರ ಸರ್ಕಾರ ಹಂತ-ಹಂತವಾಗಿ ಹತ್ತು ಹಲವು ಸಮಿತಿಗಳು ಪಂಚಾಯತ್ ರಾಜ್ ಸಂಸ್ಥೆಗಳನ್ನು ಪ್ರಬಲಗೊಳಿಸುವುದಕ್ಕೆ ಹಲವಾರು ಶಿಫಾರಸ್ಸುಗಳನ್ನು ಮಾಡಿದವು ಈ ಶಿಫಾರಸ್ಸುಗಳ ಆಧಾರದಲ್ಲಿ ಸಿದ್ಧಪಡಿಸಲಾದ ತಿದ್ದುಪಡಿ ಮಸೂದೆಯನ್ನು ೧೯೮೯ರಲ್ಲಿ ರಾಜೀವ್‌ಗಾಂಧಿ ಸರ್ಕಾರ ಸದನದಲ್ಲಿ ಮಂಡಿಸಿತು. ೧೯೯೦ರಲ್ಲಿ ಪಿ.ವಿ.ಸಿಂಗ್ ಸರ್ಕಾರ ಮಸೂದೆ ಮಂಡನೆಗೆ ಯತ್ನಿಸಿದರೂ ವಿ.ಪಿ. ಸಿಂಗ್ ಸರ್ಕಾರ ಅಕಾಲಿಕವಾಗಿ ಪತನವಾಯಿತ್ತು. ಮುಂದೆ ೧೯೯೧ರ ಸೆಪ್ಟೆಂಬರ್‌ನಲ್ಲಿ ೧೬ ರಂದು ಪಿ.ವಿ. ನರಸಿಂಹರಾವ್ ಸರ್ಕಾರ ಮಸೂದೆಯನ್ನು ಸಾಕಷ್ಟು ಬದಲಾವಣೆಗಳೊಂದಿಗೆ ೧೯೯೨ರ ಡಿಸೆಂಬರ್ ತಿಂಗಳಲ್ಲಿ ಸದನಲ್ಲಿ ಮಂಡಿಸಲಾದ ಈ ಸಂವಿಧಾನದ ತಿದ್ದುಪಡಿ ಮಸೂದೆಗೆ ಎರಡೂ ಸನಗಳು ಒಪ್ಪಿಗೆ ನೀಡುತ್ತವೆ. ಈ ಮಸೂದೆಯೇ ಪಂಚಾಯತ್ ರಾಜ್ ವ್ಯವಸ್ಥೆಯ ಅಮೂಲಾಗ್ರ ಬದಲಾವಣೆಗೆ ಕಾರಣವಾದ ಸಂವಿಧಾನದ ೭೩ನೇ ತಿದ್ದುಪಡಿ ಮಸೂದೆ ಏಪ್ರಿಲ್ ೨೦, ೧೯೯೩ರಲ್ಲಿ ರಾಷ್ಟ್ರಾಧ್ಯಕ್ಷರ ಅಂಕಿತದೊಂದಿಗೆ ಜಾರಿಗೆ ತರಲಾಯಿತು. ಸಂವಿಧಾನದ ಭಾಗ ೯ರಲ್ಲಿ ಮತ್ತು ಅನುಸೂಚಿ ೧೧ರಲ್ಲಿ ಇದನ್ನು ಸೇರಿಸಿ ಈ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಸ್ಥಾನಮಾನವನ್ನು ನೀಡಲಾಯಿತು.

ಈ ಕಾಯ್ದೆಯನ್ವಯ ರಾಜ್ಯ ಸರ್ಕಾರಗಳು ಹೊಸ ಪಂಚಾಯತ್ ರಾಜ್ ಕಾಯ್ದೆಯನ್ನು ರೂಪಿಸಲು ಮುಂದಾದವು ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಪಶ್ಚಿಮ ಬಂಗಾಳ ಮತ್ತು ಕರ್ನಾಟಕ ರಾಜ್ಯ ಸರ್ಕಾರಗಳು.

**೩.೪. ಕರ್ನಾಟಕದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಬೆಳವಣಿಗೆ:**

ಕರ್ನಾಟಕ ರಾಜ್ಯ ಏಕೀಕರಣಕ್ಕೂ ಮುನ್ನ ಪಂಚಾಯತ್ ರಾಜ್ ಕಾಯ್ದೆಗೆ ಸಂಬಂಧಪಟ್ಟಂತೆ ಅನೇಕ ಸಮಿತಿಗಳು, ಕಾನೂನುಗಳು ಜಾರಿಗೆ ಬಂದಿರುವುದನ್ನು ನಾವು ಕಾಣತ್ತೇವೆ. ೧೮೬೭ರಲ್ಲಿ ಪ್ರಥಮ ಬಾರಿಗೆ 'ಬೆಂಗಳೂರಿನ ಕಂಟೋನ್ಮೆಂಟ್ ಪ್ರದೇಶದಲ್ಲಿ

ಮುನ್ಸಿಪಾಲಿಟಿ ರಚಿಸಲು ಕಾಯ್ದೆಯೊಂದನ್ನು ಜಾರಿಗೆ ತರಲಾಯಿತು, ನಂತರ ೧೯೦೨-೧೯೦೩ರಲ್ಲಿ "ದಿ ಮೈಸೂರ್ ಲೋಕಲ್ ಬೋರ್ಡ್ ರೆಗ್ಯೂಲೇಶನ್ ಕಾಯ್ದೆ ಈ ಕಾಯ್ದೆ ಅಕ್ಟೋಬರ್ ತಿಂಗಳಲ್ಲಿ ಅಂಕಿಂತಗೊಂಡು ಮೂರು ಹಂತಗಳ ಸ್ಥಳೀಯಾಡಳಿತ ವ್ಯವಸ್ಥೆಗೆ ಅನುವು ಮಾಡಿತು.

೧) ಜಿಲ್ಲಾ ಮಂಡಳಿ

೨) ತಾಲೂಕು ಬೋರ್ಡ್

೩) ಪಂಚಾಯತಿ ಸಂಘಟನೆ.

೧೯೧೮-೧೯೧೯ರಲ್ಲಿ "ದಿ ಮೈಸೂರ್ ಲೋಕಲ್ ಬೋರ್ಡ್ ಮತ್ತು ವಿಲೇಜ್ ಪಂಚಾಯತ್ ಕಾಯ್ದೆ ಜಾರಿಗೆ ತಂದು ಇದರನ್ವಯ ಕೆಲವೊಂದು ಪ್ರಗತಿಪರ ಅಂಶಗಳನ್ನು ಗುರುತಿಸಿತು.

೧) ಎಲ್ಲಾ ವಿಭಾಗಗಲ್ಲೂ ಅಧಿಕಾರ ವಿಕೇಂದ್ರೀಕರಣ ಮಾಡುವುದು.

೨) ಚುನಾಯಿತ ಸದಸ್ಯರ ಸಂಖ್ಯೆಯಲ್ಲಿ ಹೆಚ್ಚಳ.

೩) ಮೂರು ಹಂತಗಳಿಗೆ ಅವರದ್ದೇ ಆದ ಅಧಿಕಾರ.

**೧೯೨೬ರ ಕಾಯ್ದೆ**

ಅಭಿವೃದ್ಧಿ ಎನ್ನುವುದು ನಿಂತ ನೀರಲ್ಲ, ಚಲನಶೀಲತೆಯೇ ಅಭಿವೃದ್ಧಿಯ ಮುಖ್ಯ ಲಕ್ಷಣ, ಸ್ಥಳೀಯಾಡಳಿತ ಸಂಸ್ಥೆಗಳ ಪಾಲಿಗೆ ೧೯೨೬ರ ಕಾಯ್ದೆ ಇದಕ್ಕೊಂದು ಉದಾಹರಣೆ ಈ ಕಾಯ್ದೆ ಸ್ವಾತಂತ್ರ್ಯನಂತರ ಅಂದರೆ ೧೯೫೨ರ ವರೆಗೂ ನಮ್ಮ ದೇಶದಲ್ಲಿ ಅಸ್ತಿತ್ವದಲ್ಲಿತು. ಈ ಕಾಯ್ದೆಯಲ್ಲಿ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಕ್ಕೆ ಪೂರಕವಾದ ಕೆಲವು ಅಂಶಗಳಿದ್ದವು ಎಂದು ತಜ್ಞರ ಅಭಿಪ್ರಾಯವಾಗಿತ್ತು. ಇದು ಕಡ್ಡಾಯವಾಗಿ ಗ್ರಾಮ ಪಂಚಾಯಿತಿಗಳನ್ನು ಅಸ್ತಿತ್ವಕ್ಕೆ ತಿಂದಿತು. ಅಲ್ಲದೆ ಪ್ರತಿ ಹಂತಗಳಲ್ಲಿ ಅಭಿವೃದ್ದಿ ಸಮಿತಿಗಳು ರಚಿತವಾದವು, ೧೯೪೮ರಲ್ಲಿ ಸ್ಥಾಪಿತವಾದ ಗ್ರಾಮೀಣ ಅಭಿವೃದ್ಧಿ ಇಲಾಖೆಯೊಡಗೆ ಈ ಸಮಿತಿಗಳು ಸ್ಪಂಧಿಸುತ್ತಿದ್ದವು, ಗ್ರಾಮೀಣಾಭಿವೃದ್ದಿ ನಿಧಿಯನ್ನು ಸದುಪಯೋಗಪಡಿಸುವ ಜವಬ್ದಾರಿಯನ್ನು ಹೊತ್ತಿದ್ದವು.

೧೯೪೯ರಲ್ಲಿ ವಿ. ವೆಂಕಟಪ್ಪ ಸಮಿತಿ ನೇಮಕ ಮಾಡಿತು ಈ ಸಮಿತಿ ಮಧ್ಯಾಂತರದಲ್ಲಿ ತಾಲ್ಲೂಕು ಮಂಡಳಿಗಳನ್ನು ಆಸ್ತಿತ್ವಕ್ಕೆ ತರಲು ಶಿಫಾರಸ್ಸು ಮಾಡಿತು. ತಾಲ್ಲೂಕು ಮಟ್ಟದಲ್ಲಿ ಅಧಿಕಾರ ನೀಡುವುದು, ಪರಿಶಿಷ್ಟ ಜಾತಿಗಳಿಗೆ ಪ್ರಾತಿನಿಧ್ಯ ನೀಡುವುದು, ಮತ್ತು ಗ್ರಾಮ ಪಂಚಾಯಿತಿಗಳಿಗೆ ಮಹತ್ವವನ್ನು ಕಲ್ಪಿಸಲಾಯಿತು.

**೧೯೫೨ರ ಕಾಯ್ದೆ**

ವೆಂಕಟಪ್ಪ ಸಮಿತಿಯ ಶಿಫಾರಸ್ಸುಗಳನ್ನು ಆಧರಿಸಿದ "ದಿ ಮೈಸೂರು ವಿಲೇಜ್ ಪಂಚಾಯತ್ ಮತ್ತು ಡಿಸ್ಟ್ರಿಕ್ಟ್ ಬೋರ್ಡ್ ಕಾಯ್ದೆ-೧೯೫೨ನ್ನು ಜಾರಿಗೊಳಿಸಿತು. ೧೯೫೨ರ ಫೆಬ್ರವರಿ ೧೪ ರಿಂದ ಈ ಕಾಯಿದೆ ಜಾರಿಗೆ ಬಂತಾದರೂ ಕಾಯ್ದೆಯಲ್ಲಿನ ಹೆಚ್ಚಿನ ಅಂಶಗಳು ಅನುಷ್ಠಾನಕ್ಕೆ ಬರಲೇ ಇಲ್ಲ. ಇದರಿಂದಾಗಿ ಹಳೆಯ ವ್ಯವಸ್ಥೆಯು ಮುಂದಿವರೆಯಿತು.

**ಚಂದ್ರಶೇಖರಯ್ಯ ಸಮಿತಿ** ೧೯೫೩ರ ಡಿಸೆಂಬರ್ ತಿಂಗಳಲ್ಲಿ ಡಿ.ಎಚ್. ಚಂದ್ರಶೇಖರಯ್ಯ ಅವರ ಅಧ್ಯಕ್ಷತೆಯಲ್ಲಿ ಮಂಡಳಿಗಳ ವಿಚಾರಣಾ ಸಮಿತಿಯನ್ನು ನೇಮಕ ಮಾಡಿತು. ಸಮೂಹ ಪಂಚಾಯಿತಿಗಳಿಗೆ ವಿರೋಧ ವ್ಯಕ್ತವಾದುದರ ಪರಿಣಾಮವಾಗಿ ಕಾಯ್ದೆಯನ್ನು ತಿದ್ದುಪಡಿಮಾಡಿ ಪ್ರತಿಯೊಂದು ಗ್ರಾಮಕ್ಕೂ ಪಂಚಾಯಿತಿ ಸ್ಥಾಪನೆಗೆ ಅವಕಾಶ ಮಾಡಿಕೊಟ್ಟಿತು. ಈ ಸಮಿತಿಯ ಬಹುಮುಖ್ಯ ಶಿಫಾರಸ್ಸು ಏನೆಂದರೆ ಜಿಲ್ಲಾ ಮಂಡಳಿಗಳಿಗೆ ಮಹಿಳೆಯರು ಸೇರಿದಂತೆ ಪ್ರತಿನಿಧ್ಯತೆಯನ್ನು ದೊರಕಿಸುವುದು. ಪ್ರಸ್ತುತವಾಗಿ ಈ ತತ್ವಕ್ಕೆ ಎಲ್ಲಾ ಕಡೆ ಮನ್ನಣೆ ಇದೆ.

**೧೯೫೯ರ ಪಂಚಾಯತ್ ರಾಜ್ ಕಾಯ್ದೆ**

ಡಿ.ಎಚ್. ಚಂದ್ರಶೇಖರಯ್ಯ ಸಮಿತಿಯ ಶಿಫಾರಸ್ಸುಗಳನ್ನು ಕೂಡಲೇ ಶಾಸನ ರೂಪಕ್ಕೆ ಪರಿವರ್ತಿಸಲು ಸಾಧ್ಯವಾಗಲಿಲ್ಲ, ಏಕೆಂದರೆ ೧೯೫೬ರಲ್ಲಿ ರಾಜ್ಯಗಳ ಪುನರ್ ವಿಂಗಡನೆ ಆಗಿದ್ದರಿಂದ ಮುಂದೆ ೧೯೫೯ರಲ್ಲಿ ಮೈಸೂರು ರಾಜ್ಯದಲ್ಲಿ ಹೊಸ ಕಾನೂನು ಜಾರಿಗೆ ಬಂದಿತು.

ನೂತನ ಶಾಸನ ವೆಂಕಟಪ್ಪ (೧೯೪೯) ಮತ್ತು ಚಂದ್ರಶೇಖರಯ್ಯ ಸಮಿತಿ (೧೯೫೩)ಗಳಿಂದ ಹಾಗೂ ರಾಷ್ಟ್ರಮಟ್ಟದಲ್ಲಿನ ಬಲವಂತರಾಯ್ ಮೆಹ್ತಾ ಸಮಿತಿಯಿಂದ ನೆಹರು ಮತ್ತು ಎಸ್.ಕೆ ಡೇ ರವರ ಪ್ರಭಾವಿತವಾಗಿತ್ತು.ಇದರ ಮೂಲ ಉದ್ದೇಶ ಪ್ರಜೆಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ಕ್ರಿಯಾಶೀಲರಾಗಿ ಭಾಗವಹಿಸುವಂತೆ ಪ್ರೋತ್ಸಾಹಿಸುವುದು ಮತ್ತು ಪ್ರಜೆಗಳಿಗೆ ಸ್ಥಳೀಯ ಸಂಸ್ಥೆಗಳ ಮೂಲಕ ಅಧಿಕಾರವನ್ನು ವರ್ಗಾಹಿಸುವುದು.

**ಕೊಂಡಜ್ಜಿ ಬಸಪ್ಪ ಸಮಿತಿ ೧೯೬೨-೬೩-** ಈಗಾಗಲೇ ಜಾರಿಯಲ್ಲಿದ್ದ ೧೯೫೯ರ ಪಂಚಾಯತ್ ಕಾಯ್ದೆಯನ್ನು ಅಧ್ಯಯನ ಮಾಡಿ ೧೯೬೩ರಲ್ಲಿ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿ ಕೆಲವು ಸಲಹೆಗಳನ್ನು ನೀಡಿತು.

- ಜಿಲ್ಲಾ ಅಭಿವೃದ್ಧಿ ಮಂಡಳಿ, ಜಿಲ್ಲಾ ಪರಿಷತ್ ಸ್ಥಾಪನೆ ಮಾಡಬೇಕು.
- ಜಿಲ್ಲಾ ಪರಿಷತ್‌ಗೆ ನೇರ ಚುನಾವಣೆ ನಡೆಸಬೇಕು.
- ಗ್ರಾಮ ಪಂಚಾಯಿತಿಗಳಿಗೆ ಆದ್ಯತೆ ನೀಡಿ, ಗ್ರಾಮಸಭೆಗಳನ್ನು ನಡೆಸಬೇಕು.

ಹೀಗೆ ಹಲವು ಶಿಫಾರಸ್ಸು, ಸಲಹೆಗಳನ್ನು ಸೂಚಿಸಿತು. ಆದರೆ ಎಸ್. ನಿಜಲಿಂಗಪ್ಪ ಸರ್ಕಾರದ ನಂತರ ಬಂದ ಸರ್ಕಾರಗಳು ಈ ಕಾಯ್ದೆ ಬಗ್ಗೆ ಹೆಚ್ಚು ಆಸ್ತಕಿ ವಹಿಸಲಿಲ್ಲ.

**೧೯೮೩ರ ಪಂಚಾಯತ್ ರಾಜ್ ಕಾಯ್ದೆ-**

ಕೇಂದ್ರ ಸರ್ಕಾರದ ಮೆಹ್ತಾ ಸಮಿತಿ ಶಿಫಾರಸ್ಸುಗಳಾಧರದ ಮೇಲೆ ಕರ್ನಾಟಕದಲ್ಲಿ ನೂತನ ಪಂಚಾಯತ್ ರಾಜ್ ವ್ಯವಸ್ಥೆಗೆ ಪ್ರೇರಣೆ ಹಾಗೂ ಸ್ಪೂರ್ತಿಯನ್ನು ಕೊಟ್ಟಿತು. ಆಗ ಅಧಿಕಾರದಲ್ಲಿದ್ದ ಅಂದಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ನೇತೃತ್ವದ ಜನತಾ ಸರ್ಕಾರದಲ್ಲಿ ಗ್ರಾಮೀಣಾಭಿವೃದ್ಧಿ ಸಚಿವರಾಗಿದ್ದವರು ಅಬ್ದುಲ್ ನಜೀರ್ ಸಾಬ್ ಅವರು ಕರ್ನಾಟಕದಲ್ಲಿ ಅನುಷ್ಠಾನಕ್ಕೆ ತಂದೆ ಮಂಡಲ ಪಂಚಾಯತ್ ಮತ್ತು ಜಿಲ್ಲೆ ಪಂಚಾಯತ್ ವ್ಯವಸ್ಥೆ ಅಧಿಕಾರ ವಿಕೇಂದ್ರೀಕರಣದ ಶಕ್ತಿಯನ್ನು ದೇಶಕ್ಕೆ ತೋರಿಸಿಕೊಟ್ಟಿತು. ಕರ್ನಾಟಕದಲ್ಲಿ ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯತ್ ಮತ್ತು ಮಂಡಲ ಪಂಚಾಯತಿ ಹಾಗೂ ನ್ಯಾಯ ಪಂಚಾಯತಿ ಮಸೂದೆಯನ್ನು ರೂಪಿಸಿ ಸದನದಲ್ಲಿ ಮಂಡಿಸಿದರು, ಈ ಮಸೂದೆ ೧೯೮೪ರಲ್ಲಿ ಶಾಸಕಾಂಗದಲ್ಲಿ ಅಂಗೀಕೃತವಾಗಿ (ಜುಲೈ-೧೦-೧೯೮೫) ರಾಷ್ಟ್ರಾಧ್ಯಕ್ಷರ ಒಪ್ಪಿಗೆ ಪಡೆದು ಅಗಸ್ಟ್ ೧೪-೧೯೮೫ ರಂದು ಜಾರಿಗೆ ಬಂದಿತು. ಕರ್ನಾಟಕದಲ್ಲಿ ಎರಡು ಹಂತಗಳಲ್ಲಿ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿಗಳು ಅಸ್ತಿತ್ವಕ್ಕೆ ಬಂದವು. ೧೯೮೭ರ ಜನವರಿ ೨೦ ರಂದು ಜಿಲ್ಲಾ ಪರಿಷತ್‌ಗಳಿಗೆ ಹಾಗೂ ೨೦ ರಂದು -೨೪೬೯ ಮಂಡಲ ಪಂಚಾಯಿತಿಗಳಿಗೆ ಚುನಾವಣೆಗಳು ನಡೆದವು. ಈ ಹಂತಗಳಲ್ಲಿ /ಕರ್ನಾಟಕ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮೊದಲ ಬಾರಿಗೆ ಮಹಿಳೆಯರಿಗೆ ಶೇ. ೨೫ ರಷ್ಟು ಸ್ಥಾನಗಳು ಮೀಸಲಾತಿ ನೀಡುವ ಮೂಲಕ ಮಹಿಳಾ ಸಬಲೀಕರಣದ ಹೊಸ ಯುಗಕ್ಕೆ ನಾಂದಿ ಹಾಡಲಾಯಿತು. ಗಮನಾರ್ಹ ಅಂಶವೆಂದರೆ ಗ್ರಾಮ ಸಭೆಗಳಿಗೆ ವಿಶಿಷ್ಟವಾದ ಸ್ಥಾನವನ್ನು ಈ ಅಧಿನಿಯಮ ಕಲ್ಪಿಸಿತ್ತು.

ಅಭಿವೃದ್ಧಿ ಕಾರ್ಯಕ್ರಮಗಳ ವರ್ಗಾವಣೆ ಅಂದರೆ ಅಂದು ೧೯೮೭ ಏಪ್ರಿಲ್ ೧ ರಂದು ಹೊರಡಿಸಿದ ಸರ್ಕಾರಿ ಆದೇಶ ೨೫೭ ಯೋಜನಾ ಕಾರ್ಯಕ್ರಮಗಳನ್ನು ಮಂಡಲ ಪಂಚಾಯತಿಗೆ ವರ್ಗಾಯಿಸುವುದು.

೧೯೮೩ರ ಕಾಯ್ದೆ ಮಹಿಳಾ ಸಬಲೀಕರಣ ಮತ್ತು ವಿಕೇಂದ್ರೀಕರಣಕ್ಕೆ ಹೆಚ್ಚು ಪ್ರಾತಿನಿಧ್ಯತೆ ನೀಡಿದರು ಸಹ ಈ ಕಾಯ್ದೆ ಬಹಳ ಕಾಲದವರೆಗೆ ಯಶಸ್ವಿಯನ್ನು ಕಾಣಲಿಲ್ಲ, ಉದಾ: ಗ್ರಾಮೀಣ ಮಹಿಳೆಯರ ಸಬಲೀಕರಣಕ್ಕೆ ಅಗತ್ಯ ಸಂಗತಿಗಳಾದ ಶಿಕ್ಷಣ, ಆರೋಗ್ಯ ರಾಜಕೀಯ ಪ್ರಜ್ಞೆ, ಭಾಗವಹಿಸುವಿಕೆ ಇತ್ಯಾದಿ ಅಂಶಗಳ ಕಡೆ ಗಮನಹರಿಸಲಿಲ್ಲ.

೧೯೮೩ರ ಕಾಯ್ದೆಯನ್ನು ವ್ಯಾಪಕವಾಗಿ ಬದಲಾಯಿಸುವ ದೃಷ್ಟಿಯಿಂದ ಈ ಹೊತ್ತಿಗೆ

ಕೇಂದ್ರದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಹಾಗೂ ಸಂಸ್ಥೆಗಳಿಗೆ ಸಂವಿಧಾನದ ಬದ್ಧ ಸ್ಥಾನ ಕಲ್ಪಿಸುವ ದೃಷ್ಟಿಕೋನದಿಂದ ಭೂಸುಧಾರಣೆಗಳನ್ನು ತರಲು ಪ್ರಯತ್ನಿಸಲಾಗುತ್ತಿತು. ೧೯೮೯ರಲ್ಲಿ ೬೪ನೇ ತಿದ್ದುಪಡಿ ಮಸೂದೆಯೊಡನೆ ತಿದ್ದುಪಡಿ ಹಂತವು ಪ್ರಾರಂಭವಾಯಿತು. ಪಂಚಾಯಿತಿಗಳಿಗೆ ಸಂವಿಧಾನ್ಮಾತಕ ಸ್ಥಾನ ಕಲ್ಪಿಸುವ ದೃಷ್ಠಿಕೋನದಿಂದ ಕೇಂದ್ರ ಸರ್ಕಾರವು ೧೯೯೨ರಲ್ಲಿ ಗ್ರಾಮೀಣ ಮತ್ತು ನಗರ ಸ್ಥಳೀಯ ಸರ್ಕಾರಗಳಿಗೆ ತಿದ್ದುಪಡಿಗಳನ್ನು ತರುವ ಮೂಲಕ ಒಂದು ಮಹತ್ತರ ನಿರ್ಣಯವನ್ನು ತೆಗೆದುಕೊಂಡಿತ್ತು.

**೩.೫. ಸಂವಿಧಾನದ ೭೩ನೇ ತಿದ್ದುಪಡಿಯ ಲಕ್ಷಣಗಳು**

ಕೇಂದ್ರ ಸರ್ಕಾರವು ೧೯೯೩ರಲ್ಲಿ ಜಾರಿಗೆ ತಂದಿರುವಂತಹ ೭೩ನೇ ಸಂವಿಧಾನದ ತಿದ್ದುಪಡಿಯು ಗ್ರಾಮೀಣ ಸ್ಥಳೀಯ ಸರ್ಕಾರದ ಬಗ್ಗೆ ಸಂಬಂಧಿಸಿದಂತಹ ಅಂಶಗಳನ್ನು ಒಳಗೊಂಡಿದ್ದು, ಇದರ ಮುಖ್ಯ ಲಕ್ಷಣಗಳು ಹೀಗಿವೆ.

೧) ೨೪೩ ರಿಂದ ೨೪೩ ‘೦’ ವರೆಗಿನ ಅನುಚ್ಛೇದಗಳ ೯ನೇ ಭಾಗದಲ್ಲಿ ‘ಪಂಚಾಯಿತಿಗಳು’ ಎಂಬುವ ಅಂಶವನ್ನು ಒಳಗೊಂಡಂತಹ ಒಂದು ಭಾಗವನ್ನು ಸೇರಿಸಲಾಯಿತು.

೨) ೧೧ನೇ ಅನುಸೂಚಿಯನ್ನು ಹೊಸದಾಗಿ ಸಂವಿಧಾನಕ್ಕೆ ಸೇರಿಸುವ ಮೂಲಕ ಪಂಚಾಯಿತಿಗಳು ಅಧಿಕಾರ ಮತ್ತು ಕಾರ್ಯಗಳನ್ನು ಸ್ಪಷ್ಟಪಡಿಸಲಾಗಿದೆ.

೩) ಸಂವಿಧಾನದ ೪೦ನೇ ವಿಧಿಯಲ್ಲಿ ರಾಜ್ಯವು ಗ್ರಾಮ ಪಂಚಾಯಿತಿಗಳನ್ನು ಸಂಘಟಿಸಲು ಕ್ರಮವಹಿಸಬೇಕು.

೪) ಈ ತಿದ್ದುಪಡಿಯ ಮೂಲಕ ಪಂಚಾಯತ್ ವ್ಯವಸ್ಥೆಯನ್ನು ಸಂವಿಧಾನಿಕ ಬದ್ಧತೆಗೆ ಒಳಪಡಿಸಿ ರಾಜ್ಯ ಸರ್ಕಾರಗಳು ಈ ಬಾಧ್ಯತೆಗೆ ಒಳಪಡುವಂತೆ ಮಾಡಲಾಗಿದೆ.

೫) ಆಯಾ ರಾಜ್ಯ ಸರ್ಕಾರಗಳೇ ಗ್ರಾಮ ಪಂಚಾಯಿತಿಗಳಿಗೆ ಸಂಬಂಧಿಸಿದಂತಹ ನಿಯಮಾವಳಿಗಳನ್ನು ರಚಿಸಬೇಕು ಎಂಬುದು.

೬) ಪ್ರತಿಯೊಂದು ಗ್ರಾಮ ಪಂಚಾಯತಿಯು ಒಂದು ಗ್ರಾಮಸಭೆಯನ್ನು ಹೊಂದಿರಬೇಕೆಂಬುದನ್ನು ಸ್ಪಷ್ಟಪಡಿಸಿದೆ, (ಅಂದರೆ ಗ್ರಾಮದ ಮತದಾರರೆಲ್ಲರನ್ನು ಜನರೆಲ್ಲರನ್ನು ಒಳಗೊಂಡ ಜನ ಸಮೂಹವೇ ಈ ಗ್ರಾಮಸಭೆ)

೭) ೭೩ನೇ ಸಂವಿಧಾನಿಕ ತಿದ್ದುಪಡಿಯು ಮೂರು ಹಂತದ ಪಂಚಾಯತ್ ವ್ಯವಸ್ಥೆಗೆ ಅವಕಾಶ ಕಲ್ಪಿಸಿದೆ, ಅಂದರೆ ಗ್ರಾಮ ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯತಿ ಈ ಎರಡರ ನಡುವೆ ಮಧ್ಯಂತರ ತಾಲ್ಲೂಕು ಪಂಚಾಯಿತಿ ಇರಬೇಕೆಂಬುದು, ಆದರೆ ೨೦ ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆ ಇರುವ ರಾಜ್ಯಗಳಿಗೆ ಗ್ರಾಮ ಪಂಚಾಯಿತಿ ಹಾಗೂ ಜಿಲ್ಲಾ

ಪಂಚಾಯಿತಿ ಎಂಬ ಎರಡು ಹಂತದ ವ್ಯವಸ್ಥೆಗೆ ಅವಕಾಶ ಕಲ್ಪಿಸಿದೆ.

೮) ಈ ತಿದ್ದುಪಡಿಯ ಪ್ರಕಾರ ಮೂರು ಹಂತದ ಪಂಚಾಯಿತಿಗಳಿಗೂ ಸದಸ್ಯರನ್ನು ನೇರ ಚುನಾವಣೆಯ ಮೂಲಕವೇ ನೇಮಕ ಮಾಡಬೇಕು, ಗ್ರಾಮ ಪಂಚಾಯಿತಿ ಅಧ್ಯಕ್ಷರು, ತಾಲೂಕು ಪಂಚಾಯಿತಿ ಇಲ್ಲದಂತಹ ರಾಜ್ಯಗಳಲ್ಲಿ ಜಿಲ್ಲಾ ಪಂಚಾಯಿತಿಯಲ್ಲಿ ಗ್ರಾಮ ಪಂಚಾಯಿತಿ ಅಧ್ಯಕ್ಷರಿಗೆ ಪ್ರತಿನಿಧ್ಯತೆ ಇರಬೇಕು. ರಾಜ್ಯ ಶಾಸಕಾಂಗದ ಹಾಗೂ ಸಂಸತ್ತಿನ ಸದಸ್ಯರಿಗೆ ಗ್ರಾಮ ಪಂಚಾಯಿತಿ ಹೊರತುಪಡಿಸಿ ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯಿತಿಗಳಲ್ಲಿ ಪ್ರಾತಿನಿಧ್ಯತೆಗೆ ಅವಕಾಶ ಕಲ್ಪಿಸಲಾಗಿದೆ. ಇವರುಗಳಿಗೆ ಮತದಾನದ ಹಕ್ಕಿದ್ದರು ಸಹ ಅಧ್ಯಕ್ಷ ಹಾಗೂ ಉಪಾಧ್ಯಕ್ಷರುಗಳು ಆಯಾ ಪಂಚಾಯಿತಿ ಚುನಾಯಿತಿಯ ಅಧ್ಯಕ್ಷರಿಗೆ ಪ್ರಾತಿನಿಧ್ಯತೆ ಇರಬೇಕು. ರಾಜ್ಯ ಶಾಸಕಾಂಗದ ಹಾಗೂ ಸಂಸತ್ತಿನ ಸದಸ್ಯರಿಗೆ ಗ್ರಾಮ ಪಂಚಾಯಿತಿ ಹೊರತುಪಡಿಸಿ ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯಿತಿಗಳಲ್ಲಿ ಪ್ರಾತಿನಿಧ್ಯತೆಗೆ ಅವಕಾಶ ಕಲ್ಪಿಸಲಾಗಿದೆ. ಇವರುಗಳಿಗೆ ಮತದಾನದ ಹಕ್ಕಿದ್ದರೂ ಸಹ ಅಧ್ಯಕ್ಷ ಹಾಗೂ ಉಪಾಧ್ಯಕ್ಷರುಗಳು ಆಯಾ ಪಂಚಾಯಿತಿ ಚುನಾಯಿತ ಸದಸ್ಯರೇ ಆಗಿರಬೇಕು. ಆದರೆ ಗ್ರಾಮ ಪಂಚಾಯಿತಿಯ ಅಧ್ಯಕ್ಷ, ಉಪಾಧ್ಯಕ್ಷರ ಆಯ್ಕೆಯ ವಿಧಾನವನ್ನು ಆಯಾ ರಾಜ್ಯ ಸರ್ಕಾರಗಳಿಗೆ ಬಿಡಲಾಗಿದೆ.

೯) ಆಯಾ ಪಂಚಾಯಿತಿ ವ್ಯಾಪ್ತಿಯ ಜನಸಂಖ್ಯೆಯನ್ನು ಹಾಗೂ ಅಲ್ಲಿಯ ಅನುಸೂಚಿತ ಜಾತಿಗೆ ಶೇ.೧೮ರಷ್ಟು ಹಾಗೂ ಅನುಸೂಚಿತ ಜಾತಿಗೆ ಶೇ ೧೮ರಷ್ಟು ಹಾಗೂ ಅನುಸೂಚಿತ ವರ್ಗಕ್ಕೆ ಶೇ.೩ರಷ್ಟು ಇದರ ಜೊತೆಗೆ ಮಹಿಳೆಯರಿಗೂ ಸಹ ಮೀಸಲಾತಿಯನ್ನು ನೀಡಲಾಗಿದೆ. ಉಳಿದಂತೆ ರಾಜ್ಯ ಸರ್ಕಾರಗಳು ಹಿಂದುಳಿದ ವರ್ಗಗಳಿಗೂ ಮೀಸಲಾತಿ ನೀಡಬಹುದಾಗಿದೆ.

೧೦) ಪಂಚಾಯಿತಿಗಳ ಅಧಿಕಾರ ಅವಧಿಯನ್ನು ಐದು ವರ್ಷಗಳು ಎಂದು ನಿಗದಿಪಡಿಸಲಾಗಿದೆ. ಸಾಮನ್ಯವಾಗಿ ಬದಲಾಯಿಸುವಂತಿಲ್ಲ. ಒಂದು ವೇಳೆ ಯಾವುದೇ ಪಂಚಾಯಿತಿ ಅವಧಿಗೆ ಮುಂಚಿತವಾಗಿ ವಿಸರ್ಜನೆಗೊಂಡರೆ ಆರು ತಿಂಗಳ ಒಳಗಾಗಿ ಚುನಾವಣೆ ನಡೆಸಬೇಕು ಎಂಬುದನ್ನು ಸ್ಪಷ್ಟಪಡಿಸಿದೆ.

೧೧) ಪಂಚಾಯಿತಿಗಳು ಈ ತಿದ್ದುಪಡಿಯ ಮೂಲಕ ತೆರಿಗೆಯನ್ನು ವಿಧಿಸುವ ಹಾಗೂ ಸಂಗ್ರಹಿಸುವಂತಹ ಅಧಿಕಾರವನ್ನು ಪಡೆದುಕೊಂಡಿದೆ.

೧೨) ಈ ತಿದ್ದುಪಡಿಯು ರಾಜ್ಯ ಚುನಾವಣಾ ಆಯೋಗ ರಚನೆಗೆ ನಿರ್ದೇಶಿಸಿದ್ದು, ಇದು ಮೂರು ಹಂತದ ಪಂಚಾಯಿತಿಗಳಿಗೂ ಚುನಾವಣೆಗಳನ್ನು ನಡೆಸುವ ಜವಬ್ದಾರಿಕೆಯನ್ನು ಹೊಂದಿರುತ್ತದೆ. ಈ ಚುನಾವಣಾ ಆಯೋಗವು ರಾಜ್ಯಪಾಲರಿಂದ ನೇಮಕಗೊಳ್ಳಬೇಕೆಂದು ತಿಳಿಸಿರುವುದು.

೧೩) ಈ ತಿದ್ದುಪಡಿಯು ಪಂಚಾಯಿತಿಗಳು ಆರ್ಥಿಕಾಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯದ ಯೋಜನೆಗಳನ್ನು ಹಾಗೂ ಕಾರ್ಯಕ್ರಮಗಳನ್ನು ಜಾರಿಗೆ ತರುವಂತಹ ಅಧಿಕಾರ ಹಾಗೂ ಜವಾಬ್ದಾರಿಗಳನ್ನು ಹೊಂದಿರುವಂತಹ ಸ್ವಾಯತ್ತ ಸ್ವಯಂ ಸರ್ಕಾರಿ ಸಂಸ್ಥೆಗಳಂತೆ ಕಾರ್ಯನಿರ್ವಹಿಸುವ ನಿಟ್ಟಿನಲ್ಲಿ ರಾಜ್ಯ ಸರ್ಕಾರಗಳು ಶಾಸನ ರಚಿಸಬಹುದೆಂದು ಸೂಚಿಸುತ್ತದೆ.

೧೪) ೭೩ನೇ ತಿದ್ದುಪಡಿಯು ರಾಜ್ಯದಲ್ಲಿ ಒಂದು ಹಣಕಾಸು ಆಯೋಗವನ್ನು ರಚಿಸಲು ಅವಕಾಶ ಕಲ್ಪಿಸಿದ್ದು ಇದನ್ನು ಪ್ರತಿ ಐದು ವರ್ಷಗಳಿಗೊಮ್ಮೆ ರಾಜ್ಯಪಾಲರು ನೇಮಕ ಮಾಡುವವರಾಗಿದ್ದಾರೆ. ಈ ಆಯೋಗವು ಪಂಚಾಯಿತಿಗಳ ಹಣಕಾಸು ಪರಿಸ್ಥಿತಿಯನ್ನು ಪರಿಶಶೀಲಿಸುವುದು.

೧೫) ಈ ತಿದ್ದುಪಡಿಯ ಮೂಲಕ ಪಂಚಾಯಿತಿ ಚುನಾವಣೆಗಳಲ್ಲಿ ನ್ಯಾಯಾಲಯ ಹಸ್ತಕ್ಷೇಪವನ್ನು ತಪ್ಪಿಸಲು ಕ್ರಮವಹಿಸಲಾಗಿದೆ. ಅಂದರೆ ಪಂಚಾಯಿತಿಗಳಿಗೆ ಚುನಾವಣಾ ತಕರಾರು ಅರ್ಜಿಯನ್ನು ಹೊರತುಪಡಿಸಿ ಇನ್ನಾವುದನ್ನು ಪ್ರಶ್ನಿಸದಂತೆ ಮಾಡಿದೆ.

೧೬) ಈ ತಿದ್ದುಪಡಿಯ ಮೂಲಕ ಸಂವಿಧಾನಕ್ಕೆ ೧೧ನೇ ಅನುಸೂಚಿಯನ್ನು ಹೊಸದಾಗಿ ಸೇರಿಸಿ ಪಂಚಾಯಿತಿಗಳ ಅಧಿಕಾರ ಮತ್ತು ಕಾರ್ಯಗಳನ್ನು ಸ್ಪಷ್ಟಪಡಿಸಲಾಗಿದೆ. ಒಟ್ಟಾರೆ ಇದರಲ್ಲಿ ೨೯ ಕಾರ್ಯಕ್ರಮಗಳನ್ನು ಪಂಚಾಯಿತಿಗಳಿಗೆ ವಹಿಸಿಕೊಡಲಾಗಿದೆ.

೧) ಶುದ್ಧ ಕುಡಿಯುವ ನೀರು

೨) ಗ್ರಾಮೀಣ ವಸತಿ

೩) ಬಡತನ ನಿರ್ಮೂಲನೆ

೪) ಗ್ರಾಮೀಣ ರಸ್ತೆಗಳು

೫) ಶಿಕ್ಷಣ

೬) ಸಾಮಾಜಿಕ, ಅರಣ್ಯ ನಿರ್ವಹಣೆ ಮತ್ತು ನಿರ್ಮಾಣ ಪ್ರವಾಸೋದ್ಯಮ

೭) ಆಹಾರ ಸಂಸ್ಕರಣಾ ಕೈಗಾರಿಕೆಗಳು

೮) ಸಣ್ಣ ಪ್ರಮಾಣದ ಕೈಗಾರಿಕೆಗಳು ಮತ್ತು ಗ್ರಾಮೀಣ ಕೈಗಾರಿಕೆಗಳು

೯) ಕೃಷಿ ತೋಟಗಾರಿಕೆ ಮತ್ತು ರೇಷ್ಮೆ ಕೃಷಿ

೧೦) ಪಶು ಸಂಗೋಪನೆ

೧೧) ಹೈನುಗಾರಿಕೆ

೧೨) ಕೋಳಿ ಸಾಗಾಣಿಕೆ ಮತ್ತು ಮೀನುಗಾರಿಕೆ

೧೩) ಗ್ರಾಮೀಣ ವಿದ್ಯುಧೀಕರಣ

೧೪) ಗ್ರಂಥಾಲಯಗಳು

೧೫) ಕ್ರೀಡೆಗಳು, ಸಾಂಸ್ಕೃತಿಕ ಚಟುವಟಿಕೆಗಳು

೧೬) ಇಂಧನ ಮತ್ತು ಮೇವು ಸರಬರಾಜು

೧೭) ಮಾರುಕಟ್ಟೆ ಸೌಲಭ್ಯ

೧೮) ಸಾರ್ವಜನಿಕ ಆರೋಗ್ಯ

೧೯) ನೈರ್ಮಲ್ಯ

೨೦) ಮಹಿಳಾ ಮತ್ತು ಮಕ್ಕಳ ಇಲಾಖೆ

೨೧) ವಿಕಲಚೇತನರು ಮತ್ತು ಮಾನಸಿಕ ಅಸ್ವಸ್ಥರ ಕಲ್ಯಾಣ

೨೨) ಅನುಸೂಚಿತ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿ

೨೩) ಎಲ್ಲಾ ಪ್ರಮಾಣ ಪತ್ರಗಳ ನೀಡುವಿಕೆ

೨೪) ಅಂಕಿ ಅಂಶಗಳ ನಿರ್ವಹಣೆ

೨೫) ಯೋಜನೆ ಸಹಕಾರ

೨೬) ಗ್ರಾಮೀಣ ಪರಿಸರ ವ್ಯವಸ್ಥೆ ಮತ್ತು ಜೀವಿ ಪರಿಸ್ಥಿತಿ

೨೭) ಆದಾಯ ಸೃಜನ ಕಾರ್ಯಚಟುವಟಿಕೆಗಳು

೨೮) ಜ್ಞಾನ ನಿರ್ವಹಣೆ

೨೯) ಸಮುದಾಯ ಸ್ವತ್ತು ನಿರ್ವಹಣೆಯಂತಹ ಪ್ರಮುಖ ವಿಷಯಗಳನ್ನು ಅನುಸೂಚಿ ೧ ಮತ್ತು ೨ಕ್ಕೆ ಸೇರಿಸಲಾಗಿದೆ.

ಹೀಗೆ ೭೩ನೇ ತಿದ್ದುಪಡಿಯ ಮೂಲಕ ಪಂಚಾಯತ್ ವ್ಯವಸ್ಥೆಯು ವಿವಿಧ ಕಾರ್ಯಗಳನ್ನು ಹೊಂದಿ ಸಂವಿಧಾನಿಕ ಬಾಧ್ಯತೆಯನ್ನು ಹೊಂದಿರುವುದರ ಜೊತೆಗೆ ಸಂಯುಕ್ತ ಸಂಸ್ಥೆಗಳಂತೆ ಕಾರ್ಯನಿರ್ವಹಿಸುವಂತಹ ಜವಬ್ದಾರಿಕೆಯನ್ನು ಸಹ ಹೊಂದಿರುವವು ಈ ಬೆಳವಣಿಗೆಯು ಭಾರತದೊಳಕ್ಕೆ ನಿಜಕ್ಕೂ ಅತ್ಯವಶ್ಯಕವಾದದು ಏಕೆಂದರೆ, ಶೇ. ೮೦ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದು, ಗ್ರಾಮೀಣ ಪ್ರದೇಶದ ಅಭಿವೃದ್ಧಿಯಾಗದೆ ಹೊರತು ದೇಶಾಭಿವೃದ್ದಿ ಕಷ್ಟ ಸಾಧ್ಯವಾದುದು, ಇದರಿಂದಾಗಿಯೇ ಗ್ರಾಮೀಣ ಪ್ರದೇಶಗಳು ಸ್ವಯಂ ಸರ್ಕಾರಗಳನ್ನು ಹೊಂದಿ ತಾವೇ ಕಂಡುಕೊಳ್ಳುವ ಪ್ರಯತ್ನ ಮಾಡಲು ಕಲ್ಪಿಸಿಕೊಟ್ಟಿರುವಂತಹ ಸದಾವಕಾಶವಾಗಿದೆ.

ಸಂವಿಧಾನ ೭೩ನೇ ತಿದ್ದುಪಡಿ ಕಾಯ್ದೆ ಅನ್ವಯ ರಾಜ್ಯಗಳು ಏಕ ರೂಪದ ಪಂಚಾಯತ್ ರಾಜ್ ಪದ್ಧತಿಯನ್ನು ಜಾರಿಗೆ ತಂದಿದೆ ಈ ನಿಟ್ಟಿನಲ್ಲಿಯೇ ಕರ್ನಾಟಕ ಸರ್ಕಾರ ೧೯೯೩ರಲ್ಲಿ ಹೊಸ ಪಂಚಾಯತ್ ರಾಜ್ ಕಾಯ್ದೆಯನ್ನು ಅಂಗೀಕರಿಸಿತು. ಇದು ಮೇ ೧೦, ೧೯೯೩ರಂದು ಜಾರಿಗೆ ತರಲಾಯಿತು.

**೩.೬. ೧೯೯೩ರ ಕರ್ನಾಟಕದ ಪಂಚಾಯತ್ ರಾಜ್ ಕಾಯ್ದೆ ಪ್ರಧಾನ ಲಕ್ಷಣಗಳು**

೭೩ನೇ ತಿದ್ದುಪಡಿಯ ನಿಯಮಗಳನ್ನು ಒಳಗೊಂಡಿರುವ ಕರ್ನಾಟಕದ ೧೯೯೩ರ ಪಂಚಾಯತ್ ಕಾಯ್ದೆ ಮೂರು ಹಂತದ ಗ್ರಾಮೀಣ ಸರ್ಕಾರಗಳ ರಚನೆ ಜೊತೆಗೆ ಗ್ರಾಮ ಸಭೆಗೂ ಅವಕಾಶ ಕಲ್ಪಿಸಿದೆ.

೧) **ಗ್ರಾಮ ಸಭೆ:** ರಾಜ್ಯಸರ್ಕಾರದ ಆದೇಶಕ್ಕೆ ಒಳಪಟ್ಟು, ಗ್ರಾಮಸಭೆ ಆಗಾಗ್ಗೆ ಸಭೆ ಸೇರಬೇಕು. ಆದರೆ ಎರಡು ಸಭೆಗಳು ಅಂತರ ಆರು ತಿಂಗಳಿಗಿಂತ ಹೆಚ್ಚು ಇರಬಾರದು. ಇದರ ಸಭೆಯನ್ನು ಗ್ರಾಮ ಪಂಚಾಯಯಿತಿ ಕರೆಯದಿದ್ದರೆ ಕಾರ್ಯಾಂಗಾಧಿಕಾರ ಕರೆಯಬಹುದು. ಇದರ ಅಧ್ಯಕ್ಷತೆಯನ್ನು ಗ್ರಾಮ ಪಂಚಾಯಿತಿ ಅಧ್ಯಕ್ಷವಹಿಸುತ್ತಾರೆ. ಅಭಿವೃದ್ಧಿಗೆ ಸಂಬಂಧಿಸಿದಂತೆ ಇದು ಗ್ರಾಮ ಪಂಚಾಯಿತಿಗೆ ಶಿಫಾರಸ್ಸು ಮತ್ತು ಸಲಹೆಗಳನ್ನು ಕೊಡುತ್ತದೆ.

೨) **ವಾರ್ಡ್ ಸಭೆ:** ಗ್ರಾಮ ತಾಲೂಕು, ಹಾಗೂ ಜಿಲ್ಲಾ ಪಂಚಾಯಿತಿಗಳ ಸದಸ್ಯರು ೫ ವರ್ಷಗಳ ಅವಧಿಗೆ ನೇರವಾಗಿ ಆಯ್ಕೆಯಾಗುತ್ತಾರೆ. ಪ್ರತಿ ಹಂತದಲೂ ಪರಿಶಿಷ್ಟ ಜಾತಿ ಪರಿಶಿಷ್ಟ ಬುಡಕಟ್ಟು ಹಾಗೂ ಮಹಿಳೆಯರಿಗೆ ಮೀಸಲು ಸ್ಥಾನಗಳಿವೆ. ಗ್ರಾಮ ಪಂಚಾಯಿತಿಯಲ್ಲಿ ಪ.ಜಾತಿ ಮತ್ತು ಪ.ಪಂಗಡ ಜನಾಂಗದವರಿಗೆ ಅನುಕ್ರವಾಗಿ ೧೫% ಹಾಗೂ ೩%ಕ್ಕೆ ಕಡಿಮೆಯಿಲ್ಲದಂತೆ ಸ್ಥಾನಗಳನ್ನು ಮೀಸಲಿಡಬೇಕು. ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಹಾಗೂ ಗ್ರಾಮ ಪಂಚಾಯಿತಿಗಳಲ್ಲಿ ಮಹಿಳೆಯರಿಗೆ ಶೇ.೫೦ರಷ್ಟು ಮೀಸಲು ನಿಯಮ ಕರ್ನಾಟಕದಲ್ಲಿ ೨೦೧೦ರ ಅಗಸ್ಟ್‌ನಿಂದ ಜಾರಿಗೆ ಬಂದಿದೆ.

೩) ಸಂವಿಧಾನದ ೧೧ನೇ ಅನುಸುಚಿಯಲ್ಲಿ ನಮೂದಿಸಿರುವ ಬಹುತೇಕ ಕರ್ತವ್ಯಗಳನ್ನು ಗ್ರಾಮ ಪಂಚಾಯಿತಿಗಳಿಗೆ ೧೯೯೩ರ ಕಾಯ್ದೆಯ ಒಂದನೇ ಅನುಸೂಚಿಯಲ್ಲಿ ವಹಿಸಲಾಗಿದೆ. ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ಉತ್ಪಾದನಾ ಸಮಿತಿ ಸಾಮಾಜಿಕ ನ್ಯಾಯಾ ಸಮಿತಿ ಹಾಗೂ ಸೌಕರ್ಯಗಳ ಸಮಿತಿಗಳನ್ನು ಚುನಾವಣೆ ಮೂಲಕ ರಚಿಸಬೇಕು.

೪) ಚುನಾಯಿತ ಸದಸ್ಯರ ಜೊತೆಗೆ ಸಂಸತ್ತಿನ ಎರಡು ಸದನಗಳು ಹಾಗೂ ರಾಜ್ಯ ಶಾಸಕಾಂಗದ ಎರಡು ಸದನಗಳ ಸದಸ್ಯರು ಸಂಬಂಧಪಟ್ಟ ತಾಲ್ಲೂಕು ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯಿತಿಗಳ ಸದಸ್ಯರಾಗಿದ್ದು, ಮತದಾನದ ಹಕ್ಕನ್ನು ಪಡೆದಿದ್ದಾರೆ, ಸರದಿ ಆಧಾರದ ಮೇಲೆ ೧/೫ ರಷ್ಟು ಗ್ರಾಮ ಪಂಚಾಯಿತಿ ಅಧ್ಯಕ್ಷರು ಒಂದು ವರ್ಷದ ಅವಧಿಗೆ ತಾಲ್ಲೂಕು ಪಂಚಾಯಿತಿಯ ಸದಸ್ಯರಾಗಬಹುದು ಮತ್ತು ಇವರು ಮತದಾನದ ಹಕ್ಕನ್ನು ಹೊಂದಿದ್ದಾರೆ, ತಾಲ್ಲೂಕು ಪಂಚಾಯಿತಿಗಳ ಅಧ್ಯಕ್ಷರು ತಮಗೆ ಸಂಬಂಧಪಟ್ಟ ಜಿಲ್ಲಾ ಪಂಚಾಯಿತಿಯ ಸದಸ್ಯರಾಗಿ, ಮತದಾನದ ಹಕ್ಕನ್ನು ಚಲಾಯಿಸಬಹುದು.

೫) ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯಿತಿಗಳ ಚುನಾಯಿತ ಸದಸ್ಯರು ತಮ್ಮಲ್ಲಿಯೇ

ಇಬ್ಬರನ್ನು ಅಧ್ಯಕ್ಷ ಹಾಗೂ ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳಬೇಕು.

೬) ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯಿತಿಗಳು ಎರಡು ತಿಂಗಳಿಗೊಮ್ಮೆ ಸಭೆ ಸೇರಬೇಕು, ವಿಶೇಷ ಸಭೆಗಳನ್ನು ಕರೆಯಲು ಅವಕಾಶವಿದೆ. ಈ ಪಂಚಾಯತಿಗಳಿಗೆ ೧೯೯೩ರ ಕಾಯ್ದೆಯ ಎರಡನೇಯ ಮತ್ತು ಮೂರನೇ ಅನುಸೂಚಿಗಳಲ್ಲಿ ವಹಿಸಿರುವ ಕರ್ತವ್ಯಗಳು ಸಂವಿಧಾನದ ೧೧ನೇ ಅನುಸೂಚಿಯಲ್ಲಿರುವ ಕರ್ತವ್ಯಗಳಾಗಿವೆ, ಅಲ್ಲದೆ ರಾಜ್ಯ ಸರ್ಕಾರ ಇತರ ಜವಬ್ದಾರಿಗಳನ್ನು ವಹಿಸಬಹುದು, ಪ್ರತಿ ತಾಲೂಕು, ಪಂಚಾಯಿತಿಯಲ್ಲಿ ಸಾಮಾನ್ಯ ಸ್ಥಾಯಿ ಸಮಿತಿ, ಹಣಕಾಸು ಲೆಕ್ಕ ಪರಿಶೋಧನ ಮತ್ತು ಯೋಜನಾ ಸಮಿತಿ ಹಾಗೂ ಸಾಮಾಜಿಕ ನ್ಯಾಯಾ ಸಮಿತಿ ಸದಸ್ಯರಿಂದ ಆಯ್ಕೆಯಾಗಬೇಕು, ಇದೇ ರೀತಿ ಪ್ರತಿ ಜಿಲ್ಲಾ ಪಂಚಾಯತಿಯಲ್ಲಿ ಸಾಮಾನ್ಯ ಸ್ಥಾಯಿ ಸಮಿತಿ, ಹಣಕಾಸು ಲೆಕ್ಕ ಪರಿಶೋಧ ಮತ್ತು ಯೋಜನಾ ಸಮಿತಿ, ಸಾಮಾಜಿಕ ನ್ಯಾಯ ಸಮಿತಿ, ಶಿಕ್ಷಣ ಮತ್ತು ಆರೋಗ್ಯ ಸಮಿತಿ ಹಾಗೂ ವ್ಯವಸಾಯ ಮತ್ತು ಕೈಗಾರಿಕೆಗಳ ಸಮಿತಿಗಳಿರಬೇಕು.

೭) ತಾಲ್ಲೂಕು ಪಂಚಾಯಿತಿಯಲ್ಲಿ ಕಾರ್ಯಂಗಾಧಿಕಾರಿಯಾಗಿ ಕೆಲಸ ಮಾಡಲು 'ಎ' ವರ್ಗದ ಅಧಿಕಾರಿಯನ್ನು ಅಥವಾ ಅಸಿಸ್ಟೆಂಟ್ ಕಮಿಷನರ್‌ಗೆ ಸಮಾನ ಹುದ್ದೆಯಲ್ಲಿರುವ ಅಧಿಕಾರಿಯನ್ನು ರಾಜ್ಯ ಸರ್ಕಾರ ನೇಮಕ ಮಾಡಬೇಕು, ಇದೇ ರೀತಿ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್‍ಯಾಂಗೀಯ ಅಧಿಕಾರಿಯಾಗಿ (Chief Executive) ಕೆಲಸ ಮಾಡುವ ಜಿಲ್ಲೆಯ ಡೆಪ್ಯೂಟಿ ಕಮಿಷನರ್‌ಗೆ ಸಮನಾದ ಅಧಿಕಾರಿಯನ್ನು ರಾಜ್ಯಸರ್ಕಾರ ನೇಮಿಸಬೇಕು.

೮) ಗ್ರಾಮ, ತಾಲೂಕು ಮತ್ತು ಜಿಲ್ಲಾ ಪಂಚಾಯಿತಿಗಳು ತಮ್ಮ ಅಧಿಕಾರಿಗಳನ್ನು ದುರುಪಯೋಗ ಮಾಡಿದರೆ ಅಥವಾ ಸಮರ್ಪಕವಾಗಿ ಕೆಲಸ ಮಾಡದೆ ಪದೇ ಪದೇ ತಪ್ಪು ಮಾರ್ಗ ಹಿಡಿದರೆ ಅವುಗಳನ್ನು ವಿಸರ್ಜಿಸುವ ಅಧಿಕಾರ ರಾಜ್ಯ ಸರ್ಕಾರಕ್ಕೆ ಇದೆ.

ಈ ಕಾಯ್ದೆ ಪ್ರಾರಂಭದಲ್ಲಿ ೩೨೧ ಸೆಕ್ಷನ್‌ಗಳನ್ನು ಒಳಗೊಂಡಿತ್ತು ಕೆಲವು ತಿದ್ದುಪಡಿಗಳ ಮೂಲಕ ೩A, ೩೧A, ೩೧B, ೪೩೦, ೫೮A, ೬೧A, ೬೧B, ೧೧೩A, ೧೩೬A, ೩೦೨A, ೩೦೨B, ೩೦೮A, ೩೦೮B, ೩೦೮C, ೩೦೮D, ಹಾಗೂ ೩೦೦A, ಸೆಕ್ಷನ್‌ಗಳನ್ನು ಸೇರಿಸಲಾಗಿದೆ. ೧೯೯೫, ೧೯೯೬, ೧೯೯೭, ೧೯೯೯, ೨೦೦೦, ೨೦೦೧, ೨೦೦೩, ಹಾಗೂ ೨೦೧೩ರಲ್ಲಿ ತಿದ್ದುಪಡಿಗಳನ್ನು ಮಾಡಲಾಗಿರುವುದರಿಂದ ಹಲವು ಬದಲಾವಣೆಗಳಾಗಿವೆ.

ಕರ್ನಾಟಕದ ೫೬೨೯ ಗ್ರಾಮ ಪಂಚಾಯಿತಿಗಳಿಗೆ, ೧೭೬ ತಾಲ್ಲೂಕು ಪಂಚಾಯತಿಗಳಿಗೆ ಮತ್ತು ೩೦ ಜಿಲ್ಲಾ ಪಂಚಾಯಿತಿಗಳಿಗೆ ೯೫, ೩೦೭, ಸದಸ್ಯರು ಆಯ್ಕೆಯಾಗಿರುತ್ತಾರೆ. (The Hindu ಏಪ್ರಿಲ್-೨೪-೨೦೧೨) ಇವರಲ್ಲಿ ಮಹಿಳಾ ಸದಸ್ಯರ ಸಂಖ್ಯೆ ೪೧.೫೭೭

ಹೊಸದಾಗಿ ೪೩೯ ಗ್ರಾಮ ಪಂಚಾಯಿತಿಗಳನ್ನು ರಚಿಸಲು ರಾಜ್ಯ ಸರ್ಕಾರ ಜನವರಿ ೯, ೨೦೧೫ ರಂದು ತಿರ್ಮಾನಿಸಿತು. (ವಿಜಯ ಕರ್ನಾಟಕ, ದಿನ ಪತ್ರಿಕೆ, ಜನವರಿ ೧೦, ೨೦೧೫) ಆದ್ದರಿಂದ ಗ್ರಾಮ ಪಂಚಾಯಿತಿಗಳ ಒಟ್ಟು ಸಂಖ್ಯೆ ೬,೦೬೬ಲಕ್ಕೆ ಹೆಚ್ಚಿತು. ಪಂಚಾಯತ್ ರಾಜ್ ಪದ್ಧತಿ ಸಮರ್ಪಕವಾಗಿ ಕಾರ್ಯನಿರ್ವಹಿಸಲು ಕೆಳಕಂಡ ಕ್ರಮಗಳನ್ನು ರಾಜ್ಯ ಸರ್ಕಾರ ಕೈಕೊಂಡಿದೆ.

– ಗ್ರಾಮ ಪಂಚಾಯತಿ ಲೆಕ್ಕಗಳ ನಿರ್ವಹಣೆಗೆ, ಪಂಚತಂತ್ರ ಸಾಫ್ಟ್‌ವೇರ್ ಅಳವಡಿಕೆ.

– ಸಾರ್ವಜನಿಕ ಕುಂದು ಕೊರತೆಗಳ ನಿವಾರಣೆಗೆ ಜನಮಿತ್ರ ಸಾಫ್ಟ್‌ವೇರ್ ಅಭಿವೃದ್ಧಿ.

– ಗ್ರಾಮ ಪಂಚಾಯಿತಿಗಳಿಗೆ ೧೦ ಲಕ್ಷ ಅನುದಾನ, ತಾಲ್ಲೂಕು ಪಂಚಾಯತಿಗಳಿಗೆ ೧ ಕೋಟಿ ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ೨ ಕೋಟಿ ಕೋಡಲಾಗುತ್ತಿದೆ.

– ಕೇಂದ್ರದ ೧೩ನೇ ಹಣಕಾಸಿನ ಶಿಫಾರಸ್ಸಿಗೆ ಅನುಗುಣವಾಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ೬೯೨ಕೋಟಿ, ರೂ.ಗಳನ್ನು ನಿರ್ವಹಣಾ ಅನುದಾನವಾಗಿ ೨೦೧೨ರಲ್ಲಿ ಬಿಡುಗಡೆ ಮಾಡಲಾಯಿತು. (The Hindu ಏಪ್ರಿಲ್-೨೪-೨೦೧೨)

– ಪಿ.ಡಿ.ಓ.ಗಳ ನೇಮಕ.

೭೩ನೇ ತಿದ್ದುಪಡಿ ಕಾಯ್ದೆಯಲ್ಲಿ ಅನೇಕ ಲೋಪ-ದೋಷಗಳಿವೆ. ೧೧ನೇ ಅನುಸೂಚಿಯಲ್ಲಿ ನಮೂದಿಸಿರುವ ವಿಷಯಗಳ ಮೇಲೆ ಸ್ಥಳೀಯ ಸರ್ಕಾರಿಗಳು ಕಾನೂನು ಮಾಡಿ ಜಾರಿಗೆ ತರಬೇಕಾದರೆ ಹೆಚ್ಚು ಹಣಕಾಸು ಅಧಿಕಾರವನ್ನು ಪಡೆದಿಲ್ಲ. ರಾಜ್ಯ ಸರ್ಕಾರಗಳೂ ಇವುಗಳಿಗೆ ಸಾಕಷ್ಟು ಹಣಕಾಸು ಸ್ವಾಯತ್ತತೆಯನ್ನು ಕೊಡಲು ಸಮರ್ಥವಾಗಿಲ್ಲ. ಪಂಚಾಯತ್ ರಾಜ್ ಸಂಸ್ಥೆಗಳ ಅಸಮರ್ಪಕ ಕಾರ್ಯನಿರ್ವಹಣೆಗೆ ಕೆಳಕಂಡವು ಮುಖ್ಯ ಕಾರಣಗಳಾಗಿವೆ.

೧) ಗ್ರಾಮೀಣ ಜನರ ಅನಕ್ಷರತೆ, ನಿರಾಸಕ್ತಿ ಮತ್ತು ರಾಜಕೀಯ ಪ್ರಜ್ಞೆ ಶೂನ್ಯತೆ.

೨) ಸ್ವಾರ್ಥ ಹಾಗೂ ಸಂಕುಚಿತ ಮನೋಭಾವನೆಯ ನಾಯಕತ್ವ

೩) ಜಾತಿ ಮತ್ತು ಧರ್ಮಗಳ ಪ್ರಭಾವ.

ಪಂಚಾಯತ್ ರಾಜ್ ಪದ್ಧತಿ ಅಸ್ತಿತ್ವಕ್ಕೆ ಬಂದ ಮೇಲೆ ದೇಶದಲ್ಲಿ ಸಾರ್ವಜನಿಕ ಅಭಿಪ್ರಾಯ ರೂಪಗೊಳ್ಳುತ್ತಿದೆ ಮತ್ತು ಪ್ರಜೆಗಳು ರಾಜಕೀಯ ಪ್ರಜ್ಞೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ. ಗ್ರಾಮೀಣ/ಗ್ರಾಮಗಳು ಅಭಿವೃದ್ಧಿಯಾದಾಗ ಮಾತ್ರ ದೇಶ ಅಭಿವೃದ್ಧಿಯಾಗಲು ಸಾಧ್ಯ.

ಸಂವಿಧಾನದ ೭೩ನೇ ತಿದ್ದುಪಡಿಗನುಗುಣವಾಗಿ ಕರ್ನಾಟಕ ಸರ್ಕಾರವು ೧೯೯೩ರಲ್ಲಿ ಪಂಚಾಯತ್ ಕಾಯ್ದೆಯನ್ನು ತಕ್ಷಣದಿಂದ ಜಾರಿಗೆ ತಂದು, ಪ್ರಜಾಸತ್ತಾತ್ಮಕನುಸಾರವಾಗಿ ಕೆಳಹಂತದ ಸರ್ಕಾರದ ಸಂಸ್ಥೆಗಳಿಗೆ ಅಭಿವೃದ್ಧಿ ಯೋಜನೆಗಳು ಪೂರಕವಾಗಿವೆಯೇ,

ಸ್ಥಳೀಯ ಜನರ ಹಿತಾಸಕ್ತಿಗಳಿಗೆ ಆದ್ಯತೆ ನೀಡಿ, ಎಲ್ಲ ವರ್ಗದ ಜನರಿಗೆ ಮಹಿಳೆಯರಿಗೆ, ಆಡಳಿತದಲ್ಲಿ ಭಾಗವಹಿಸುವಂತೆ ಮಾಡುವುದು ಮತ್ತು ಸಾಮಾಜಿಕ ನ್ಯಾಯಾವನ್ನು ಒದಗಿಸುವುದು ಈ ನಿಟ್ಟಿನಲ್ಲಿಯೇ ಯೋಜನೆಗಳು ಪರಿಣಾಮಾತ್ಮಕವಾಗಿ ಅನುಷ್ಠಾನಗೊಳ್ಳುತ್ತಿವೆಂದು ಅಧ್ಯಯನದ ಮೂಲಕ ತಿಳಿಯಲಾಗುವುದು.

ಸಂವಿಧಾನದ ೪೦ನೇಯ ವಿಧಿಯು ಗ್ರಾಮ ಪಂಚಾಯಿತಿಗಳನ್ನು ಸ್ಥಾಪಿಸಬೇಕೆಂದು ಸೂಚಿಸಿತು. ವಿವಿಧ ರಾಜ್ಯಗಳು ಸ್ವ-ಸರ್ಕಾರಗಳು ಕಾಯ್ದೆಗಳನ್ನು ಅಂಗೀಕರಿಸಿದವು. ೧೯೫೧ರಲ್ಲಿ ೮೩,೦೦೦ ಪಂಚಾಯಿತಿಗಳು ಮತ್ತು ೧೯೫೪ರಲ್ಲಿ ೯೮,೦೦೦ ಪಂಚಾಯಿತಿಗಳು (ರಾಷ್ಟ್ರದ ಅರ್ಧ ಗ್ರಾಮಗಳನ್ನು ಒಳಗೊಂಡಂತೆ) ಅಸ್ತಿತ್ವದಲ್ಲಿದ್ದವು. ಡಾ. ಕೆ.ವಿ. ಕಾಟ್ಜು ಅವರ ಅಧ್ಯಕ್ಷತೆಯ **"ಕ್ರಾಂಗ್ರೆಸ್ಸಿನ ಗ್ರಾಮ ಪಂಚಾಯಿತಿ ಸಮಿತಿಯು"** ೧೯೫೪ರಲ್ಲಿ ಪ್ರಗತಿಗಾಗಿ ವರದಿಯನ್ನು ಸಲ್ಲಿಸಿತು. ೧೯೫೨ರಲ್ಲಿ ನೆಹರೂ ಅವರು ಚಾಲನೆ ಕೊಟ್ಟಿದ್ದ ಸಮುದಾಯ ಅಭಿವೃದ್ದಿ ಕಾರ್ಯಕ್ರಮದ ಮುಂದ ಪ್ರಗತಿಗೆ ಗ್ರಾಮೀಣ ಜನರನ್ನು ಸ್ಥಳೀಯ ಆಡಳಿತದಲ್ಲಿ ಸಕ್ರಿಯರನ್ನಾಗಿ ಮಾಡದಿರುವುದೇ ಒಂದು ಪ್ರಮುಖ ಕಾರಣ, ಎಂಬ ಭಾವನೆ ಇದ್ದಿತು. ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಸಮಸ್ಯೆಯನ್ನು ಅಭ್ಯಸಿಸಿ, ವರದಿ ಮಾಡಲು ನೇಮಿಸಲ್ಪಟ್ಟಿದ್ದ ಬಲವಂತರಾಯ್ ಮೆಹ್ತಾ ಅಧ್ಯಯನದ ತಂಡವು ಮೂರು ಹಂತದ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿಸಲ್ಪಟ್ಟವು. ಈ ವರದಿಗನುಗುಣವಾಗಿ ೧೯೫೯ರಲ್ಲಿ ರಾಜಸ್ಥಾನ ಚುನಾಯಿತ ಪಂಚಾಯಿತಿಗಳನ್ನು ಸ್ಥಾಪಿಸಿತು.

ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಸ್ಥಾನ ಕಲ್ಪಿಸಿಕೊಡುವ ದೃಷ್ಟಿಯಿಂದ ಪಿ.ವಿ. ನರಸಿಂಹರಾವ್‌ರವರು ೭೩ ಮತ್ತು ೭೪ಸಂವಿಧಾನದ ತಿದ್ದುಪಡಿ ೧೯೯೨ ಡಿಸೆಂಬರ್ ೨೨ ರಂದು ಅಂಗೀಕಾರ ಪಡೆದು ೧೯೯೩ ಎಪ್ರಿಲ್ ೨೦ ರಂದು ರಾಷ್ಟ್ರಪತಿಗಳ ಸಹಿಯೊಂದಿಗೆ ಜಾರಿಗೆ ಬಂದಿತ್ತು. ಕರ್ನಾಟಕದಲ್ಲಿ ಯಶಸ್ಸು ಕಂಡಿದೆ. ಕಾಲ-ಕಾಲಕ್ಕೆ ತಕ್ಕಂತೆ ಪಡೆದ ಆಡಳಿತ ಅನುಭವ ಮತ್ತು ಬದಲಾಗುತ್ತಿರುವ ಪರಿಸ್ಥಿತಿಗೆ ಅನುಸಾರವಾಗಿ ಇದಕ್ಕೆ ಸಾಕಷ್ಟು ಬದಲಾವಣೆ ತಂದು ಆಡಳಿತದಲ್ಲಿ ಹೊಣೆಗಾರಿಕೆ ಮತ್ತು ಪಾರದರ್ಶಕತೆ ಒತ್ತುಕೊಡಲಾಗುತ್ತಿದೆ.

## II. ಅಧ್ಯಯನದ ಉದ್ದೇಶಗಳು

೧) ಗ್ರಾಮೀಣ ಮಟ್ಟದಲ್ಲಿ ಮೂರು ಹಂತದ ಚುನಾಯಿತ ಆಡಳಿತ ವ್ಯವಸ್ಥೆಗೆ ಸಂವಿಧಾನ ಬದ್ಧತೆಯ ಅವಕಾಶ ಕಲ್ಪಿಸಿಕೊಡುವುದು.

೨) ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ ನೀತಿಯನ್ನು ಪ್ರಚುರಪಡಿಸುವುದು.

೩) ಗ್ರಾಮೀಣ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ೧/೨ ರಷ್ಟು ಸ್ಥಾನಗಳನ್ನು ಮೀಸಲಿರಿಸುವ ಉದ್ದೇಶ ಹೊಂದಿದೆ.

೪) ಪಂಚಾಯಿತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಆಯ್ಕೆಯ ವಿಚಾರದಲ್ಲಿ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ ಮತ್ತು ಹಿಂದೂಳಿದ ವರ್ಗದವರಿಗೆ ಮೀಸಲು ನಿಯಮವನ್ನು ಕಡ್ಡಾಯವಾಗಿ ಪಾಲಿಸುವುದು.

೫) ಐದು ವರ್ಷಕ್ಕೊಮ್ಮೆ ಕಡ್ಡಾಯವಾಗಿ ಚುನಾವಣೆ ನಡೆಸುವುದು ಮಧ್ಯಂತರ ಅವಧಿಯಲ್ಲಿ ಸ್ಥೀರತೆ ಕಳೆದುಕೊಂಡ ಪಂಚಾಯಿತಿಗಳಿಗೆ ಆರು ತಿಂಗಳೊಳಗೆ ಚುನಾವಣೆ ನಡೆಸಬೇಕೆಂಬುದನ್ನು ಕಾತರಿಪಡಿಸುವುದು.

೬) ರಾಜ್ಯ ನಿರ್ದೇಶಕ ತತ್ವಗಳ ಅನ್ವಯ ೪೦ನೇ ವಿಧಿಯ ಉದ್ದೇಶವನ್ನು ಗ್ರಾಮ ಪಂಚಾಯಿತಿಯನ್ನು ರಚಿಸಿ ಅವುಗಳಿಗೆ ಅವಶ್ಯಕ ಅಧಿಕಾರ ಮತ್ತು ಅಧಿಕಾರಯುಕ್ತತೆಯನ್ನು ನೀಡಿ ಸ್ವಯಂ ಸರ್ಕಾರಗಳ ಘಟಕಗಳಾಗಿ ಕಾರ್ಯನಿರ್ವಹಿಸುವಂತೆ ಮಾಡುವುದು ಖಾತರಿ ಪಡಿಸುವುದು.

೭) ಅಧಿಕಾರ ವಿಭಜನಾ ಸಿದ್ಧಾಂತದ ಆಧಾರದ ಮೇಲೆ ತೆರಿಗೆಯನ್ನು ವಿಧಿಸುವ, ಸಂಗ್ರಹಿಸುವ, ವ್ಯಯಮಾಡುವ ಅಧಿಕಾರವನ್ನು ಪಂಚಾಯಿತಿಗಳಲ್ಲಿ ನೀಡುವುದು.

೮) ಗ್ರಾಮೀಣ ಪ್ರದೇಶದ ಆಡಳಿತ ವ್ಯವಸ್ಥೆಯು ಸಶಕ್ತತೆಗಾಗಿ ಹಣಕಾಸು ಆಯೋಗದ ರಚನೆಗೆ ಅವಕಾಶ ನೀಡಿ ಆರ್ಥಿಕ ಪರಿಸ್ಥಿತಿ ಸುಧಾರಿಸುವುದು. ಹೀಗೆ ಮೇಲ್ಕಂಡ ಉದ್ದೇಶಗಳನ್ನು ಹೊಂದಿದೆ.

**೩.೭ ಕರ್ನಾಟಕದಲ್ಲಿ ೧೯೯೩ರ ಕಾಯ್ದೆಯ ಸುಧಾರಣೆಗಳು**

ಭಾರತ ಸಂವಿಧಾನದ ೭೩ನೇ ತಿದ್ದುಪಡಿಯಿಂದಾಗಿ ೧೯೮೩ರ ಕಾಯ್ದೆಯು ನಿರಸನಗೊಂಡು ಅದರ ಜಾಗದಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩ ೧೦-೦೫-೧೯೯೩ ರಿಂದ ಜಾರಿಗೆ ಬಂದಿದೆ ಇದು ೩೨೧ ವಿಧಿಗಳು ಮತ್ತು ನಾಲ್ಕು ಅನುಸೂಚಿಗಳನ್ನು ಒಳಗೊಂಡಿದೆ. ಇದರ ಪ್ರಕಾರ ಗ್ರಾಮೀಣ ಸ್ಥಳೀಯ ಸಂಸ್ಥೆಗಳೆಂದರೆ

೧) ಗ್ರಾಮ ಪಂಚಾಯಿತಿ

೨) ತಾಲ್ಲೂಕು ಪಂಚಾಯಿತಿ

೩) ಜಿಲ್ಲಾ ಪಂಚಾಯಿತಿ

೪) ಗ್ರಾಮ ಸಭೆ

**೧) ಗ್ರಾಮ ಪಂಚಾಯಿತಿ**

**ಎ) ರಚನೆ:** ಕರ್ನಾಟಕದಲ್ಲಿ, ೫ ಸಾವಿರ ಪ್ರಜಾ ಸಂಖ್ಯೆಗಿಂತ ಕಡಿಮೆ ಇಲ್ಲದ ಮತ್ತೆ, ೭ ಸಾವಿರ ಪ್ರಜಾಸಂಖ್ಯೆ ಮೀರದ ಒಂದು ಗ್ರಾಮ ಅಥವಾ ಗ್ರಾಮಗಳ ಗುಂಪನ್ನು

ಒಳಗೊಂಡಿರುವ ಯಾವುದೇ ಪ್ರದೇಶವನ್ನು ಒಂದು ಪಂಚಾಯಿತಿ ಪ್ರದೇಶ ಎಂದು ಘೋಷಿಸುವ ಅಧಿಕಾರವನ್ನು ಜಿಲ್ಲಾಧಿಕಾರಿಯವರು ಪಡೆದಿದ್ದಾರೆ. ಈ ನಿಯಮಕ್ಕೆ ಹಲವಾರು ವಿನಾಯತಿಗಳೂ ಇವೆ. ಮಂಡಲ ಪಂಚಾಯಿತಿಯ ಸದಸ್ಯರ ಸಂಖ್ಯೆಯು ಅದರ ಜನಸಂಖ್ಯೆಗೆ ಅನುಗುಣವಾಗಿರುತ್ತದೆ. ಕರ್ನಾಟದಲ್ಲಿ ಒಟ್ಟು ೫,೬೪೧ ಗ್ರಾಮ ಪಂಚಾಯಿತಿಗಳಿವೆ. ೪೦೦ ಜನಸಂಖ್ಯೆಗೆ ಒಬ್ಬೊಬ್ಬರಂತೆ ಸ್ಥಾನ ನಿಗಧಿ ಮಾಡಲಾಗಿದೆ. ಒಟ್ಟು ೮೦,೬೨೭ ಗ್ರಾಮ ಪಂಚಾಯಿತಿ ಸದಸ್ಯರಿದ್ದಾರೆ.

**ಬಿ) ಅಧ್ಯಕ್ಷ/ಉಪಾಧ್ಯಕ್ಷರು:** ಪ್ರತಿ ಗ್ರಾಮ ಪಂಚಾಯ್ತಿಯೂ ಗ್ರಾಮ ಪಂಚಾಯ್ತಿ ಅಧ್ಯಕ್ಷರು, ಭಾಗಶಃ ಒಳಗೊಳ್ಳುವ ಚುನಾವಣಾ ಕ್ಷೇತ್ರವನ್ನು ಪ್ರತಿನಿಧಿಸುವ ಲೋಕಸಭಾ ಸದಸ್ಯರ, ರಾಜ್ಯ ವಿಧಾನ ಸಭಾ ಮತ್ತು ವಿಧಾನ ಪರಿಷತ್ ಸದಸ್ಯರು, ಇದರ ಸಹ ಸದಸ್ಯರಾಗಿರುತ್ತಾರೆ.

ಎರಡು ತಿಂಗಳಿಗೊಮ್ಮೆಯಾದರೂ ಗ್ರಾಮ ಪಂಚಾಯತಿಯ ಸಭೆ ಸೇರಬೇಕು. ಜೊತೆಗೆ ವಿಶೇಷ ಸಭೆಗಳನ್ನು ಕರೆಯಬಹುದ. ಸಭೆಯ ಕೋರಂ, ಒಟ್ಟು ಸದಸ್ಯರ ಮೂರನೇ ಒಂದರಷ್ಟು ಅಧ್ಯಕ್ಷರು, ಅವರ ಗೈರು ಹಾಜರಿಯಲ್ಲಿ ಉಪಾಧ್ಯಕ್ಷರು ಸಭೆಯ ಅಧ್ಯಕ್ಷತೆ ವಹಿಸುತ್ತಾರೆ. ಅಧ್ಯಕ್ಷರು ಗ್ರಾಮ ಪಂಚಾಯಿತಿಯ ಅಧಿಕಾರಿಗಳ ಕಾರ್ಯದ ಮೇಲ್ವಿಚಾರಣೆ ನೋಡಿಕೊಳ್ಳುತ್ತಾರೆ. ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನು ಗ್ರಾಮ ಪಂಚಾಯಿತಿಯ ಒಟ್ಟು ಸದಸ್ಯರ ಪೈಕಿ ೨೧೩ ಬಹುಮತದ ಮೂಲಕ ಅವಿಶಾಸ ನಿರ್ಣಯಿಸಿ ಅಧಿಕಾರದಿಂದ ಪದಚ್ಯುತಿಗೊಳಿಸಬಹುದು.

**ಸಿ) ಕಾರ್ಯದರ್ಶಿ:** ಪ್ರತಿಯೊಂದು ಗ್ರಾಮ ಪಂಚಾಯಿತಿಯು ಒಬ್ಬ ಪೂರ್ಣಕಾಲಿಕ ಕಾರ್ಯದರ್ಶಿಯನ್ನು ಹೊಂದಿರುತ್ತದೆ. ಅವನು ಸರ್ಕಾರಿ ಅಧಿಕಾರಿಯಾಗಿರುತ್ತಾನೆ. ಆತನ ವೇತನ ಜಿಲ್ಲಾ ಪರಿಷತ್ತಿನ ನಿಧಿಯಿಂದ ಕೊಡಲಾಗುತ್ತದೆ.

**ಡಿ) ಅರ್ಹತೆಗಳು:** ಉಡುಪಿ, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ೨,೫೦೦೦ ಜನಸಂಖ್ಯೆ ಇರಬೇಕೆಂದು ತಿಳಿಸಿದೆ. ೫ ರಿಂದ ೭ ಸಾವಿರ ಜನಸಂಖ್ಯೆಯ ಗ್ರಾಮ ಅಥವಾ ಗ್ರಾಮಗಳ ಗುಂಪು ಪಂಚಾಯಿತಿ ರಚಿಸುವುದಾಗಿದ್ದರೂ ಬೆಳಗಾವಿ, ಕೊಡಗು, ಉಡಪಿ ಜಿಲ್ಲೆಗಳಲ್ಲಿ/ಗಳಿಗೆ ವಿಶೇಷ ರಿಯಾಯಿತಿ ನೀಡಲಾಗಿದೆ. ೨೪೩ ಎಫ್ ಪ್ರಕಾರ ೨೧ ವರ್ಷಕ್ಕಿಂತ ಕಡಿಮೆ ವಯಸ್ಸಿನವರು ಪಂಚಾಯಿತಿ ಚುನಾವಣೆಯಲ್ಲಿ ಸ್ಪರ್ಧಿಸುವಂತಿಲ್ಲ. ಸಂಬಂಧಪಟ್ಟ ರಾಜ್ಯದ ವಿಧಾನ ಮಂಡಲದ ಚುನಾವಣೆಗಳ ಉದ್ದೇಶಗಳಿಗಾಗಿ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅನ್ವಯ ಪಂಚಾಯ್ತಿ ಸದಸ್ಯರನ್ನು ಅನರ್ಹಗೊಳಿಸಬಹುದು. ಇವರ ಬಗ್ಗೆ ಪ್ರಶ್ನೆಗಳು ಉದ್ಭವಿಸಿದರೆ ರಾಜ್ಯ ವಿಧಾನ ಸಭೆಯ

ಕಾಯ್ದೆಯ ಮೂಲಕ ಉಪಬಂಧಿಸಬಹುದಾದ ಪ್ರಾಧಿಕಾರಕ್ಕೆ ಕಳುಹಿಸಬಹುದಾಗಿದೆ. ಸಾಮಾನ್ಯವಾಗಿ ಚುನಾವಣೆಗೆ ಸ್ಪರ್ಧಿಸುವವರ ಹೆಸರು ಮತದಾರರ ಪಟ್ಟಿಯಲ್ಲಿದ್ದು ಅವರು ಅಲ್ಲಿನ ನಿವಾಸಿಗಳಾಗಿರಬೇಕೆಂಬ ನಿಯಮವಿದೆ. ಇದು ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿಗಳಿಗೂ ಅನ್ವಯವಾಗುತ್ತದೆ.

**ಇ) ಅವಧಿ:** ಅನುಚ್ಛೇದ ೨೪೩-ಇ ಅನ್ವಯ ಪ್ರತಿಯೊಂದು ಪಂಚಾಯತಿಯೂ ಚುನಾಯಿತ ಸದಸ್ಯರ ಮೊದಲು ಸಭೆಯ ದಿನಾಂಕ ದಿಂದ ೫ ವರ್ಷಗಳ ಅವಧಿಯನ್ನು ಹೊಂದಿರುತ್ತಾರೆ. ಈ ಮಧ್ಯೆ ಅವಧಿಗಿನ್ನ ಮುನ್ನ ವಿಸರ್ಜನೆಗೊಂಡರೆ ೬ ತಿಂಗಳೊಳಗೆ ಹೊಸದಾಗಿ ಚುನಾವಣೆ ನಡೆಯಬೇಕಿದೆ. ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಅವಧಿ ೨೦ ತಿಂಗಳಿದ್ದು, ಎಲ್ಲಾ ವರ್ಗದವರಿಗೂ ಅಧಿಕಾರದ ಅವಧಿಯನ್ನು ರಾಜ್ಯ ಸರ್ಕಾರ ತನ್ನ ಕಾಯ್ದೆಯ ಮೂಲಕ ನಿಗಧಿಪಡಿಸಿದೆ ಆದರೆ ಎಲ್ಲಾ ವರ್ಗದ ಜನರಿಗೂ ಅಧಿಕಾರ ನೀಡಬೇಕೆಂದು ಈ ಬದಲಾವಣೆ ಮಾಡಲಾಗಿದೆ.

**ಎಫ್) ಚುನಾವಣೆ:** ೨೪೩-ಅ- ವಿಧಿನ್ವಯ ೩ ಹಂತದ ಚುನಾವಣೆ ವಿಧಾನಕ್ಕೆ ಸಂಬಂಧಿಸಿದಂತೆ ರಾಜ್ಯ ಶಾಸಕಾಂಗ ಕಾಯ್ದೆ ರೂಪಿಸಬಹುದಾಗಿದೆ, ಗ್ರಾಮ, ತಾಲೂಕು, ಜಿಲ್ಲಾ ಮಟ್ಟದಲ್ಲಿ ನೇರ ಚುನಾವಣೆಗಳಿಂದ ಚುನಾಯಿತರಾದ ಸದಸ್ಯರ ಮೂಲಕವೇ ಸಂಬಂಧಿಸಿದಂತೆ ಮತದಾರರ ಪಟ್ಟಿ ತಯಾರಿಕೆ-ನಿರ್ದೇಶನ ಮತ್ತು ನಿಯಂತ್ರಣವೆಲ್ಲಾ ರಾಜ್ಯ ತಯಾರಿಕೆ- ನಿರ್ದೇಶನ ಮತ್ತು ನಿಯಂತ್ರಣವೆಲ್ಲಾ ರಾಜ್ಯ ಚುನಾವಣಾ ಆಯೋಗಕ್ಕೆ ಸೇರಿಸಲಾಗಿದೆ.

**ಜಿ) ಸ್ಥಾನ ಮೀಸಲಾತಿ:** ೨೪೩-ಆ- ಅನುಚ್ಛೇದದನ್ವಯ ಪ್ರತಿಯೊಂದು ಹಂತದ ಪಂಚಾಯ್ತಿಯಲ್ಲಿಯೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಅಭ್ಯರ್ಥಿಗಳಿಗೆ ಅವರ ಜನಸಂಖ್ಯೆಗೆ ಅನುಗುಣವಾಗಿ ಕೆಲವು ಸ್ಥಾನಗಳನ್ನು ಮೀಸಲಿರಸಬೇಕು/ಬೇಕಿದೆ. ಎಲ್ಲಾ ಹಂತಗಳ ಪಂಚಾಯ್ತಿ ಚುನಾವಣೆಗಳಲ್ಲೂ ಸದಸ್ಯತ್ವ/ಅಧ್ಯಕ್ಷ/ಉಪಾಧ್ಯಕ್ಷರ ಹುದ್ದೆಗಳಿಗೆ, ಹಿಂದೂಳಿದ ಉಪಾಧ್ಯಕ್ಷರ ಹುದ್ದೆಗಳಿಗೆ ಪರಿಶಿಷ್ಟ ಜಾತಿ/ಪಂಗಡಗಳಿಗೆ ಮಹಿಳೆಯರಿಗೆ ಅವಕಾಶ ನೀಡಬೇಕಿದೆ. ಸಾಮಾಜಿಕ ಸಮಾನತೆ ಮುಖ್ಯವಾಗಿಟ್ಟುಕೊಂಡು ನಿಮ್ಮ ವರ್ಗದವರಲ್ಲಿ ಆತ್ಮವಿಶ್ವಾಸ ಮೂಡಿಸುವಲ್ಲಿ ಕನಿಷ್ಠ ಪಕ್ಷ ಒಬ್ಬಳು ಸ್ತ್ರೀಯಾದರೂ ಪರಿಶಿಷ್ಟ ಜಾತಿ-ವರ್ಗಕ್ಕೆ ಸೇರಿದವರಾಗಿರಬೇಕೆಂಬುದು ಕಾಯ್ದೆಯ ಆಶಯವಾಗಿದೆ.

**ಹೆಚ್) ಮೀಸಲಾತಿ ಸಾಧನೆಗಳು**

೧೭೯೧೮ - ಗ್ರಾಮ ಪಂಚಾಯಿತಿ ಸದಸ್ಯರು, ಪರಿಶಿಷ್ಟ ಜಾತಿ -೨೨%

೭೫೭೫- ಸದಸ್ಯರು ಪರಿಶಿಷ್ಟ ವರ್ಗ-೯.೪%

೨೬೮೨೮- ಹಿಂದೂಳಿದ ವರ್ಗದ ಸದಸ್ಯರು -೪೦%

೨೮೩೦೬- ಸಾಮಾನ್ಯ ವರ್ಗದ ಸದಸ್ಯರು-೪೦%

ಒಟ್ಟು ೫೬೭೫ ಅಧ್ಯಕ್ಷರು

೧೦೩೦- ಪರಿಶಿಷ್ಟ ಜಾತಿ

೨೯೭- ಪರಿಶಿಷ್ಟ ವರ್ಗ

೧೮೮೦-ಹಿಂದೂಳಿದ ವರ್ಗ

೨೪೬೨-ಸಾಮಾನ್ಯ ವರ್ಗ

**ಮೀಸಲಾತಿ ಮತ್ತು ಮಹಿಳೆ** ಗ್ರಾಮ ಪಂಚಾಯ್ತಿಗಳಲ್ಲಿ ೩೫, ೩೦೫ ಮಹಿಳಾ ಸದಸ್ಯರು ೪೩. ೮% ೧,೮೮೦ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಹಿಂದೂಳಿದ ವರ್ಗಕ್ಕೆ ಸೇರಿದ್ದು ಅವರ ಪೈಕಿ ೬೩೬ ಮಂದಿ ಮಹಿಳೆಯರು=೩೩.೩% ೭,೩೭೩ ಪರಿಶಿಷ್ಟ ಜಾತಿ ಸದಸ್ಯರು=೪೧% ೫,೯೩೩ ಪರಿಶಿಷ್ಟ ಪಂಗಡದ ಸದಸ್ಯರು= ೭೬% ೧೧,೩೨೫ ಹಿಂದುಳಿದ ವರ್ಗದ ಮಹಿಳಾ ಸದಸ್ಯರು=೪೦% ೧೧,೨೭೮ ಸಾಮಾನ್ಯ ವರ್ಗದ ಮಹಿಳಾ ಸದಸ್ಯಯರು =೪೦%

**ಐ) ಅಧಿವೇಶನ:** ಪ್ರಕರಣ ೫೦ ರ ಪ್ರಕಾರ ಪಂಚಾಯತ್ ದಕ್ಷ ಕಾರ್ಯ ನಿರ್ವಹಣೆಗಾಗಿ ತಿಂಗಳಿಗೊಮ್ಮೆ ಸಮಾನ್ಯ ಸಭೆ ನಡೆಯಬೇಕು, ೧/೩ ಭಾಗದಷ್ಟು ಜನ ಸದಸ್ಯರು ೧೫ ದಿನದೊಳಗಿನ ವಿಶೇಷ ಅಧಿವೇಶನ ಕರೆಯಬೇಕಾಗಿದೆ.ಮ ೧/೩ರಲ್ಲಿ ಕೋರಂ ಇಲ್ಲದಿದ್ದರೆ ಸಭೆ ಮುಂದೂಡಲಾಗುವುದು.

**ಜೆ) ಹಣಕಾಸು:** ೨೪೩-ಊ- ವಿಧಿಯು ಗ್ರಾಮ ಪಂಚಾಯ್ತಿಗಳ ಹಣಕಾಸಿನ ಮೂಲಗಳನ್ನು ಕುರಿತು ವಿವರಿಸುತ್ತಿದೆ. ಅವೆಂದರೆ-ಕಟ್ಟಡ, ನೀರು, ಮನರಂಜನೆ, ಭೂಕಂದಾಯ, ವಿದ್ಯೂತ್, ಇನ್ನಿತರ ಬಾಬ್ತುಗಳ ಮೇಲೆ ವಿಧಿಸುವ ತೆರಿಗೆ-ಜವಾಹರ್ ರೋಜಗಾರ್ ಯೋಜನೆ ಅಡಿಯಲ್ಲಿ ನೀಡುವ ೧.೫ ರಿಂದ ೨.೫ ಲಕ್ಷದವರೆಗೆ ಹಣ ಜೊತೆಗೆ ಸರ್ಕಾರ ನೀಡುವ ವಾರ್ಷಿಕ ೫ ಲಕ್ಷ ರೂ. ಅನುಧಾನ ಜೊತೆಗೆ ೧೧ನೇ ಹಣಕಾಸು ಆಯೋಗ ಗೊತ್ತುಮಾಡಿದ ಪ್ರಕಾರ ಬರುವ ಹಣ, ನಿರ್ಮಲ ಕರ್ನಾಟಕ ಯೋಜನೆ ವ್ಯಾಪ್ತಿ ಬರುವ ನೆರವು-ಇದರ ಆರ್ಥಿಕ ಮೂಲಗಳಾಗಿವೆ. ೨೪೩-೧ನೇ ವಿಧಿಯು ಒಂದು ಹಣಕಾಸು ಆಯೋಗ ರಚಿಸಲು ರಾಜ್ಯಪಾಲರಿಗೆ ಸೂಚಿಸಿದೆ, ಪಂಚಾಯಿತಿಗಳ ಹಣಕಾಸು ಪರಿಸ್ಥಿತಿ ಪರಿಶೀಲನೆ ಇದು ಶಿಫಾರಸ್ಸು ಮಾಡುವುದಾದರೂ ೨೪೩-ಎ- ಲೆಕ್ಕಪತ್ರ ತಪಾಸಣೆ ಬಗ್ಗೆ ವಿವರಣೆ ನೀಡಿದೆ.

**ಕೆ) ಸಿಬ್ಬಂದಿ :-** ಹಿಂದಿನ ಮಂಡಲ ಪಂಚಾಯಿತಿಗಳಲ್ಲಿದ್ದಂತಯೇ ಈ ವ್ಯವಸ್ಥೆ

ಅತಿಕ್ರಮಣವನ್ನು ತೊಡೆದುಹಾಕುವುದು. ೫) ಸ್ವಯಂಸೇವೆಯನ್ನು ಸಂಘಟಿಸುವುದು ಮತ್ತು ಸಮುದಾಯ ಕಾರ್ಯಗಳಿಗಾಗಿ ವಂತಿಗೆ ನೀಡುವುದು. ೬) ಗ್ರಾಮಗಳ ಅತ್ಯಾವಶ್ಯಕ ಅಂಕಿ ಅಂಶಗಳನ್ನು ಇಟ್ಟುಕೊಳ್ಳುವುದು.

**೨) ಕೃಷಿ ವಿಸ್ತರಣೆ ಸೇರಿದಂತೆ ಕೃಷಿ:** ೧) ಕೃಷಿ ಮತ್ತು ತೋಟಗಾರಿಕೆಗೆ ಉತ್ತೇಜನ ಮತ್ತು ಅಭಿವೃದ್ಧಿ ೨) ಬಂಜರು ಭೂಮಿ ಅಭಿವೃದ್ಧಿ ೩) ಹುಲ್ಲುಗಾವಲುಗಳ ಅಭಿವೃದ್ಧಿ ಮತ್ತು ನಿರ್ವಹಣೆ ಮತ್ತು ಅವುಗಳ ಅನಧಿಕೃತ ಮತ್ತು ಬಳಕೆಯನ್ನು ತಡೆಯುವುದು.

**೩) ಪಶುಸಂಗೋಪನೆ, ಹೈನುಗಾರಿಕೆ ಮತ್ತು ಕೋಳಿ ಸಾಕಣೆ:** ೧) ದನಕರುಗಳ ಕೋಳಿ ಮತ್ತು ಇತರ ಜಾನುವಾರುಗಳ ತಳಿ ಸಂವರ್ಧನೆ. ೨) ಹೈನುಗಾರಿಕೆ, ಕೋಳಿ ಸಾಕಣೆ ಮತ್ತು ಹಂದಿ ಸಾಕಣೆಗೆ ಉತ್ತೇಜನ. ೩) ಹುಲ್ಲುಗಾವಲು ಅಭಿವೃದ್ಧಿ.

**೪) ಮೀನುಗಾರಿಕೆ:** ಗ್ರಾಮದಲ್ಲಿ ಮೀನುಗಾರಿಕೆ ಅಭಿವೃದ್ಧಿ.

**೫) ಸಾಮಾಜಿಕ ಮತ್ತು ಹೊಲಗದ್ದೆ ಅರಣ್ಯ ನಿರ್ಮಾಣ, ಲಘು ಅರಣ್ಯೋತ್ಪನ್ನ, ಸೌದೆ ಮತ್ತು ಮೇವು:** ೧) ತನ್ನ ನಿಯಂತ್ರಣದಲ್ಲಿರುವ ರಸ್ತೆಗಳ ಪಕ್ಕದಲ್ಲಿ ಮತ್ತು ಇತರ ಸಾರ್ವಜನಿಕ ಭೂಮಿಗಳಲ್ಲಿ ಮರಗಳನ್ನು ನೆಡುವುದು ಮತ್ತು ಸಂರಕ್ಷಿಸುವುದು ೨) ಸೌದೆ ನೆಡುತೋಪುಗಳು ಮತ್ತು ಮೇವು ಅಭಿವೃದ್ಧಿ ೩) ಹೊಲಗದ್ದೆ ಅರಣ್ಯ ನಿರ್ಮಾಣಕ್ಕೆ ಉತ್ತೇಜನ ೪) ಸಾಮಾಜಿಕ ಅರಣ್ಯ ನಿರ್ಮಾಣದ ಅಭಿವೃದ್ಧಿ.

**೬) ಖಾದಿ, ಗ್ರಾಮ ಮತ್ತು ಗುಡಿ ಕೈಗಾರಿಕೆಗಳು:** ೧) ಗ್ರಾಮೀಣ ಮತ್ತು ಗುಡಿ ಕೈಗಾರಿಕೆಗಳಿಗೆ ಉತ್ತೇಜನ ೨) ಗ್ರಾಮೀಣ ಪ್ರದೇಶಗಳ ಪ್ರಯೋಜನಕ್ಕಾಗಿ ಸಮ್ಮೇಳನಗಳು, ವಿಚಾರ ಸಂಕಿರಣಗಳು ಮತ್ತು ತರಬೇತಿ ಕಾರ್ಯಕ್ರಮಗಳು, ಕೃಷಿ ಮತ್ತು ಕೈಗಾರಿಕಾ ಪ್ರದರ್ಶನಗಳನ್ನು ಏರ್ಪಡಿಸುವುದು.

**೭) ಗ್ರಾಮೀಣ ಗೃಹನಿರ್ಮಾಣ:** ೧) ಗ್ರಾಮ ಠಾಣೆಯ ಪರಿಮಿತಿಯೊಳಗೆ ಮನೆ ನಿವೇಶನಗಳ ಹಂಚಿಕೆ. ೨) ಮನೆಗಳು, ನಿವೇಶನಗಳು, ಮತ್ತು ಇತರೇ ಖಾಸಗಿ ಮತ್ತು ಸಾರ್ವಜನಿಕ ಸ್ವತ್ತುಗಳಿಗೆ ಸಂಬಂಧಿಸಿದ ದಾಖಲೆಗಳ ನಿರ್ವಹಣೆ.

**೮) ಕುಡಿಯುವ ನೀರು:** ೧) ಕುಡಿಯುವ ನೀರಿನ ಬಾವಿಗಳು, ಕರೆ ಮತ್ತು ಕುಂಟೆಗಳ ನಿರ್ಮಾಣ, ದುರುಸ್ತಿ ಮತ್ತು ನಿರ್ವಹಣೆ. ೨) ಜಲಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ ೩) ಗ್ರಾಮೀಣ ನೀರು ಪೂರಕೈ ಯೋಜನೆಗಳು ನಿರ್ವಹಣೆ.

**೯) ರಸ್ತೆಗಳು, ಕಟ್ಟಡಗಳು, ಅಡಿಗಾಲುವೆಗಳು, ಸೇತುವೆಗಳು, ಹಾಯ್ಗಡ ಮಾರ್ಗಗಳು ಮತ್ತು ಇತರೆ ಸಂಪರ್ಕ ಮಾರ್ಗಗಳು:** ೧) ಗ್ರಾಮ ರಸ್ತೆಗಳು, ಚರಂಡಿಗಳು ಮತ್ತು ಅಡಿಗಾಲುವೆಗಳ ನಿಮಾಣ ಮತ್ತು ನಿರ್ವಹಣೆ. ೨) ಅದರ ನಿಯಂತ್ರಣದಲ್ಲಿರುವ ಅಥವಾ ಸರ್ಕಾರದಿಂದ ಅಥವಾ ಇತರೆ ಯಾವುದೇ ಸಾರ್ವಜನಿಕ ಪ್ರಾಧಿಕಾರದಿಂದ ಅದಕ್ಕೆ

ವರ್ಗಾಯಿಸಲಾದ ಕಟ್ಟಡಗಳ ನಿರ್ವಹಣೆ ೩) ದೋಣಿಗಳು, ಹಾಯ್ಗಡಗಳು ಮತ್ತು ಜಲಮಾರ್ಗಗಳ ನಿರ್ವಹಣೆ.

೧೦) **ವಿದ್ಯುಚ್ಛಕ್ತಿಯ ಹಂಚಿಕೆಯೂ ಸೇರಿದಂತೆ ಗ್ರಾಮೀಣ ವಿದ್ಯುದ್ಧೀಕರಣ:** ಸಾರ್ವಜನಿಕ ರಸ್ತೆಗಳು ಮತ್ತು ಇತರೇ ಸ್ಥಳಗಳಲ್ಲಿ ದೀಪಗಳನ್ನು ಒದಗಿಸುವುದು ಮತ್ತು ಅವುಗಳ ನಿರ್ವಹಣೆ.

೧೧) **ಸಾಂಪ್ರದಾಯಿಕವಲ್ಲದ ಶಕ್ತಿಮೂಲ:** ೧) ಸಾಂಪ್ರದಾಯಿಕವಲ್ಲದ ಶಕ್ತಿಯೋಜನೆಗಳ ಉತ್ತೇಜನ ಮತ್ತು ಅಭಿವೃದ್ಧಿ ೨) ಜೈವಿಕ ಅನಿಲ ಸ್ಥಾವರುಗಳ ಸೇರಿದಂತೆ ಸಮುದಾಯ ಸಾಂಪ್ರದಾಯಕವಲ್ಲದ ಶಕ್ತಿ ಸಾಧನಗಳ ನಿರ್ವಹಣೆ ೩) ಸುಧಾರಿತ ಒಲೆಗಳು ಮತ್ತು ಇತರ ಪರಿಣಾಮಕಾರಿ ಶಕ್ತಿ ಸಾಧನಗಳನ್ನು ಜನಪ್ರಿಯಗೊಳಿಸುವುದು.

೧೨) **ಬಡತನ ನಿವಾರಣಾ ಕಾರ್ಯಕ್ರಮಗಳು:** ೧) ಬಡತನ ನಿವಾರಣೆಯಲ್ಲಿ ಸಾರ್ವಜನಿಕ ಜಾಗೃತಿಗೆ ಉತ್ತೇಜನ ಮತ್ತು ಸಂಪೂರ್ಣ ಉದ್ಯೋಗ ಮತ್ತು ಉತ್ಪಾದಕ ಸ್ವತ್ತುಗಳು ಸೃಜನೆ ಇತ್ಯಾದಿ ಕುರಿತ ಬಡತನ ನಿವಾರಣಾ ಕಾರ್ಯಕ್ರಮಗಳಲ್ಲಿ ಜನತೆ ಪಾಲ್ಗೋಳ್ಳುವುದು. ೨) ಗ್ರಾಮಸಭೆಯ ಮೂಲಕ ಅನೇಕ ಕಾರ್ಯಕ್ರಮಗಳ ಫಲಾನುಭವಿಗಳ ಆಯ್ಕೆ ೩) ಪರಿಣಾಮಕಾರಿ ಅನುಷ್ಠಾನ ಮತ್ತು ಮೇಲ್ವಿಚಾರಣೆ ಕಾರ್ಯದಲ್ಲಿ ಪಾಲ್ಗೊಳ್ಳುವುದು.

೧೩) **ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳು ಸೇರಿದಂತೆ ಶಿಕ್ಷಣ:** ೧) ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವುದು ಮತ್ತು ಅದರಲ್ಲಿ ಪಾಲ್ಗೊಳ್ಳುವಂತೆ ಮಾಡುವುದು. ೨) ಪ್ರಾಥಮಿಕ ಶಾಲೆಗಳಲ್ಲಿ ಪೂರ್ಣ ಪ್ರಮಾಣದ ಪ್ರವೇಶ ಮತ್ತು ಹಾಜರಾತಿಯನ್ನು ಖಚಿತಪಡಿಸಿಕೊಳ್ಳುವುದು.

೧೪) **ವಯಸ್ಕರ ಮತ್ತು ಅನೌಪಚಾರಿಕ ಶಿಕ್ಷಣ** : ವಯಸ್ಕರ ಸಾಕ್ಷರತೆಗೆ ಉತ್ತೇಜನ.

೧೫) **ಗ್ರಂಥಾಲಯಗಳು** : ಗ್ರಾಮ ಗ್ರಂಥಾಲಯಗಳು ಮತ್ತು ವಾಚನಾಲಯಗಳು.

೧೬) **ಸಾಂಸ್ಕೃತಿಕ ಚಟುವಟಿಕೆಗಳು** : ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಉತ್ತೇಜನ.

೧೭) **ಮಾರುಕಟ್ಟೆಗಳು ಮತ್ತು ಜಾತ್ರೆಗಳು** : ಜಾತ್ರೆಗಳನ್ನು (ದನದ ಜಾತ್ರೆಗಳೂ ಸೇರಿದಂತೆ) ಮತ್ತು ಹಬ್ಬ-ಹರಿದಿನಗಳನ್ನು ನಿಯಂತ್ರಿಸುವುದು.

೧೮) **ಗ್ರಾಮೀಣ ನೈರ್ಮಲ್ಯ** : ೧) ಸಾಮಾನ್ಯ ನೈರ್ಮಲ್ಯ ನಿರ್ವಹಣೆ ೨) ಸಾರ್ವಜನಿಕ ರಸ್ತೆಗಳು, ಚರಂಡಿಗಳು, ಕರೆಗಳು ಬಾವಿಗಳು ಮತ್ತು ಇತರೆ ಸಾರ್ವಜನಿಕ ಸ್ಥಳಗಳನ್ನು ಸ್ವಚ್ಛಗೊಳಿಸುವುದು. ೩) ಸ್ಮಶಾನಗಳ ನಿರ್ವಹಣೆ ಮತ್ತು ನಿಯಂತ್ರಣ. ೪) ಸಾರ್ವಜನಿಕ ಪಾಯಿಖಾನೆ ಮನೆಗಳ ನಿರ್ಮಾಣ ಮತ್ತು ನಿರ್ವಹಣೆ. ೫) ಅನಾಥ

ಮಾನವ ಶವ ಮತ್ತು ಸತ್ತ ಪ್ರಾಣಿಗಳ ವಿಲೇವಾರಿ. ೬) ಬಟ್ಟೆ ಒಗೆಯುವ ಮತ್ತು ಸ್ನಾನ ಘಟಗಳ ವ್ಯವಸ್ಥೆ ಮತ್ತು ನಿಯಂತ್ರಣ.

**೧೯) ಜನಾರೋಗ್ಯ ಮತ್ತು ಕುಟುಂಬ ಕಲ್ಯಾಣ:** ೧) ಕುಟುಂಬ ಕಲ್ಯಾಣ ಯೋಜನೆಗಳನ್ನು ಕಾರ್ಯಗತಗೊಳಿಸುವುದು. ೨) ಸಾಂಕ್ರಾಮಿಕ ರೋಗಗಳನ್ನು ತಡೆಯುವುದು ಮತ್ತು ಪರಿಹಾರ ಕ್ರಮಗಳು. ಮಾನವರಿಗೆ ಮತ್ತು ಪ್ರಾಣಿಗಳಿಗೆ ಲಸಿಕೆ ಹಾಕುವ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದು. ೫) ತಿನ್ನುವ ಮತ್ತು ಮನೋರಂಜನೆಯ ಸ್ಥಳಗಳಿಗೆ ಲೈಸನ್ಸ್ ನೀಡುವುದು ೬) ಬೀದಿ ನಾಯಿಗಳನ್ನು ನಾಶ ಮಾಡುವುದು ೭) ಚರ್ಮ ಮತ್ತು ತೋಗಲುಗಳ ಮತ್ತು ಅಪಾಯಕಾರಿ ವೃತ್ತಿಗಳ ನಿಯಂತ್ರಣ.

**೨೦) ಮಹಿಳೆಯರ ಮತ್ತು ಮಾನಸಿಕ ಆಸ್ವಸ್ಥತೆಯುಳ್ಳ ವ್ಯಕ್ತಿಗಳ ಕಲ್ಯಾಣವೂ ಸೇರಿದಂತೆ ಸಮಾಜದ ಕಲ್ಯಾಣ:** ೧) ಅಂಗವಿಕಲರ ಮಾನಸಿಕ ಅಸ್ವಸ್ಥ ವ್ಯಕ್ತಿಗಳ ಮತ್ತು ನಿರ್ಗತಿಕರ ಕಲ್ಯಾಣವು ಸೇರಿದಂತೆ ಸಮಾಜ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಪಾಲ್ಗೊಳ್ಳುವುದು. ೨) ವೃದ್ಧಾಪ್ಯ ಮತ್ತು ವಿಧವಾ ವೇತನಗಳ ಯೋಜನೆಗಳ ಮೇಲ್ವಿಚಾರಣೆ.

**೨೧) ಅಂಗವಿಕಲ ಮತ್ತು ಮಾನಸಿಕ ಅಸ್ವಸ್ಥತೆಯುಳ್ಳ ವ್ಯಕ್ತಿಗಳ ಕಲ್ಯಾಣವೂ ಸೇರಿದಂತೆ ಸಮಾಜ ಕಲ್ಯಾಣ:** ೧) ಅಂಗವಿಕಲರ, ಮಾನಸಿಕ ಅಸ್ವಸ್ಥ ವ್ಯಕ್ತಿಗಳ ಮತ್ತು ನಿರ್ಗತಿಕರ ಕಲ್ಯಾಣವೂ ಸೇರಿದಂತೆ ಸಮಾಜ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಪಾಲ್ಗೊಳ್ಳುವುದು ೨) ವೃದ್ಧಾಪ್ಯ ಮತ್ತು ವಿಧವಾ ವೇತನಗಳ ಯೋಜನೆಗಳ ಮೇಲ್ವಿಚಾರಣೆ.

**೨೨) ದುರ್ಬಲ ವರ್ಗಗಳ ಅದರಲ್ಲೂ ವಿಶೇಷವಾಗಿ ಅನೂಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ:** ೧) ಅನುಸೂಚಿತ ಜಾತಿಗಳು, ಅನೂಸೂಚಿತ ಪಂಗಡಗಳ ಮತ್ತು ಇತರ ದುರ್ಬಲ ವರ್ಗಗಳ ಕಲ್ಯಾಣ ಕುರಿತಂತೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವುದು. ೨) ದುರ್ಬಲ ವರ್ಗಗಳ ಕಲ್ಯಾಣದ ನಿರ್ದಿಷ್ಟ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಪಾಲ್ಗೊಳ್ಳುವುದು.

**೨೩) ಸಾರ್ವಜನಿಕ ವಿತರಣಾ ವ್ಯವಸ್ಥೆ:** ೧) ಅತ್ಯಾವಶ್ಯಕ ಸರಕುಗಳ ವಿತರಣೆಗೆ ಸಂಬಂಧಿಸಿದಂತೆ ಜನರಲ್ಲಿ ಜಾಗೃತಿ ಮೂಡಿಸುವುದು ೨) ಸಾರ್ವಜನಿಕ ವಿತರಣಾ ವ್ಯವಸ್ಥೆಯ ಮೇಲ್ವಿಚಾರಣೆ.

**೨೪) ಸಾಮುದಾಯಿಕ ಸ್ವತ್ತುಗಳು ನಿರ್ವಹಣೆ:** ೧) ಸಮುದಾಯ ಸ್ವತ್ತುಗಳ ನಿರ್ವಹಣೆ ೨) ಇತರ ಸಮುದಾಯ ಸ್ವತ್ತುಗಳ ಸಂರಕ್ಷಣೆ ಮತ್ತು ನಿರ್ವಹಣೆ.

**೨೫) ಧರ್ಮ ಶಾಲೆಗಳು, ಛತ್ರಗಳು ಮತ್ತು ಇಂಥವೇ ಸಂಸ್ಥೆಗಳ ನಿರ್ಮಾಣ ಮತ್ತು ನಿರ್ವಹಣೆ.**

**೨೬) ದನದ ಕೊಟ್ಟಿಗೆಗಳು, ದೊಡ್ಡಿಗಳು ಮತ್ತು ಗಾಡಿ ನಿಲ್ದಾಣಗಳು ನಿರ್ಮಾಣ ಮತ್ತು ನಿರ್ವಹಣೆ.**

**೨೭) ಕಸಾಯಿಖಾನೆಗಳ ನಿರ್ಮಾಣ ಮತ್ತು ನಿರ್ವಹಣೆ.**

**೨೮) ಸಾರ್ವಜನಿಕ ಉದ್ಯಾನವನಗಳ, ಆಟದ ಮೈದಾನಗಳ ಇತ್ಯಾದಿಗಳ ನಿರ್ವಹಣೆ.**

**೨೯) ಸಾರ್ವಜನಿಕ ಸ್ಥಳಗಳಲ್ಲಿ ಗೊಬ್ಬರದ ಗುಂಡಿಗಳ ನಿಯಂತ್ರಣ.**

**೩೦) ಸಂತೆಗಳನ್ನು ಏರ್ಪಡಿಸುವುದು ಮತ್ತು ನಿಯಂತ್ರಿಸುವುದು.**

**೩೧) ವಹಿಸಿಕೊಡಬಹುದಾದಂಥ ಇತರೇ ಕಾರ್ಯಗಳು:** ಅವುಗಳನ್ನು ನಾವು ಈ ರೀತಿ ಪಟ್ಟಿ ಮಾಡಬಹುದು. ೧) ಪಂಚಾಯಿತಿ ಪ್ರದೇಶದಲ್ಲಿರುವ ಅರಣ್ಯದ ವ್ಯವಸ್ಥಾಪನೆ ಮತ್ತು ನಿರ್ವಹಣೆ. ೨) ಸರ್ಕಾರಕ್ಕೆ ಸೇರಿದ ಬಂಜರು ಭೂಮಿ ಗೋಮಾಳಗಳು ಮತ್ತು ಖಾಲಿ ಇರುವ ಭೂಮಿಗಳ ವ್ಯವಸ್ಥಾಪನೆ ೩) ಸರ್ಕಾರದ ಪರವಾಗಿ ಭೂಕಂದಾಯದ ಸಂಗ್ರಹಣೆ ಮತ್ತು ಸಂಬಂಧಪಟ್ಟ ದಾಖಲೆಗಳ ನಿರ್ವಹಣೆ, ಹಾಗೂ ೪) ಇತರೇ ಕಾರ್ಯಗಳು.

ಒಟ್ಟಿನಲ್ಲಿ ಗ್ರಾಮ ಪಂಚಾಯಿತಿಯು ತನ್ನ ನಿವಾಸಿಗಳ ಆರೋಗ್ಯ, ಸುರಕ್ಷತೆ, ಶಿಕ್ಷಣ ಸುಖ-ಸೌಖ್ಯ ಸಾಮಾಜಿಕ ಮತ್ತು ಆರ್ಥಿಕ ಉನ್ನತಿಯನ್ನು ವೃದ್ಧಿಸುವಂತಹ ಇತರೇ ಕೆಲಸಗಳನ್ನು ನಿರ್ವಹಿಸಬಹುದು.

೧೯೯೩ನೇ ಡಿಸೆಂಬರ್ ೨೯ರಂದು ಗ್ರಾಮ ಪಂಚಾಯತಿಗಳಿಗೆ ಚುನಾವಣೆಗಳು ನಡೆದವು. ೧) ಸುಮಾರು ೨೪,೨೩೮ ಸದಸ್ಯರು ಅವಿರೋಧವಾಗಿ ಆಯ್ಕೆಯಾದರು. ೨) ಸುಮಾರು ೨೨೦೦ ಸ್ಥಾನಗಳಿಗೆ ಚುನಾವಣೆ ನಡೆಸಲಾಗಲಿಲ್ಲ. ೩) ಸುಮಾರು ೫೫೦೪ ಗ್ರಾಮ ಪಂಚಾಯಿಗಳಿಗೆ ಚುನಾವಣೆ ನಡೆದು ಸುಮಾರು ೧೫೭ ಗ್ರಾಮ ಪಂಚಾಯತ್‌ಗಳಿಗೆ ಉಚ್ಚ ನ್ಯಾಯಾಲಯ ತಡೆ ಅಜ್ಞೆ ನೀಡಿದ್ದರಿಂದ ಚುನಾವಣೆ ನಡೆಸಲಾಗಲಿಲ್ಲ. ೪) ವರದಿಗಳ ಪ್ರಕಾರ ಬೆಳಗಾವಿ ಜಿಲ್ಲೆ ಕಲ್ಲೋಳಿ ಗ್ರಾಮ ಪಂಚಾಯಿತಿಯ ಎಲ್ಲಾ ೩೨ ಸ್ಥಾನಗಳನ್ನು ಹರಾಜು ಹಾಕಿದ್ದರಿಂದ ರೂ. ೪,೫೫,೦೦೦ ಸಂಗ್ರಹವಾಯಿತು. ಸಾಮಾನ್ಯ ವಿಭಾಗದ ೧೦ ಸ್ಥಾನಗಳಿಗೆ ರೂ. ೨೨,೦೦೦ ಮತ್ತು ಹಿಂದುಳಿದ ವಿಭಾಗದ ಏಳು ಸ್ಥಾನಗಳಿಗೆ ರೂ.೧೦,೦೦೦ ಬೆಲೆ ಕಟ್ಟಲಾಯಿತು. ಅದರೆ ಗ್ರಾಮ ಪಂಚಾಯತ್ ಸದಸ್ಯರು ಇದನ್ನು ನಿರಾಕರಿಸಿದ್ದಾರೆ. ಗ್ರಾಮದ ಅಭಿವೃದ್ಧಿಗಾಗಿ ಹಣ ಸಂಗ್ರಹಣೆಯನ್ನು ಮಾಡಲಾಯಿತೆಂದು ದೃಢೀಕರಿಸಿದ್ದಾರೆ. ೫) ಸುಮಾರು ೨೭೦ ಲಕ್ಷ ಮತದಾರರಿದ್ದು. ಸುಮಾರು ೨೧೦ ಲಕ್ಷ ಮತ ಚಲಾಯಿಸಿದ್ದಾರೆ. ೬) ಚುನಾವಣೆಗಾಗಿ ೧೮ ಕೋಟಿ ರೂ., ವೆಚ್ಚವಾಗಿದ್ದು ಒಟ್ಟು ವೆಚ್ಚವನ್ನು ೨೨ ಕೋಟಿಗೆ ಸೀಮಿತಗೊಳಿಸಬೇಕೆಂದು ನಿರ್ಧರಿಸಲಾಗಿತ್ತು. ೭) ೨,೨೫,೦೦೦

ಸಿಬ್ಬಂದಿ ವರ್ಗ ಚುನಾವಣೆ ಕಾರ್ಯದಲ್ಲಿ ನಿರತರಾಗಿದ್ದು, ೩೫,೦೦೦ ಮತಗಟ್ಟೆಗಳಿದ್ದವು.

**೨) ತಾಲ್ಲೂಕು ಪಂಚಾಯಿತಿ** (Taluk Panchayat)

**ಎ) ರಚನೆ:** ಪ್ರತಿಯೊಂದು ತಾಲ್ಲೂಕು ಸಹ ಒಂದು ತಾಲ್ಲೂಕು ಪಂಚಾಯಿತಿಯನ್ನು ಹೊಂದಿರುತ್ತದೆ. ಆದರೆ ಆ ತಾಲ್ಲೂಕಿನಲ್ಲಿರುವ ಪುರಸಭೆ, ನೈರ್ಮಲ್ಯ ಮಂಡಲಿ, ಪಟ್ಟಣ ಮಂಡಳಿ ಮತ್ತು ಅಧಿಸೂಚಿತ ಪ್ರದೇಶ ಸಮಿತಿಯ ಭೂ ಪ್ರದೇಶಗಳು ತಾಲ್ಲೂಕು ಪಂಚಾಯಿತಿಯ ವ್ಯಾಪ್ತಿಗೆ ಬರುವುದಿಲ್ಲ. ಹತ್ತು ಸಾವಿರ ಜನಸಂಖ್ಯೆಗೆ ಅಥವಾ ಅದರ ಒಂದು ಭಾಗಕ್ಕೆ ಒಬ್ಬ ಸದಸ್ಯನು ಇರಬೇಕು. ಕಡಿಮೆ ಜನಸಂಖ್ಯೆ ಇದ್ದರು ಸಹ ಕನಿಷ್ಠ ಹನ್ನೊಂದು ಚುನಾಯಿತ ಸದಸ್ಯರು ಇರಬೇಕು. ಜೊತೆಗೆ ೧) ಆಯಾ ತಾಲ್ಲೂಕನ್ನು ಪ್ರತಿನಿಧಿಸುವ ಲೋಕಸಭಾ ಮತ್ತು ವಿಧಾನ ಸಭೆಯ ಸದಸ್ಯರನ್ನು ೨) ತಾಲ್ಲೂಕಿನಲ್ಲಿ ಮತದಾರರಾಗಿ ನೋಂದಾಯಿತರಾಗಿರುವ ರಾಜ್ಯಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರನ್ನು ಹಾಗೂ ೩) ಐದನೆಯ ಒಂದು ಭಾಗದಷ್ಟು ಗ್ರಾಮ ಪಂಚಾಯಿತಿಯ ಅಧ್ಯಕ್ಷರನ್ನು (ಇವರ ಅವಧಿ ಒಂದು ವರ್ಷ ಮಾತ್ರ) ಒಳಗೊಂಡಿರತ್ತದೆ.

**ಬಿ) ಸದಸ್ಯತ್ವದ ವರ್ಗವಾರು ಹಂಚಿಕೆ :-**

೬೦೧- ಪರಿಶಿಷ್ಟ ಜಾತಿ - ೧೮%

೧೬೯- ಪರಿಶಿಷ್ಟ ಪಂಗಡ -೫%

ಹಿಂದುಳಿದ ವರ್ಗ-ಎ-೨೬.೭೫% (೮೯೪ಕ್ಕೆ)

ಹಿಂದುಳಿದ ವರ್ಗ-ಬಿ-೬.೬೮% (೨೨೩)

೧೪೫೩-ಸಾಮಾನ್ಯ -೪೩.೫೦%

ಒಟ್ಟು =೩೩೪೦ ಇದರಲ್ಲಿ ೧೩೪೩ ಸ್ತ್ರೀಯರಿದ್ದಾರೆ-೪೦.೨೦%

ಚುನಾಯಿತ ಸ್ಥಾನಗಳಿಗೆ ಮೀಸಲಾತಿಯು ಅನ್ವಯವಾಗುತ್ತದೆ. ಅನುಸೂಚಿತ ಜಾತಿ ಮತ್ತು ಅನುಸೂಚಿತ ವರ್ಗಗಳಿಗೆ ಅವರ ಪ್ರಜಾಸಂಖ್ಯೆಗೆ ಅನುಗುಣವಾಗಿ ಮೀಸಲಾಗಿಡಬೇಕು. ಆದರೆ ಆ ಮೀಸಲು ಅನುಕ್ರಮವಾಗಿ ಶೇಕಡ ೧೫% ಮತ್ತು ಶೇಕಡ ಮೂರಕ್ಕಿಂತ ಕಡಿಮೆ ಇರಕೂಡದು. ಅಲ್ಲದೆ ಮೂರನೆಯ ಒಂದರಷ್ಟು ಸ್ಥಾನಗಳು ಹಿಂದುಳಿದ ವರ್ಗಗಳಿಗೆ ಮೀಸಲಾಗಿವೆ. ಏಕ ಸದಸ್ಯ ಚುನಾವಣೆ ಕ್ಷೇತ್ರಗಳಿಗೆ ಮಾತ್ರವೇ ಅವಕಾಶವನ್ನು ಕಲ್ಪಿಸಲಾಗಿದೆ. ಚುನಾವಣೆಗೆ ಮುನ್ನವೇ ಚುನಾವಣಾ ಕ್ಷೇತ್ರದ ವ್ಯಾಪ್ತಿ ಮತ್ತು ಯಾವ ಕ್ಷೇತ್ರ ಯಾವ ವರ್ಗಕ್ಕೆ ಮೀಸಲಾಗಿದೆ, ಎಂಬುದನ್ನು ಪ್ರಕಟಿಸಬೇಕು.

೧೯೮೩ರ ಕಾಯಿದೆಯು ಚುನಾಯಿತ ತಾಲ್ಲೂಕು ಬದಲು ನಾಮಕರಣಗೊಂಡ

ತಾಲ್ಲೂಕು ಪಂಚಾಯಿತಿ ಸಮಿತಿಗೆ ಅವಕಾಶ ಮಾಡಿತ್ತು. ೧೯೯೩ರ ಕಾಯಿದೆಯು ಚುನಾಯಿತ ಪಂಚಾಯಿತಿಗೆ ಅವಕಾಶ ಮಾಡಿಕೊಟ್ಟಿದೆ. ಇದನ್ನು ಅಂದಿನ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ಸಚಿವರಾಗಿದ್ದ ಎಂ.ವೈ ಘೋರ್ಪಡೆ " ಒಂದು ಪ್ರಮುಖ ಹೆಜ್ಜೆ ಇದು ಸ್ಥಳೀಯ ವಿಕೇಂದ್ರೀಕರಣವನ್ನು ಬಲಪಡಿಸುತ್ತದೆ" ಎಂದು ಬಣ್ಣಿಸಿದ್ದಾರೆ.

ತಾಲೂಕು ಪಂಚಾಯಿತಿಯ ಮತದಾರನಾಗಲು ಅರ್ಹತೆಗಳು ಸದಸ್ಯತ್ವದ ಅರ್ಹತೆಗಳು. ಸದಸ್ಯರಾಗಲು ಅನರ್ಹತೆಗಳು ಮತ್ತು ಸದಸ್ಯನಾಗಿ ಮುಂದುವರಿಯಲು ಅನರ್ಹತೆಗಳು– ಇವು ಗ್ರಾಮ ಪಂಚಾಯಿತಿಗೆ ಇರುವಂತಹವೇ ಆಗಿವೆ.

**ಸಿ) ತಾಲ್ಲೂಕು ಪಂಚಾಯಿತಿಯ ಅಧ್ಯಕ್ಷ ಮತ್ತು ಉಪಾಧಕ್ಷ:** ಸದಸ್ಯರ ಅಧಿಕಾರಾವಧಿಯು ಐದು ವರ್ಷ ಮೊದಲೇ ರಾಜೀನಾಮೆ ಕೊಡಬಹುದು. ಚುನಾಯಿತ ಸದಸ್ಯರ ಪೈಕಿ ಇಬ್ಬರು ಸದಸ್ಯರನ್ನು ಅನುಕ್ರಮವಾಗಿ ಅದರ ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನಾಗಿ ಆರಿಸಲಾಗುತ್ತದೆ. ತಾಲ್ಲೂಕು ಪಂಚಾಯಿತಿಯ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಸ್ಥಾನಗಳಲ್ಲಿ ಅನುಸೂಚಿತ ವರ್ಗ ಅನುಸೂಚಿತ ಪಂಗಡ ಹಿಂದೂಳಿದ ವರ್ಗಗಳ ಮತ್ತು ಸ್ತ್ರೀಯರಿಗೆ ಮೀಸಲಾತಿ ಇದೆ. ಅವರ ಅಧಿಕಾರದ ಅವಧಿಯು ತಾಲ್ಲೂಕು ಪಂಚಾಯಿತಿಯ ಸದಸ್ಯತ್ವದ ಅವಧಿಯ ತನಕ ಇರುತ್ತದೆ. ಅವಿಶ್ವಾಸ ನಿರ್ಣಯವು. ಚುನಾಯಿತ ಸದಸ್ಯರ ಒಟ್ಟು ಸಂಖ್ಯೆಯಲ್ಲಿ ಬಹುಮತದಿಂದ ಅಂಗೀಕರಿಸಲ್ಪಟ್ಟರೆ. ಅಧ್ಯಕ್ಷ ಸ್ಥಾನವನ್ನು ಖಾಲಿ ಮಾಡಬೇಕಾಗುತ್ತದೆ ಅದೇ ರೀತಿ ಉಪಾಧ್ಯಕ್ಷರು ಸಹ ಅವರುಗಳು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ದುರ್ವರ್ತನೆಗಾಗಿ ಅಥವಾ ಒಂದೇ ಸಮನೆ ಅಲಕ್ಷ್ಯ ತೋರಿಸಿದರೆ, ಅಂತಹವರನ್ನು ಸರ್ಕಾರವು ಆ ಸ್ಥಾನದಿಂದ ತೆಗೆದು ಹಾಕಬಹುದು. ಉಳಿದ ಅವಧಿಯಲ್ಲಿ ಅವರು ಆ ಸ್ಥಾನಗಳಿಗೆ ಸ್ಪರ್ಧಿಸಲು ಅನರ್ಹರು ಆ ರೀತಿ ತೆಗೆದು ಹಾಕಿದಾಗ ಸರ್ಕಾರವು ಅವರನ್ನು ಸದಸ್ಯತ್ವದಿಂದಲೂ ತೆಗೆದು ಹಾಕುವ ಅಧಿಕಾರವನ್ನು ಹೊಂದಿದೆ.

**ಡಿ) ಸಭೆಗಳು:** ತಾಲ್ಲೂಕು ಪಂಚಾಯಿತಿಯ ಸಭೆಯು ಎರಡು ತಿಂಗಳಿಗೆ ಒಮ್ಮೆಯಾದರೂ ಸೇರಬೇಕು. ವಿಶೇಷ ಸಭೆಗಳನ್ನು ಕರೆಯಬಹುದು. ಒಟ್ಟು ಸದಸ್ಯರ ಸಂಖ್ಯೆಯ ಮೂರನೆಯ ಒಂದರಷ್ಟು ಕೋರಂ ಆಗಿರುತ್ತದೆ. ಅಧ್ಯಕ್ಷರು ಅವರ ಗೈರು ಹಾಜರಿಯಲ್ಲಿ ಉಪಾಧ್ಯಕ್ಷರು, ಸಭೆಯ ಅಧ್ಯಕ್ಷತೆ ವಹಿಸುತ್ತಾರೆ. ಆಗತ್ಯವಿರುವ ಸರ್ಕಾರಿ ಅಧಿಕಾರಿಗಳ ಹಾಜರಾತಿಗೆ ಅವಕಾಶ ಮಾಡಿಕೊಡಲಾಗಿದೆ ಹಣಕಾಸಿನ ಮತ್ತು ಕಾರ್ಯನಿರ್ವಹಣಾ ಆಡಳಿತ ಸಮಗ್ರ ಮೇಲ್ವಿಚಾರಣೆಯು ಈತನ ಅಧಿಕಾರ ವ್ಯಾಪ್ತಿಗೆ ಬರುತ್ತದೆ. ಕೆಲವು ವಿಷಯಗಳಿಗೆ ಸಂಬಂಸಿದಂತೆ ಕಾರ್ಯನಿರ್ವಾಹಕ ಅಧಿಕಾರಿಯ ಮೇಲಿನ ಉಸ್ತುವಾರಿಯು ಸಹ ಈತನ ಜವಾಬ್ದಾರಿಯಾಗಿದೆ.

**ಇ) ಸ್ಥಾಯಿ ಸಮಿತಿಗಳು:** ತಾಲ್ಲೂಕು ಪಂಚಾಂಯಿತಿಯು ಮೂರು ಸ್ಥಾಯಿ ಸಮಿತಿಗಳನ್ನು ಹೊಂದಿದೆ. ಅವುಗಳೆಂದರೆ ೧) ಸಾಮಾನ್ಯ ಸ್ಥಾಯಿ ಸಮಿತಿ ೨) ಹಣಕಾಸು ಲೆಕ್ಕ

ಪರಿಶೋಧನೆ ಮತ್ತು ಯೋಜನಾ ಸಮಿತಿ ಹಾಗೂ ೩) ಸಾಮಾಜಿಕ ನ್ಯಾಯ ಸಮಿತಿ.

**ಎಫ್) ಕಾರ್ಯನಿರ್ವಾಹಕ ಅಧಿಕಾರ:-** ಸರ್ಕಾರವು ಉಪ ವಿಭಾಗಾಧಿಕಾರಿ (ಅಸಿಸ್ಟೆಂಟ್ ಕಮೀಷನರ್) ದರ್ಜೆಯ ಅಥವಾ ಅದಕ್ಕೆ ಸಮಾನವಾದ ಸರ್ಕಾರಿ ಸೇವೆಯ ಗ್ರೂಪ್ 'ಎ' ಅಧಿಕಾರಿಯನ್ನು ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ನೇಮಿಸುತ್ತದೆ. ಸರ್ಕಾರವು ಅವಶ್ಯವೆಂದು ಪರಿಗಣಿಸುವಷ್ಟು ಇತರೇ ಸಿಬ್ಬಂದಿವರ್ಗವನ್ನು ನೇಮಿಸುತ್ತದೆ. ಕಾರ್ಯನಿರ್ವಾಹಕ ಅಧಿಕಾರಿಯು ತಾಲ್ಲೂಕು ಪಂಚಾಯಿತಿಯ ಅತ್ಯುನ್ನತ ಸರ್ಕಾರಿ ಉದ್ಯೋಗಿಯಾಗಿದ್ದು, ಇತರೆ ಅಧಿಕಾರಿಗಳ ಮೇಲ್ವಿಚಾರಣೆ ಹಾಗೂ ಕಾರ್ಯನಿರ್ವಹಣೆಯ ಮೇಲ್ವಿಚಾರಣೆಯು, ಈತನ ಅಧಿಕಾರ ವ್ಯಾಪ್ತಿಯೊಳಗೆ ಬರುತ್ತದೆ.

**ಜಿ) ತಾಲ್ಲೂಕು ಪಂಚಾಯಿತಿಯ ಕಾರ್ಯಗಳು:**

**೧) ಸಾಮಾನ್ಯ ಪ್ರಕಾರ್ಯಗಳು:** ೧) ಈ ಅಧಿನಿಯಮದ ಮೂಲಕ ತನಗೆ ವಹಿಸಿಕೊಟ್ಟ ಮತ್ತು ಸರ್ಕಾರವು ಅಥವಾ ಜಿಲ್ಲಾ ಪಂಚಾಯಿತಿಯು ವಹಿಸಿದ ಯೋಜನೆಗಳಿಗೆ ಸಂಬಂಧಿಸಿದಂತೆ ವಾರ್ಷಿಕ ಯೋಜನೆಗಳನ್ನು ಸಿದ್ಧಪಡಿಸುವುದು ಮತ್ತು ಅದನ್ನು ಜಿಲ್ಲಾ ಯೋಜನೆಯೊಂದಿಗೆ ಸೇರಿಸುವುದಕ್ಕಾಗಿ ಗೊತ್ತುಪಡಿಸಿದ ಸಮಯದೊಳಗೆ ಜಿಲ್ಲಾ ಪಂಚಾಯಿತಿಗೆ ಒಪ್ಪಿಸುವುದು. ೨) ತಾಲ್ಲೂಕಿನಲ್ಲಿರುವ ಎಲ್ಲಾ ಗ್ರಾಮ ಪಂಚಾಯಿತಿಗಳ ವಾರ್ಷಿಕ ಯೋಜನೆಗಳನ್ನು ಪರಿಶೀಲಿಸುವುದು ಮತ್ತು ಕ್ರೋಢೀಕರಿಸುವುದು ಮತ್ತು ಹಾಗೆ ಕ್ರೋಢೀಕರಿಸಿದ ಯೋಜನೆಗಳನ್ನು ಜಿಲ್ಲಾ ಪಂಚಾಯಿತಿಗೆ ಒಪ್ಪಿಸುವುದು. ೩) ತಾಲ್ಲೂಕಿನ ವಾರ್ಷಿಕ ಬಜೆಟ್ ಅನ್ನು ಸಿದ್ಧಪಡಿಸುವುದು ಮತ್ತು ಅದನ್ನು ಗೊತ್ತುಪಡಿಸಿದ ಅವಧಿಯೊಳಗೆ ಜಿಲ್ಲಾ ಪಂಚಾಯಿತಿಗೆ ಒಪ್ಪಿಸುವುದು. ೪) ಸರ್ಕಾರದಿಂದ ಅಥವಾ ಜಿಲ್ಲಾ ಪಂಚಾಯಿತಿಯಿಂದ ತನಗೆ ವಹಿಸಬಹುದಾದಂಥ ಪ್ರಕಾರ್ಯಗಳನ್ನು ನಿರ್ವಹಿಸುವುದು ಮತ್ತು ಕೆಲಸಗಳನ್ನು ಕಾರ್ಯಗತಗೊಳಿಸುವುದು. ೫) ಪ್ರಕೃತಿ ವಿಕೋಪಗಳಲ್ಲಿ ಪರಿಹಾರವನ್ನು ಒದಗಿಸುವುದು.

**೨) ಕೃಷಿ ವಿಸ್ತರಣೆಯೂ ಸೇರಿದಂತೆ ಕೃಷಿ:** ೧) ಕೃಷಿ ಮತ್ತು ತೋಟಗಾರಿಕೆಗೆ ಉತ್ತೇಜನ ಮತ್ತು ಅವುಗಳ ಅಭಿವೃದ್ಧಿ ೨) ಕೃಷಿ ಬೀಜ ಫಾರಂಗಳನ್ನು ಮತ್ತು ತೋಟಗಾರಿಕೆ ಸಸ್ಯಕ್ಷೇತ್ರಗಳ ನಿರ್ವಹಣೆ. ೩) ಕೀಟನಾಶಕಗಳ ಮತ್ತು ಕ್ರಿಮಿನಾಶಕಗಳ ದಾಸ್ತಾನು ಮತ್ತು ವಿತರಣೆ ೪) ಬೇಸಾಯದ ಸುಧಾರಿತ ವಿಧಾನಗಳ ಪ್ರಸಾರ ೫) ತರಕಾರಿಗಳು, ಹಣ್ಣುಗಳು ಮತ್ತು ಹೂವುಗಳ ಬೇಸಾಯ ಮತ್ತು ಮಾರುಕಟ್ಟೆಗೆ ಉತ್ತೇಜನ ೬) ರೈತರ ತರಬೇತಿ ಮತ್ತು ವಿಸ್ತರಣಾ ಚಟುವಟಿಕೆಗಳು.

**೩) ಭೂ ಸುಧಾರಣೆ ಮತ್ತು ಭೂಸಾರ ಸಂರಕ್ಷಣೆ:** ಸರ್ಕಾರದ ಭೂ ಸುಧಾರಣಾ ಮತ್ತು ಭೂಸಾರ ಸಂರಕ್ಷಣೆಯ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಸರ್ಕಾರಕ್ಕೆ ಮತ್ತು ಜಿಲ್ಲಾ ಪರಿಷತ್ತುಗಳಿಗೆ ನೆರವು ನೀಡುವುದು.

**೪) ಸಣ್ಣ ನೀರಾವರಿ, ಜಲ ನಿರ್ವಹಣೆ ಮತ್ತು ಜಲಾನಯನ ಅಭಿವೃದ್ಧಿ:** ೧) ಸಣ್ಣ ನೀರಾವರಿ ಕಾಮಗಾರಿಗಳ ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ಸರ್ಕಾರಕ್ಕೆ ಮತ್ತು ಜಿಲ್ಲಾ ಪಂಚಾಯಿತಿಗೆ ಸಹಕಾರ ನೀಡುವುದು ೨) ಸಮುದಾಯ ಮತ್ತು ವ್ಯಕ್ತಿಗತ ನೀರಾವರಿ ಕಾಮಗಾರಿಗಳ ಅನುಷ್ಠಾನ.

**೫) ಪಶುಸಂಗೋಪನೆ ಹೈನುಗಾರಿಕೆ ಮತ್ತು ಕೋಳಿ ಸಾಕಣೆ:** ೧) ಪಶು ವೈದ್ಯಕೀಯ ಮತ್ತು ಪಶುಸಂಗೋಪನಾ ಸೇವೆಗಳ ನಿರ್ವಹಣೆ. ೨) ದನಕರುಗಳು, ಕೋಳಿ ಮತ್ತು ಇತರ ಜಾನುವಾರುಗಳ ತಳಿ ಸಂವರ್ಧನೆ ೩) ಹೈನುಗಾರಿಕೆ, ಕೋಳಿ ಸಾಕಣೆ ಮತ್ತು ಹಂದಿ ಸಾಕಣೆಗೆ ಉತ್ತೇಜನ. ೪) ಸಾಂಕ್ರಾಮಿಕ ಮತ್ತು ಅಂಟುರೋಗಗಳನ್ನು ತಡೆಯುವುದು.

**೬) ಮೀನುಗಾರಿಕೆ:** ಮೀನುಗಾರಿಕೆ ಅಭಿವೃದ್ಧಿಗೆ ಉತ್ತೇಜನ.

**೭) ಖಾದಿ, ಗ್ರಾಮ ಮತ್ತು ಗುಡಿ ಕೈಗಾರಿಕೆಗಳು:** ೧) ಗ್ರಾಮೀಣ ಮತ್ತು ಗುಡಿ ಕೈಗಾರಿಕೆಗಳಿಗೆ ಉತ್ತೇಜನ ೨) ಸಮ್ಮೇಳನಗಳು, ವಿಚಾರ ಸಂಕಿರಣಗಳು ಮತ್ತು ತರಬೇತಿ ಕಾರ್ಯಕ್ರಮಗಳು, ಕೃಷಿ ಮತ್ತು ಕೈಗಾರಿಕಾ ಪ್ರದರ್ಶನಗಳನ್ನು ಏರ್ಪಡಿಸುವುದು.

**೮) ಗ್ರಾಮೀಣ ಗೃಹ ನಿರ್ಮಾಣ:** ೧) ಗ್ರಾಮೀಣ ಗೃಹ ನಿರ್ಮಾಣ ಯೋಜನೆಗಳ ಅನಷ್ಠಾನ ಮತ್ತು ಗ್ರಾಮ ಠಾಣೆಯ ಪರಿಮಿತಿಗಳಾಚೆಯ ಗ್ರಾಮಗಳಲ್ಲಿ ಮನೆ ನಿವೇಶನಗಳ ಹಂಚಿಕೆ.

**೯) ಕುಡಿಯುವ ನೀರು:** ೧) ಗ್ರಾಮೀಣ ನೀರು ಪೂರೈಕೆ ಯೋಜನೆಗಳ ವ್ಯವಸ್ಥೆ, ದುರಸ್ತಿ ಮತ್ತು ನಿರ್ವಹಣೆ, ೨) ಜಲಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ ೩) ಗ್ರಾಮೀಣ ನೈರ್ಮಲ್ಯ ಯೋಜನೆಗಳ ಅನುಷ್ಠಾನ.

**೧೦) ಸಾಮಾಜಿಕ ಮತ್ತು ಹೊಲಗದ್ದೆ ಅರಣ್ಯ ನಿರ್ಮಾಣ, ಲಘು ಅರಣ್ಯೋತ್ಪನ್ನ ಸೌಧೆ ಮತ್ತು ಮೇವು:** ೧) ತನ್ನ ನಿಯಂತ್ರಣದಲ್ಲಿರುವ ರಸ್ತೆಗಳ ಪಕ್ಕದಲ್ಲಿ ಮತ್ತು ಇತರೆ ಸಾರ್ವಜನಿಕ ಭೂಮಿಗಳಲ್ಲಿ ಮರಗಳನ್ನು ನಡೆವುದು ಮತ್ತು ಸಂರಕ್ಷಿಸುವುದು. ೨) ಸೌಧೆ ನಡೆತೋಪುಗಳು ಮತ್ತು ಮೇವು ಅಭಿವೃದ್ಧಿ. ೩) ಹೊಲಗದ್ದೆ ಅರಣ್ಯ ನಿರ್ಮಾಣಕ್ಕೆ ಉತ್ತೇಜನ.

**೧೧) ರಸ್ತೆಗಳು, ಕಟ್ಟಡಗಳು ಸೇತುವೆಗಳು ಹಾಯ್ಗಡ, ಜಲಮಾರ್ಗಗಳು ಮತ್ತು ಇತರ ಸಂಪರ್ಕ ಸಾಧನಗಳು:** ೧) ಇತರ ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ಸರ್ಕಾರದ ನಿಯಂತ್ರಣದಲ್ಲಿಲ್ಲದಿರುವಂಥ ಸಾರ್ವಜನಿಕ ರಸ್ತೆಗಳು, ಒಳಚರಂಡಿಗಳು ಅಡಿಗಾಲುವೆಗಳು ಮತ್ತು ಇತರ ಸಂಪರ್ಕ ಸಾಧನಗಳ ನಿರ್ಮಾಣ ಮತ್ತು ನಿರ್ವಹಣೆ. ೨) ತಾಲ್ಲೂಕು ಪಂಚಾಯತಿಯಲ್ಲಿ ನಿಹಿತವಾಗಿರುವ ಯಾವುದೇ ಕಟ್ಟಡ ಅಥವಾ ಇತರ ಸ್ವತ್ತಿನ ನಿರ್ವಹಣೆ ೩) ದೋಣಿಗಳು ಹಾಯ್ಗಡ ಮತ್ತು ಜಲಮಾರ್ಗಗಳ ನಿರ್ವಾಹಣೆ.

೧೨) **ಸಂಪ್ರದಾಯಕವಲ್ಲದ ಶಕ್ತಿಮೂಲ:** ಸಾಂಪ್ರದಾಯಿಕವಲ್ಲದ ಶಕ್ತಿಮೂಲಗಳಿಗೆ ಉತ್ತೇಜನ ಮತ್ತು ಅವುಗಳ ಅಭಿವೃದ್ಧಿ.

೧೩) **ಬಡತನ ನಿವಾರಣಾ ಕಾರ್ಯಕ್ರಮಗಳು:** ಬಡತನ ನಿವಾರಣಾ ಕಾರ್ಯಕ್ರಮಗಳ ಅನುಷ್ಠಾನ.

೧೪) **ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳೂ ಸೇರಿದಂತೆ ಶಿಕ್ಷಣ:** ೧) ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣಕ್ಕೆ ಉತ್ತೇಜನ. ೨)ಪ್ರಾಥಮಿಕ ಶಾಲಾ ಕಟ್ಟಡಗಳ ನಿರ್ಮಾಣ, ದುರಸ್ತಿ ಮತ್ತು ನಿರ್ವಹಣೆ. ೩) ಯುವಜನ ಕ್ಲಬ್‌ಗಳು ಮತ್ತು ಮಹಿಳಾ ಮಂಡಲಗಳ ಮೂಲಕ ಸಾಮಾಜಿಕ ಶಿಕ್ಷಣಕ್ಕೆ ಉತ್ತೇಜನ.

೧೫) **ತಾಂತ್ರಿಕ ತರಬೇತಿ ಮತ್ತು ವೃತ್ತಿ ಶಿಕ್ಷಣ:** ಗ್ರಾಮೀಣ ಕರಕುಶಲ ಕಲೆಗಳಿಗೆ ಮತ್ತು ವೃತ್ತಿ ಶಿಕ್ಷಣಕ್ಕೆ ಉತ್ತೇಜನ.

೧೬) **ವಯಸ್ಕ ಮತ್ತು ಅನೌಪಚಾರಿಕ ಶಿಕ್ಷಣ :** ವಯಸ್ಕ ಸಾಕ್ಷರತೆಯ ಅನುಷ್ಠಾನ.

೧೭) **ಸಾಂಸ್ಕೃತಿಕ ಚಟುವಟಿಕೆಗಳು:** ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಉತ್ತೇಜನ.

೧೮) **ಮಾರುಕಟ್ಟೆಗಳು ಮತ್ತು ಜಾತ್ರೆಗಳು:** ಜಾತ್ರೆಗಳು ಮತ್ತು ಹಬ್ಬಹರಿದಿನಗಳ ನಿಯಂತ್ರಣ.

೧೯) **ಆರೋಗ್ಯ ಮತ್ತು ಕುಟುಂಬ ಕಲ್ಯಾಣ:** ೧) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಗಳಿಗೆ ಉತ್ತೇಜನ ೨) ರೋಗ ನಿರೋಧಕ ಮತ್ತು ಲಸಿಕೆ ಕಾರ್ಯಕ್ರಮಗಳಿಗೆ ಉತ್ತೇಜನ ೩) ಜಾತ್ರೆಗಳು ಮತ್ತು ಉತ್ಸವಗಳಲ್ಲಿ ಆರೋಗ್ಯ ಮತ್ತು ನೈರ್ಮಲ್ಯ ವ್ಯವಸ್ಥೆ.

೨೦) **ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ:-** ೧) ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯಕ್ರಮಗಳಿಗೆ ಉತ್ತೇಜನ ೨) ಶಾಲಾ ಮಕ್ಕಳ ಆರೋಗ್ಯ ಮತ್ತು ಪೌಷ್ಠಿಕಾಹಾರದ ಕಾರ್ಯಕ್ರಮಗಳಿಗೆ ಉತ್ತೇಜನ. ೩) ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಪಾಲ್ಗೊಳ್ಳುವುದಕ್ಕೆ ಉತ್ತೇಜನ.

೨೧) **ಅಂಗವಿಕಲ ಮತ್ತು ಮಾನಸಿಕ ಅಸ್ವಸ್ಥತೆಯುಳ್ಳ ವ್ಯಕ್ತಿಗಳ ಕಲ್ಯಾಣವು ಸೇರಿದಂತೆ ಸಮಾಜ ಕಲ್ಯಾಣ ಸೇವೆಗಳು:** ೧) ಅಂಗವಿಕಲರ ಮಾನಸಿಕ ಅಸ್ವಸ್ಥ ವ್ಯಕ್ತಿಗಳ ಮತ್ತು ನಿರ್ಗತಿಕರ ಕಲ್ಯಾಣವೂ ಸೇರಿದಂತೆ ಸಾಮಾಜಕಲ್ಯಾಣ ಕಾರ್ಯಕ್ರಮಗಳು. ೨) ವಯೋವೃದ್ಧರ ಮತ್ತು ವಿಧವೆಯರ ವೇತನಗಳ ಮತ್ತು ಅಂಗವಿಕಲರ ವೇತನಗಳ ಬಗ್ಗೆ ಮೇಲ್ವಿಚಾರಣೆ.

೨೨) **ದುರ್ಬಲ ವರ್ಗಗಳ ಅದರಲ್ಲೂ ವಿಶೇಷವಾಗಿ ಅನುಸೂಚಿತ ಜಾತಿಗಳ ಮತ್ತು**

**ಅನುಸೂಚಿತ ಪಂಗಡಗಳ ಕಲ್ಯಾಣ:** ೧) ಅನುಸೂಚಿತ ಜಾತಿ, ಅನುಸೂಚಿತ ಪಂಗಡಗಳ ಮತ್ತು ಇತರ ದುರ್ಬಲ ವರ್ಗಗಳ ಕಲ್ಯಾಣದ ಬಗ್ಗೆ ಉತ್ತೇಜನ ೨) ಅಂಥ ಜಾತಿಗಳು ಮತ್ತು ವರ್ಗಗಳನ್ನು ಸಾಮಾಜಿಕ ಅನ್ಯಾಯ ಮತ್ತು ಶೋಷಣೆಯಿಂದ ರಕ್ಷಿಸುವುದು.

**೨೩) ಸಾಮುದಾಯಿಕ ಸ್ವತ್ತುಗಳ ನಿರ್ವಾಹಣೆ:** ೧) ಅದರಲ್ಲಿ ನಿಹಿತವಾದ ಅಥವಾ ಸರ್ಕಾರದಿಂದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದಿಂದ ಅಥವಾ ಸಂಸ್ಥೆಯಿಂದ ಅದಕ್ಕೆ ವರ್ಗಾಹಿಯಿಸಲಾದ ಎಲ್ಲಾ ಸಮುದಾಯ ಸ್ವತ್ತುಗಳ ನಿರ್ವಹಣೆ ೨) ಇತರ ಸಮುದಾಯ ಸ್ವತ್ತುಗಳ ಸಂರಕ್ಷಣೆ ಮತ್ತು ನಿರ್ವಹಣೆ.

**೨೪) ಸಾರ್ವಜನಿಕ ವಿತರಣಾ ವ್ಯವಸ್ಥೆ:** ಅತ್ಯವಶ್ಯಕ ಸರಕುಗಳ ವಿತರಣೆ.

**೨೫) ಗ್ರಾಮೀಣ ವಿದ್ಯುದ್ಧೀಕರಣ :** ಗ್ರಾಮೀಣ ವಿದ್ಯುದ್ದೀಕರಣಕ್ಕೆ ಉತ್ತೇಜನ.

**೨೬) ಸಹಕಾರ:** ಸಹಕಾರ ಚಟುವಟಿಕೆಗಳಿಗೆ ಉತ್ತೇಜನ.

**೨೭) ಗ್ರಂಥಾಲಯಗಳು :** ಗ್ರಾಂಥಾಲಯಗಳಿಗೆ ಉತ್ತೇಜನ.

**೨೮) ವಹಿಸಬಹುದಾದಂತಹ ಇತರೇ ಕಾರ್ಯಗಳು:** ಸರ್ಕಾರವು ವಹಿಸುವ ಇತರೇ ಕಾರ್ಯಗಳನ್ನು ತಾಲ್ಲೂಕು ಪಂಚಾಯಿತಿಯು ನಿರ್ವಹಿಸಬೇಕು ಅದಕ್ಕೆ ಅನುಗುಣವಾದ ಅಧಿಕಾರವನ್ನು ತಾಲ್ಲೂಕು ಪಂಚಾಯಿತಿಯು ಹೊಂದಿರುತ್ತದೆ.

ಕರ್ನಾಟಕದಲ್ಲಿ ತಾಲ್ಲೂಕು ಪಂಚಾಯತ್ ಚುನಾವಣೆಗಳು. ೧೯೯೫ರ ಮಾರ್ಚ್ ೧೩,೧೫ ಮತ್ತು ೧೮ ರಂದು ಮೂರು ಹಂತಗಳಲ್ಲಿ ನಡೆದವು. ೧) ೧೯೯೪ ಮೇ ೨೬ ಮತ್ತು ೨೯ ರಂದು ನಡೆಯಬೇಕಾಗಿದ್ದ ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಚುನಾವಣೆಗಳನ್ನು ಮುಂದಕ್ಕೆ ಹಾಕಲಾಯಿತು. ವರ್ಷದ ಕೊನೆಯಲ್ಲಿ ವಿಧಾಣ ಸಭೆಯ ಚುನಾವಣೆ ಇರುವುದರಿಂದ ೧೯೯೫ರಲ್ಲಿ ಮಾತ್ರವೇ ಅವುಗಳ ಚುನಾವಣೆ ನಡೆಯುತ್ತದೆ. ಇದು ಸರ್ವೋಚ್ಚ ನ್ಯಾಯಾಲಯದ ನಿರ್ದೇಶನವಾದ ಮೇ ೯೪ರೊಳಗೆ ಚುನಾವಣೆ ನಡೆಸಬೇಕೆಂಬುದರ ಉಲ್ಲೇಂಘನೆಯಾಗುತ್ತದೆ ಎಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಮಂತ್ರಿ **ಎಂ.ವೈ ಘೋರ್ಪಡೆ** ನೀಡಿದ ರಾಜೀನಾಮೆಯು ೧೯೯೪ ರ ಮೇ ೧೩ ರಂದು ಅಂಗೀಕೃತವಾಯಿತು. ರಾಷ್ಟ್ರದಲ್ಲಿ ಪಂಚಾಯತ್ ಚುನಾವಣೆಗಳ ವಿಷಯವಾಗಿ ತಾತ್ವಿಕ ನಿಲುವು ತಾಳಿ, ರಾಜೀನಾಮೆ ನೀಡಿದವರಲ್ಲಿ ಇವರೇ ಮೊದಲಿಗರಾಗಿದ್ದಾರೆ. ೨) ೧೭೫ ತಾಲ್ಲೂಕು ಪಂಚಾಯತಿಗಳಲ್ಲಿ ೩೩೪೦ ಸ್ಥಾನಗಳಿದ್ದವು. ೩) ಮೀಸಲಾತಿ ಈ ರೀತಿ ಇದೆ: ೧) ಪರಿಶಿಷ್ಟ ಜಾತಿ: ೬೭೮ (ಮಹಿಳೆಯರಿಗೆ :೨೨೭); ೨) ಪರಿಶಿಷ್ಟ ವರ್ಗ ೨೪೮ (ಮಹಿಳೆಯರಿಗೆ: ೧೮೩) ೩) ಹಿಂದುಳಿದ ವರ್ಗ: ೧೧೧೭ (ಮಹಿಳೆಯರಿಗೆ:೪೪೧); ೪) ಸಾಮಾನ್ಯ ವರ್ಗ: ೧೨೯೭ (ಮಹಿಳೆಯರಿಗೆ :೪೪೧) ಮಹಿಳೆಯರಿಗೆ ಒಟ್ಟು ೧೩೪೨

ಸ್ಥಾನಗಳು. ೫) ೨೭೦ ಲಕ್ಷ ಮತದಾರರಿದ್ದು ೨೧೨ ಲಕ್ಷ ಮತ ಚಲಾವಣೆ ಮಾಡಿದ್ದಾರೆ ೪) ಜನತಾ ದಳವು ಶೇ.೫೮ರಷ್ಟು ಸ್ಥಾನಗಳನ್ನು ಗಳಿಸಿ ಮೊದಲನೆಯ ಸ್ಥಾನದಲ್ಲಿಯು, ಕಾಂಗ್ರೇಸ್ ಶೇ ೨೭ರಷ್ಟು ಸ್ಥಾನಗಳನ್ನು ಪಡೆದು ಎರಡನೆಯ ಸ್ಥಾನದಲ್ಲಿಯು ಮತ್ತು ಭಾರತೀಯ ಜನತಾ ಪಕ್ಷ ಶೇ ೭ರಷ್ಟು ಸ್ಥಾನಗಳನ್ನು ಪಡೆದು ಮೂರನೆಯ ಸ್ಥಾನದಲ್ಲಿಯು ಇವೆ.

**೩) ಜಿಲ್ಲಾ ಪಂಚಾಯಿತಿ (Zilla Panchayat)**

**ಎ) ರಚನೆ:** ಪ್ರತಿಯೊಂದು ಜಿಲ್ಲೆಯು ಒಂದು ಜಿಲ್ಲಾ ಪಂಚಾಯಿತಿಯನ್ನು ಹೊಂದಿರುತ್ತದೆ. ಅದರೆ ಆ ಜಿಲ್ಲೆಯಲ್ಲಿರುವ ಪುರಸಭೆಗಳು, ಮಹಾನಗರಪಾಲಿಕೆಗಳು, ನೈರ್ಮಲ್ಯ ಮಂಡಲಿ, ಪಟ್ಟಣ ಮಂಡಲಿ ಮತ್ತು ಅಧಿಸೂಚಿತ ಪ್ರದೇಶ ಸಮಿತಿಯ ಭೂ ಪ್ರದೇಶಗಳು ಜಿಲ್ಲಾ ಪಂಚಾಯಿತಿಯ ವ್ಯಾಪ್ತಿಗೆ ಬರುವುದಿಲ್ಲ. ೧) ಇದು ಚುನಾಯಿತ ಸದಸ್ಯರನ್ನು ಒಳಗೊಳ್ಳುತ್ತದೆ ಅಂದರೆ ತಾಲ್ಲೂಕುಗಳಿಂದ ಚುನಾಯಿತರಾದ ಸದಸ್ಯರನ್ನು ಒಳಗೊಳ್ಳುತ್ತದೆ. ತಾಲ್ಲೂಕಿನಿಂದ ಚುನಾಯಿತರಾಗುವ ಸದಸ್ಯರ ಸಂಖ್ಯೆಯನ್ನು ನಲವತ್ತು ಜನಸಂಖ್ಯೆಗೆ ಅಥವಾ ಅದರ ಭಾಗಕ್ಕೆ ಒಬ್ಬ ಸದಸ್ಯನಂತೆ ನಿಗದಿಪಡಿಸಲಾಗಿದೆ. ೨) ಆ ಜಿಲ್ಲೆಯ ಲೋಕಸಭೆಯ ಮತ್ತು ವಿಧಾನಸಭೆಯ ಸದಸ್ಯರನ್ನು ಒಳಗೊಳ್ಳುತ್ತದೆ. ೩) ಜಿಲ್ಲೆಯ ವ್ಯಾಪ್ತಿಯೊಳಗೆ ಮತದಾರರೆಂದು ನೋಂದಾಯಿತರಾದ ರಾಜ್ಯಸಭೆಯ ಮತ್ತು ವಿಧಾನ ಪರಿಷತ್ತಿನ ಸದಸ್ಯರನ್ನು ಒಳಗೊಳ್ಳುತ್ತದೆ. ೪) ಜಿಲ್ಲೆಯ ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರನ್ನು ಒಳಗೊಳ್ಳುತ್ತದೆ.

ಗ್ರಾಮ ಪಂಚಾಯಿತಿ ಮತ್ತು ಶಾಲ್ಲೂಕು ಪಂಚಾಂಯಿತಿಗಳಲ್ಲಿರುವಂತೆ ಮೀಸಲಾತಿಯು ಇಲ್ಲಿಯೂ ಅನ್ವಯವಾಗುತ್ತದೆ. ಏಕಸದಸ್ಯ ಚುನಾವಣಾ ಕ್ಷೇತ್ರಗಳಿಗೆ ಮಾತ್ರವೇ ಅವಕಾಶವನ್ನು ಕಲ್ಪಿಸಲಾಗಿದೆ. ಚುನಾವಣೆಗೆ ಮುನ್ನವೇ ಚುನವಣಾ ಕ್ಷೇತ್ರದ ವ್ಯಾಪ್ತಿ ಮತ್ತು ಯಾವ ಕ್ಷೇತ್ರ ಯಾವ ವರ್ಗಕ್ಕೆ ಮೀಸಲಾಗಿದೆ ಎಂಬುದನ್ನು ಪ್ರಕಟಿಸಬೇಕು.

ಜಿಲ್ಲಾ ಪಂಚಾಯಿತಿಯ ಮತದಾರನಾಗಲು ಅರ್ಹತೆಗಳು, ಸದಸ್ಯತ್ವದ ಅರ್ಹತೆಗಳು ಸದಸ್ಯರಾಗಲು ಅನರ್ಹತೆಗಳು ಮತ್ತು ಸದಸ್ಯನಾಗಿ ಮುಂದುವರಿಯಲು ಅನರ್ಹತೆಗಳು ಇವು ತಾಲ್ಲೂಕು ಮತ್ತು ಗ್ರಾಮ ಪಂಚಾಯತಿಗೆ ಇರುವಂತಹವೇ ಆಗಿವೆ.

ಸದಸ್ಯರ ಅಧಿಕಾರಾವಧಿಯು ಐದು ವರ್ಷ, ಮೊದಲೇ ರಾಜೀನಾಮೆ ಕೊಡಬಹುದು. ಸರ್ಕಾರವು ಜಿಲ್ಲಾ ಪಂಚಾಯಿತಿಯ ಶಿಫಾರಸ್ಸಿನ ಮೇರೆಗೆ ತನಗೆ ಸರಿ ಎಂದು ಕಂಡುಬಂದರೆ ಸದಸ್ಯನೊಬ್ಬನನ್ನು ಅದು ಸೂಕ್ತವೆಂದು ಭಾವಿಸುವಂತಹ ವಿಚಾರಣೆಯನ್ನು ಮಾಡಿದ ನಂತರ ಸದಸ್ಯತ್ವದಿಂದ ತೆಗೆದುಹಾಕಬಹುದು.

**ಬಿ) ಜಿಲ್ಲಾ ಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷ:** ಚುನಾಯಿತ ಸದಸ್ಯರಲ್ಲಿ ಇಬ್ಬರನ್ನು ಅನುಕ್ರಮವಾಗಿ ಅದರ ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುತ್ತದೆ. ಆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಲ್ಲಿ ಅನುಸೂಚಿತ ವರ್ಗ, ಅನುಸೂಚಿತ ಪಂಗಡ ಹಿಂದುಳಿದ ವರ್ಗಗಳ ಮತ್ತು ಸ್ತ್ರೀಯರಿಗೆ ಮೀಸಲಾತಿಯಿದೆ. ಅವರ ಅಧಿಕಾರದ ಅವಧಿಯು ಜಿಲ್ಲಾ ಪಂಚಾಯಿತಿಯ ಸದಸ್ಯತ್ವದ ಅವಧಿಯ ತನಕ ಇರುತ್ತದೆ. ಜಿಲ್ಲಾ ನ್ಯಾಯಾಧೀಶರು ಚುನಾವಣಾ ವಿವಾದಗಳನ್ನು ತೀರ್ಮಾನಿಸುವ ಪ್ರಾಧಿಕಾರಿ ಆಗಿರುತ್ತಾರೆ. ಅಧ್ಯಕ್ಷ ಮತ್ತು ಉಪಾಧ್ಯಕ್ಷರ ವೇತನ ಮತ್ತು ಭತ್ಯೆಗಳು ಸರ್ಕಾರ ಗೊತ್ತುಪಡಿಸಬಹುದಾದಂತೆ ಇರುತ್ತವೆ. ಅಧಿಕಾರದ ಅವಧಿಯು ಪೂರೈಸುವ ಮುನ್ನವೇ ರಾಜೀನಾಮೆ ಕೊಡಬಹುದು. ಅವರ ಕರ್ತವ್ಯ ನಿರ್ವಹಣೆಯಲ್ಲಿನ ದುರ್ವರ್ತನೆಗಾಗಿ ಅಥವಾ ಕರ್ತವ್ಯ ನಿರ್ವಹಣೆಯಲ್ಲಿ ಒಂದೇ ಸಮನೆ ಅಲಕ್ಷ್ಯ ತೋರಿಸಿದಲ್ಲಿ ಅವರ ಅಹವಾಲಿಗೆ ಅವಕಾಶ ಕೊಟ್ಟು ನಂತರ, ಸರ್ಕಾರವು ಅವರನ್ನು ಸ್ಥಾನಭ್ರಷ್ಟರನ್ನಾಗಿ ಮಾಡಬಹುದು. ಅವರ ಉಳಿದ ಅವಧಿಯಲ್ಲಿ ಸ್ಥಾನಗಳಿಗೆ ಅವರು ಸ್ಪರ್ಧಿಸುವಂತಿಲ್ಲ. ಸರ್ಕಾರವು ಮುಂದುವರಿದು ಅವರುಗಳನ್ನು ಜಿಲ್ಲಾ ಪಂಚಾಯಿತಿಯ ಸದಸ್ಯತ್ವದಿಂದಲೂ ತೆಗೆದುಹಾಕಬಹುದು. ಜಿಲ್ಲಾ ಪಂಚಾಯಿತಿಯ ಹಣಕಾಸಿನ ವಿಷಯಗಳು ಹಾಗೂ ಕಾರ್ಯನಿರ್ವಹಣಾ ಆಡಳಿತ ಸಮಗ್ರ ಮೇಲ್ವಿಚಾರಣೆಯು ಅಧ್ಯಕ್ಷನ ಕಾರ್ಯವಾಗಿದೆ. ಜಿಲ್ಲಾ ಪಂಚಾಯತಿ ಮತ್ತು ಸ್ಥಾಯಿ ಸಮಿತಿಗಳ ನಿರ್ಣಯಗಳನ್ನು ಜಾರಿಗೊಳಿಸಲು ಮತ್ತು ಕಾರ್ಯನಿರ್ವಾಹಕ ಅಧಿಕಾರಿಯ ಮೇಲೆ ಅಗತ್ಯವಿರುವ ಆಡಳಿತಾತ್ಮಕ ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ಚಲಾಯಿಸಬಹುದು. ಈ ಕಾಯಿದೆ ಮತ್ತು ಸರ್ಕಾರವು ವಹಿಸುವ ಕಾರ್ಯಗಳನ್ನು ನಿರ್ವಹಿಸುತ್ತಾನೆ.

**ಸಿ) ಸಭೆಗಳು:** ಜಿಲ್ಲಾ ಪಂಚಾಯಿತಿಯ ಸಾಮಾನ್ಯ ಸಭೆಯು ಎರಡು ತಿಂಗಳಿಗೆ ಒಮ್ಮೆಯಾದರೂ ಸೇರಬೇಕು. ವಿಶೇಷ ಸಭೆಗಳನ್ನೂ ಕರೆಯಬಹುದು. ಒಟ್ಟು ಸದಸ್ಯರ ಮೂರನೆಯ ಒಂದರಷ್ಟು ಕೋರಂ ಆಗಿರುತ್ತದೆ. ಅಧ್ಯಕ್ಷರ ಅವರ ಗೈರುಹಾಜರಿಯಲ್ಲಿ ಉಪಾಧ್ಯಕ್ಷರು, ಸಭೆಯ ಅಧ್ಯಕ್ಷತೆ ವಹಿಸುತ್ತಾರೆ. ಅಗತ್ಯವಿರುವ ಸರ್ಕಾರಿ ಅಧಿಕಾರಿಗಳ ಹಾಜರಾತಿಗೆ ಅವಕಾಶ ಮಾಡಿಕೊಡಲಾಗಿದೆ.

**ಡಿ) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ:** ಸರ್ಕಾರವು ಜಿಲ್ಲಾಧಿಕಾರಿ ದರ್ಜೆಗೆ ಕಡಿಮೆಯಲ್ಲದ ಒಬ್ಬ ಅಧಿಕಾರಿಯನ್ನು ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ನೇಮಿಸುತ್ತದೆ. ಒಬ್ಬ ಮುಖ್ಯ ಲೆಕ್ಕಾಧಿಕಾರಿ, ಒಬ್ಬರು ಅಥವಾ ಹೆಚ್ಚಿನ ಉಪ-ಕಾರ್ಯದರ್ಶಿಗಳು ಹಾಗೂ ಅವಶ್ಯವೆಂದು ಪರಿಗಣಿಸುವಷ್ಟು ಇತರೆ ಸಿಬ್ಬಂದಿ ವರ್ಗವನ್ನು ನೇಮಿಸುತ್ತದೆ. ಜಿಲ್ಲಾ ಪಂಚಾಯಿತಿಯ ಸಮಸ್ತ ಆಡಳಿತ ಜವಾಬ್ದಾರಿ, ಆಡಳಿತ ಮೇಲ್ವಿಚಾರಣೆ ಮತ್ತು ನಿಯಂತ್ರಣವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ

ಪ್ರಮುಖ ಕಾರ್ಯವಾಗಿದೆ. ಜಿಲ್ಲಾ ಪಂಚಾಯಿತಿಯ ಮತ್ತು ಸ್ಥಾಯಿ ಸಮಿತಿಗಳ ನಿರ್ಣಯಗಳನ್ನು ಈತನು ಕಾರ್ಯಗತಗೊಳಿಸಬೇಕು. ಇದರ ಮೇಲ್ವಿಚಾರಣೆ ಮತ್ತು ನಿಯಂತ್ರಣಾ ಕಾರ್ಯವನ್ನು ಅಧ್ಯಕ್ಷನು ನಿರ್ವಹಿಸಬೇಕು.

**ಇ) ಸ್ಥಾಯಿ ಸಮಿತಿಗಳು (Standing Committees):** ಜಿಲ್ಲಾ ಪಂಚಾಯಿತಿಯ ಐದು ಸ್ಥಾಯಿ ಸಮಿತಿಗಳನ್ನು ಹೊಂದಿರುತ್ತದೆ. ಅವುಗಳೆಂದರೆ ೧) ಸಾಮಾನ್ಯ ಸ್ಥಾಯಿ ಸಮಿತಿ ೨) ಹಣಕಾಸು ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸಮಿತಿ ೩) ಸಾಮಾಜಿಕ ನ್ಯಾಯ ಸಮಿತಿ ೪) ಶಿಕ್ಷಣ ಮತ್ತು ಆರೋಗ್ಯ ಸಮಿತಿ ಹಾಗೂ ೫) ಕೃಷಿ ಮತ್ತು ಕೈಗಾರಿಕಾ ಸಮಿತಿ. ಇವುಗಳು ಐದಕ್ಕಿಂತ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ಹೊಂದಿರುವಂತಿಲ್ಲ. ಯಾವೊಬ್ಬ ಸದಸ್ಯನೂ ಏಕಕಾಲದಲ್ಲಿ ಎರಡಕ್ಕಿಂತ ಹೆಚ್ಚಿನ ಸ್ಥಾಯಿ ಸಮಿತಿಗಳ ಸದಸ್ಯನಾಗಿರುವಂತಿಲ್ಲ.

**ಪಿ.ಆರ್. ನಾಯಕ್ ಸಮಿತಿ :- (೧೯೯೫)**

೧೯೯೩ರಲ್ಲಿ ಜಾರಿಗೆ ಬಂದ ೭೩ನೇ ತಿದ್ದುಪಡಿಯನ್ವಯ ಕರ್ನಾಟಕ ಸರ್ಕಾರ ಪಂಚಾಯತ್ ರಾಜ್ ಮಸೂದೆಯನ್ನು ಪ್ರಯೋಗಾತ್ಮಕವಾಗಿ ಯಶಸ್ವಿಯಾಗಿ ಕಾರ್ಯಗತಗೊಳಿಸಿತು. ಆದರೆ ರಾಜ್ಯ ಸರ್ಕಾರದ ನಿಯಂತ್ರಣ, ಈ ವ್ಯವಸ್ಥೆಗೆ ಇರುವುದರಿಂದ ಆಡಳಿತ ಶಾಹಿ ವರ್ಗಕ್ಕೆ ಹೆಚ್ಚು ಅಧಿಕಾರ ನೀಡಿದಂತಾಗಿದೆ ಎಂಬ ದೂರುಗಳು ಕೇಳಿ ಬಂದವು ಪರಿಣಾಮವಾಗಿ ಇರುವ ದೋಷಗಳ ನಿವಾರಣೆಗಾಗಿ ಜನತಾದಳ ಸರ್ಕಾರ ೨೩-೦೨-೧೯೯೫ರಲ್ಲಿ ಒಂದು ಸಮಿತಿ ರಚಿಸಿತು. (ನಿವೃತ್ತ ರಿಸರ್ವ ಬ್ಯಾಂಕ್ ಆಫ್ ಇಂಡಿಯಾದ ಡೆಪ್ಯೂಟಿ ಜನರಲ್ ಶ್ರೀ. ಕೆ.ಎಸ್. ಕೃಷ್ಣ ಸ್ವಾಮಿಯವರ ನೇತೃತ್ವದಲ್ಲಿ ಒಂದು ಸಮಿತಿ ರಚಿಸಿತು). ಕಾರಣಾಂತರದಿಂದ ಅವರು ಈ ಸ್ಥಾನಕ್ಕೆ ರಾಜೀನಾಮ ನಿಡಿದ್ದರಿಂದ ೨೫-೦೮-೧೯೯೫ ರಂದು ರಾಜ್ಯ ಸರ್ಕಾರದ ನಿವೃತ್ತ ಹೆಚ್ಚುವರಿ ಮುಖ್ಯಕಾರ್ಯದರ್ಶಿ ಶ್ರೀ. ಪಿ.ಆರ್. ನಾಯಕ್‌ರವರು ನೈತೃತ್ವದಲ್ಲಿ ಒಂದು ಸಮಿತಿ ನೇಮಿಸಲಾಯಿತು. ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ೩ ಜನ ಹಿರಿಯ ಅಧಿಕಾರಿಗಳೂ, ಉನ್ನತ ಶಿಕ್ಷಣ ಮತ್ತು ಸಂಶೋಧನಾ ವಿಭಾಗದ ೩ ಜನ ತಜ್ಞರೂ ಸೇರಿದಂತೆ ೬ ಮಂದಿ ಸದಸ್ಯರ ಸಮಿತಿಯೊಂದು ಅಸ್ತಿತ್ವಕ್ಕೆ ಬಂದಿತು. ಈ ಸಮಿತಿ ಸಾರ್ವಜನಿಕ ಸಲಹೆಗಳೊಂದಿಗೆ ೧೯೯೬ರಲ್ಲಿ ಪಂಚಾಯತ್ ರಾಜ್ ಕಾಯ್ದೆಗೆ ತರಬೇಕಿದ್ದ ತಿದ್ದುಪಡಿಗಳಿಗೆ ಶಿಫಾರಸ್ಸು ಸೂಚಿಸಿತು. ಅವುಗಳಲ್ಲಿ ಮುಖ್ಯವಾದವೆಂದರೆ:-

೧) ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಕೇಳ ಹಂತದ ಪಂಚಾಯ್ತಿ ವ್ಯವಸ್ಥೆ ಮತ್ತು ಸಂಸ್ಥೆಗಳ ನಿಯಂತ್ರಣ ಮೇಲಿನ ಹಂತದ ಪಂಚಾಯತಿ ವ್ಯವಸ್ಥೆಗೆ ಮಾತ್ರ ಇರುವುದು.

೨) ಜಿಲ್ಲಾ ಪಂಚಾಯತ್ ಮೂಲಕವೇ ಗ್ರಾಮ ಪಂಚಾಯತ್ ಮತ್ತು ತಾಲ್ಲೂಕ್ ಪಂಚಾಯತ್‌ಗಳ ಅಧಿಕಾರಿಗಳ ಮೌಲ್ಯಮಾಪನ ವರದಿ ರಾಜ್ಯ ಸರ್ಕಾರಗಳಿಗೆ ಸಲ್ಲಿಸಬೇಕು.

೩) ಜಿಲ್ಲಾ ಪಂಚಾಯತ್ ವ್ಯವಸ್ಥೆ ಉತ್ತಮವಾಗಿ ಕಾರ್ಯನಿರ್ವಹಿಸದಿದ್ದರೆ, ರಾಜ್ಯ ಸರ್ಕಾರವೂ, ಅಧೀನ ಪಂಚಾಯತ್ ವ್ಯವಸ್ಥೆಯ ನಿಯಂತ್ರಣ ಜಿಲ್ಲಾ ಪಂಚಾಯತ್ ಸಂಸ್ಥೆಗೂ ಇರಬೇಕು.

೪) ಪಂಚಾಯತ್ ರಾಜ್ಯ ವ್ಯವಸ್ಥೆಯ ಯಾವುದೇ ತಿರ್ಮಾನಗಳನ್ನು ಅಮಾನತ್ತಿನಲ್ಲಿಡುವ ಅಧಿಕಾರ ಸರ್ಕಾರಿ ಅಧಿಕಾರಿಗಳಿರಬಾರದು.

೫) ಸಿ ಮತ್ತು ಡಿ ಗ್ರೂಪ್ ನೌಕರರ ಸೇವೆಯನ್ನು ಪಂಚಾಯಿತಿ ರಾಜ್ಯ ಸಂಸ್ಥೆಗಳಿಗೆ ವರ್ಗಾವಹಿಸುವಂತಿರಬೇಕು.

೬) ಜಿಲ್ಲಾ ಮತ್ತು ತಾಲ್ಲೂಕು ಪಂಚಾಯಿತಿ ಅಧ್ಯಕ್ಷರುಗಳೇ ಅದರ ಕಾರ್ಯನಿರ್ವಾಹಕ ಅಧಿಕಾರಿಗಳಾಗಿ ಕಾರ್ಯನಿರ್ವಹಿಸಬೇಕು.

೭) ಈ ವ್ಯವಸ್ಥೆಯ ಕಾರ್ಯನಿರ್ವಹಣೆಯ ಬಗ್ಗೆ ಬರುವ ಲೋಪಗಳು ಬಗ್ಗೆ ಸರ್ಕಾರ ಶಾಸಕಾಂಗಕ್ಕೆ ಉತ್ತರ ನೀಡುವಂತಹ ಹೋಣೆ ಹೊಂದಿರಬೇಕು.

೮) ಗ್ರಾಮ ಪಂಚಾಯ್ತಿ ಮತ್ತು ತಾಲ್ಲೂಕು ಪಂಚಾಯಿತಿಯ ಅಧ್ಯಕ್ಷರನ್ನು ಮತ್ತು ಉಪಾಧ್ಯಕ್ಷರನ್ನು ಅಧಿಕಾರದಿಂದ ಚ್ಯುತಿ ಆದೇಶವನ್ನು (ಕೆಳಗಿಳಿಸುವ) ಸರ್ಕಾರ ಹೊರಡಿಸುವಾಗ ಜಿಲ್ಲಾ ಪಂಚಾಯಿತಿಯ ಶಿಫಾರಸ್ಸು ಪಡೆಯಬೇಕು.

೯) ಅನುಸೂಚಿತ ಜಾತಿ ಮತ್ತು ಗುಂಪುಗಳಿಗೆ ಜನಸಂಖ್ಯೆ ಆಧಾರದ ಮೇಲೆ ಮೀಸಲಾತಿ ನೀಡಬೇಕು.

೧೦) ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಅಧಿಕಾರಾವದಿ ೩ ವರ್ಷಗಳಿಗೆ ನಿಗಧಿಪಡಿಸಬೇಕು.

೧೧) ಅಭಿವೃದ್ಧಿ ಯೋಜನೆಗಳ ತಯಾರಿಯಲ್ಲೂ ವಿಕೇಂದ್ರಿಕರಣ ನಿಯಮವಿದ್ದದ್ದು ಪ್ರತಿ ಜಿಲ್ಲಾ ಪಂಚಾಯಿತಿಯಲ್ಲಿ ಒಬ್ಬರು ಯೋಜನಾಧಿಕಾರಿ ಇರಬೇಕಾಗುತ್ತದೆ.

೧೨) ರಾಜ್ಯ ಮಟ್ಟದಲ್ಲಿ ಒಂದು "ಪಂಚಾಯ್ತಿ ಸಮಿತಿ" ನೇಮಿಸಬೇಕು ರಾಜ್ಯದ ಮುಖ್ಯ ಮಂತ್ರಿ ಅದರ ಅಧ್ಯಕ್ಷರಾಗಿಯೂ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಂತ್ರಿ ಉಪಾಧ್ಯಕ್ಷರಾಗಿಯೂ, ಅಭಿವೃದ್ಧಿ ವಿಷಯಗಳಿಗೆ ಸಂಬಂಧಿಸಿದಂತೆ ಇತರೆ ೫ ಮಂದಿ ಮಂತ್ರಿಗಳನ್ನು ಸದಸ್ಯರನ್ನಾಗಿಯೂ ನೇಮಿಸಬೇಕು.

ಈ ಮೇಲ್ಕಂಡ ಸಲಹೆಗಳಲ್ಲಿ ಕೆಲವು ಕಾರ್ಯರೂಪದಲ್ಲಿದ್ದು ವಿವಿಧ ಹಂತದ ಪಂಚಾಯತ್ ವ್ಯವಸ್ಥೆಯ ಉತ್ತಮ ಕಾರ್ಯನಿರ್ವಹಣೆಗೆ ಪೂರಕವಾಗಿದನ್ನಬಹುದು.

**ಜಿಲ್ಲಾ ಪಂಚಾಯಿತಿಯ ಕಾರ್ಯಗಳು**

೧) **ಸಾಮಾನ್ಯ ಪ್ರಕಾರ್ಯಗಳು:** ತಾಲೂಕು ಮತ್ತು ಜಿಲ್ಲಾ ಮಟ್ಟಗಳಲ್ಲಿ ಅಭಿವೃದ್ಧಿ ಯೋಜನೆಗಳ ಒಟ್ಟಾರೆ ಮೇಲ್ವಿಚಾರಣೆ ನಡೆಸುವುದು, ಸಂಘಟಿಸುವುದು ಮತ್ತು ಸಂಯೋಜಿಸುವುದು ಮತ್ತು ಜಿಲ್ಲಾ ಅಭಿವೃದ್ಧಿಗಾಗಿ ಒಂದು ಯೋಜನೆಯನ್ನು ಸಿದ್ಧಪಡಿಸುವುದು.

೨) **ಕೃಷಿ (ಕೃಷಿ ವಿಸ್ತರಣೆಯೂ ಸೇರಿದಂತೆ) ಮತ್ತು ತೋಟಗಾರಿಕೆ:** (೧) ಕೃಷಿ ಉತ್ಪನ್ನಗಳನ್ನು ಹೆಚ್ಚಿಸುವ ಕ್ರಮಗಳಿಗೆ ಉತ್ತೇಜನ ಮತ್ತು ಸುಧಾರಿತ ಕೃಷಿ ಪರಿಕರಗಳ ಬಳಕೆಯನ್ನು ಜನಪ್ರಿಯಗೊಳಿಸುವುದು ಮತ್ತು ಸುಧಾರಿತ ಕೃಷಿ ಪದ್ಧತಿಗಳನ್ನು ಅಳವಡಿಸಿಕೊಳ್ಳುವಂತೆ ಮಾಡುವುದು. (೨) ಕೃಷಿ ಮತ್ತು ತೋಟಗಾರಿಕೆ ಫಾರಂಗಳನ್ನು ಮತ್ತು ವಾಣಿಜ್ಯ ಫಾರಂಗಳನ್ನು ತೆಗೆಯುವುದು ಮತ್ತು ಅವುಗಳ ನಿರ್ವಹಣೆ. (೩) ದಾಸ್ತಾನು ಮಳಿಗೆಗೆ ಸ್ಥಾಪನೆ ಮತ್ತು ನಿರ್ವಹಣೆ. (೪) ಕೃಷಿ ಸಮ್ಮೇಳನ ಮತ್ತು ಪ್ರದರ್ಶನಗಳನ್ನು ನಡೆಸುವುದು. (೫) ಕೃಷಿ ಮತ್ತು ತೋಟಗಾರಿಕಾ ವಿಸ್ತರಣಾ ಮತ್ತು ತರಭೇತಿ ಕೇಂದ್ರಗಳ ವ್ಯವಸ್ಥೆ. (೬) ರೈತರಿಗೆ ತರಭೇತಿ ನೀಡುವುದು.

೩) **ಭೂ ಸುಧಾರಣೆ ಮತ್ತು ಭೂಸಾರ ಸಂರಕ್ಷಣೆ:** ಸರ್ಕಾರದಿಂದ ವಹಿಸಿಕೊಡಲಾದ ಭೂ ಸುಧಾರಣಾ ಮತ್ತು ಭೂಸಾರ ಸಂರಕ್ಷಣೆಯ ಕಾರ್ಯಕ್ರಮಗಳ ಯೋಜನೆ ಮತ್ತು ಅನುಷ್ಠಾನ.

೪) **ಸಣ್ಣ ನೀರಾವರಿ ಜಲ ನಿರ್ವಹಣೆ ಮತ್ತು ಜಲಾನಯನ ಅಭಿವೃದ್ಧಿ ಮತ್ತು ನಿರ್ವಹಣೆ:** (೧) ಸಣ್ಣ ನೀರಾವರಿ ಕಾಮಗಾರಿಗಳ ನಿರ್ಮಾಣ. (೨)ಜಿಲ್ಲಾ ಪಂಚಾಯಿತಿಯ ನಿಯಂತ್ರಣದಲ್ಲಿ ನೀರಾವರಿ ಯೋಜನೆಗಳ ಮೇರೆಗೆ ನೀರನ್ನು ಸೂಕ್ತ ಕಾಲದಲ್ಲಿ ಮತ್ತು ಸಮನಾಗಿ ಹಂಚುವುದು ಮತ್ತು ಪೂರ್ಣವಾಗಿ ಬಳಸಿಕೊಳ್ಳುವುದು. (೩) ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳು. (೪) ಅಂತರ್ಜಲ ಮೂಲಗಳ ಅಭಿವೃದ್ಧಿ.

೫) **ಪಶುಸಂಗೋಪನೆ, ಹೈನುಗಾರಿಕೆ ಮತ್ತು ಕೋಳಿ ಸಾಕಣೆ:** (೧) ತಾಲೂಕು ಮತ್ತು ಗ್ರಾಮಗಳಲ್ಲಿ ಪಶುವೈದ್ಯಕೀಯ ಆಸ್ಪತ್ರೆಗಳು ಮತ್ತು ಸಂಚಾರಿ ಪಶುವೈದ್ಯಕೀಯ ಚಿಕಿತ್ಸಾಲಯಗಳ ಸ್ಥಾಪನೆ ಮತ್ತು ನಿರ್ವಹಣೆ. (೨) ದನಕರುಗಳ, ಕೋಳಿ ಮತ್ತು ಇತರ ಜಾನುವಾರುಗಳ ತಳಿ ಸಂವರ್ಧನೆ. (೩) ಹೈನುಗಾರಿಕೆ, ಕೋಳಿ ಸಾಕಣೆ ಮತ್ತು ಹಂದಿ ಸಾಕಣೆಗೆ ಉತ್ತೇಜನ. (೪) ಸಾಂಕ್ರಾಮಿಕ ಮತ್ತು ಅಂಟು ರೋಗಗಳ ನಿವಾರಣೆ.

೬) **ಮೀನುಗಾರಿಕೆ:** ಜಿಲ್ಲಾ ಪಂಚಾಯಿತಿಯಲ್ಲಿ ನಿಹಿತವಾಗಿರುವ ನೀರಾವರಿಯಲ್ಲಿ ಮೀನುಗಾರಿಕೆಯ ಅಭಿವೃದ್ಧಿ. (೨) ಒಳನಾಡಿನಲ್ಲಿ, ಉಪ್ಪು, ನೀರು ಮತ್ತು ಸಮುದ್ರದಲ್ಲಿನ ಮೀನುಗಾರಿಕೆಗೆ ಉತ್ತೇಜನ. (೩) ಬೆಸ್ತರ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ.

೭) **ಖಾದಿ, ಗ್ರಾಮ ಮತ್ತು ಗುಡಿ ಕೈಗಾರಿಕೆಗಳು:** (೧) ಗ್ರಾಮೀಣ ಮತ್ತು ಗುಡಿ ಕೈಗಾರಿಕೆಗಳ ಉತ್ತೇಜನ. (೨) ತರಬೇತಿ ಹಾಗೂ ಉತ್ಪನ್ನ ಕೇಂದ್ರಗಳ ಸ್ಥಾಪನೆ ಮತ್ತು

ನಿರ್ವಹಣೆ. (೩) ಗುಡಿ ಮತ್ತು ಗ್ರಾಮ ಕೈಗಾರಿಕೆಗಳ ಉತ್ಪನ್ನಗಳಿಗೆ ಮಾರುಕಟ್ಟೆ ಸೌಲಭ್ಯಗಳ ವ್ಯವಸ್ಥೆ ಮಾಡುವುದು. (೪) ಗ್ರಾಮೀಣ ಮತ್ತು ಗುಡಿ ಕೈಗಾರಿಕೆಗಳ ಅಭಿವೃದ್ಧಿಗಾಗಿ ರಾಜ್ಯ ಮಂಡಳಿಗಳ ಮತ್ತು ಅಖಿಲ ಭಾರತ ಮಂಡಳಿಗಳ ಮತ್ತು ಆಯೋಗಗಳ ಯೋಜನೆಗಳ ಅನುಷ್ಠಾನ.

೮) **ಆಹಾರ ಸಂಸ್ಕರಣ ಕೈಗಾರಿಕೆಯೂ ಸೇರಿದಂತೆ ಸಣ್ಣ ಪ್ರಮಾಣದ ಕೈಗಾರಿಕೆಗಳು:** ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಉತ್ತೇಜನ.

೯) **ಗ್ರಾಮೀಣ ಗೃಹ ನಿರ್ಮಾಣ:** ಗ್ರಾಮೀಣ ಗೃಹನಿರ್ಮಾಣ ಕಾರ್ಯಕ್ರಮಗಳಿಗೆ ಉತ್ತೇಜನ.

೧೦) **ಕುಡಿಯುವ ನೀರು:** ಕುಡಿಯುವ ನೀರು ಮತ್ತು ಗ್ರಾಮೀಣ ನೈರ್ಮಲ್ಯ ಕಾರ್ಯಕ್ರಮಗಳಿಗೆ ಉತ್ತೇಜನ.

೧೧) **ಲಘು ಅರಣ್ಯೋತ್ಪನ್ನ ಸೌಧೆ ಮತ್ತು ಮೇವು:** (೧) ಸಾಮಾಜಿಕ ಮತ್ತು ಹೊಲಗದ್ದೆ ಅರಣ್ಯ ನಿರ್ಮಾಣ, ಸೌಧೆ ನೆಡುತೋಪು ಮತ್ತು ಮೇವು ಅಭಿವೃದ್ಧಿಗಳಿಗೆ ಉತ್ತೇಜನ. (೨) ಸಮುದಾಯ ಭೂಮಿಗಳಲ್ಲಿ ಬೆಳೆಸಿದ ಅರಣ್ಯಗಳಲ್ಲಿನ ಲಘು ಅರಣ್ಯೋತ್ಪನ್ನಗಳ ವ್ಯವಸ್ಥೆ. (೩) ಬಂಜರು ಭೂಮಿಯ ಅಭಿವೃದ್ಧಿ.

೧೨) **ರಸ್ತೆಗಳು, ಕಟ್ಟಡಗಳು, ಸೇತುವೆಗಳು, ಹಾಯ್ಗಡ, ಜಲಮಾರ್ಗಗಳು ಮತ್ತು ಇತರ ಸಂಪರ್ಕ ಸಾಧನೆಗಳು:** (೧) ಜಿಲ್ಲಾ ರಸ್ತೆಗಳು ಮತ್ತು ಅಡಿಗಾಲುವೆಗಳು, ಕಾಲುದಾರಿ ಮತ್ತು ಸೇತುವೆಗಳ (ರಾಜ್ಯ ಹೆದ್ದಾರಿಗಳು ಮತ್ತು ಗ್ರಾಮ ರಸ್ತೆಗಳನ್ನು ಹೊರತುಪಡಿಸಿ) ನಿರ್ಮಾಣ ಮತ್ತು ನಿರ್ವಹಣೆ. (೨) ಜಿಲ್ಲಾ ಪಂಚಾಯಿತಿಗಳ ಅಗತ್ಯತೆಗೆ ಸಂಬಂಧಿಸಿದಂತೆ ಆಡಳಿತ ಸಂಬಂಧದ ಮತ್ತು ಇತರೆ ಕಟ್ಟಡಗಳ ನಿರ್ಮಾಣ.

೧೩) **ಸಾಂಪ್ರದಾಯಕವಲ್ಲದ ಶಕ್ತಿ ಮೂಲಗಳು:** ಸಾಂಪ್ರದಾಯಕವಲ್ಲದ ಶಕ್ತಿ ಮೂಲಗಳಿಗೆ ಉತ್ತೇಜನ ಮತ್ತು ಅವುಗಳ ಅಭಿವೃದ್ಧಿ.

೧೪) **ಬಡತನ ನಿವಾರಣಾ ಕಾರ್ಯಕ್ರಮಗಳು:** ಬಡತನ ನಿವಾರಣಾ ಕಾರ್ಯಕ್ರಮಗಳ ಯೋಜನೆ, ಮೇಲ್ವಿಚಾರಣೆ ಮತ್ತು ನಿಯಂತ್ರಣ.

೧೫) **ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳೂ ಸೇರಿದಂತೆ ಶಿಕ್ಷಣ:** (೧) ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಸ್ಥಾಪನೆ ಮತ್ತು ನಿರ್ವಹಣೆಯೂ ಸೇರಿದಂತೆ ಜಿಲ್ಲೆಯಲ್ಲಿ ಶಿಕ್ಷಣ ಚಟುವಟಿಕೆಗಳಿಗೆ ಉತ್ತೇಜನ. (೨) ಆಶ್ರಮ ಶಾಲೆಗಳು ಮತ್ತು ಅನಾಥಾಲಯಗಳ ಸ್ಥಾಪನೆ ಮತ್ತು ನಿರ್ವಹಣೆ. (೩) ಶಿಕ್ಷಣ ಚಟುವಟಿಕೆಗಳ ಸಮೀಕ್ಷೆ ಮತ್ತು ಮೌಲ್ಯೀಕರಣ.

**೧೬) ತಾಂತ್ರಿಕ ತರಬೇತಿ ಮತ್ತು ವೃತ್ತಿ ಶಿಕ್ಷಣ:** (೧) ಗ್ರಾಮೀಣ ಕರಕುಶಲ ಮತ್ತು ವೃತ್ತಿ ತರಬೇತಿ ಕೇಂದ್ರಗಳ ಸ್ಥಾಪನೆ ಮತ್ತು ನಿರ್ವಹಣೆ. (೨) ಗ್ರಾಮೀಣ ವೃತ್ತಿ ತರಬೇತಿ ಕೇಂದ್ರಗಳಿಗೆ ಪ್ರೋತ್ಸಾಹ ನೀಡುವುದು ಮತ್ತು ನೆರವು ನೀಡುವುದು.

**೧೭) ವಯಸ್ಕ ಶಿಕ್ಷಣ ಮತ್ತು ಅನೌಪಚಾರಿಕ ಶಿಕ್ಷಣ:** ವಯಸ್ಕ ಸಾಕ್ಷರತೆ ಕಾರ್ಯಕ್ರಮಗಳು ಮತ್ತು ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮಗಳ ಯೋಜನೆ ಮತ್ತು ಅನುಷ್ಠಾನ.

**೧೮) ಮಾರುಕಟ್ಟೆಗಳು ಮತ್ತು ಜಾತ್ರೆಗಳು:** ಜಿಲ್ಲೆಯಲ್ಲಿ ಮುಖ್ಯವಾದ ಜಾತ್ರೆಗಳು ಮತ್ತು ಉತ್ಸವಗಳ ನಿಯಂತ್ರಣ.

**೧೯) ಆರೋಗ್ಯ ಮತ್ತು ಕುಟುಂಬ ಕಲ್ಯಾಣ:** (೧) ಸರ್ಕಾರದ ಅಥವಾ ಇತರ ಯಾವುದೇ ಸ್ಥಳೀಯ ಪ್ರಾಧಿಕಾರದ ನಿರ್ವಹಣೆಯಲ್ಲಿರುವವುಗಳನ್ನು ಹೊರತುಪಡಿಸಿ, ಆಸ್ಪತ್ರೆಗಳ ಮತ್ತು ಚಿಕಿತ್ಸಾಲಯಗಳ ನಿರ್ವಹಣೆ. (೨) ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಕಾರ್ಯಕ್ರಮಗಳ ಅನುಷ್ಠಾನ. (೩) ಕುಟುಂಬ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ. (೪) ರೋಗ ನಿರೋಧಕ ಮತ್ತು ಲಸಿಕೆ ಕಾರ್ಯಕ್ರಮಗಳ ಅನುಷ್ಠಾನ.

**೨೦) ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ:** (೧) ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯಕ್ರಮಗಳಿಗೆ ಉತ್ತೇಜನ (೨) ಶಾಲಾ ಮಕ್ಕಳ ಆರೋಗ್ಯ ಮತ್ತು ಪೌಷ್ಠಿಕ ಆಹಾರದ ಕಾರ್ಯಕ್ರಮಗಳಿಗೆ ಉತ್ತೇಜನ. (೩) ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಪಾಲ್ಗೊಳ್ಳುವುದನ್ನು ಉತ್ತೇಜಿಸುವುದು.

**೨೧) ಅಂಗವಿಕಲರು ಮತ್ತು ಮಾನಸಿಕ ಅಸ್ವಸ್ಥ ವ್ಯಕ್ತಿಗಳ ಕಲ್ಯಾಣವು ಸೇರಿದಂತೆ ಸಮಾಜ ಕಲ್ಯಾಣ:** ಅಂಗವಿಕಲರು, ಮಾನಸಿಕ ಮತ್ತು ನಿರಾಶ್ರಿತರ ಕಲ್ಯಾಣವೂ ಸೇರಿದಂತೆ ಸಮಾಜ ಕಲ್ಯಾಣ ಕಾರ್ಯಕ್ರಮಗಳಿಗೆ ಉತ್ತೇಜನ.

**೨೨) ದುರ್ಬಲ ವರ್ಗಗಳ ಅದರಲ್ಲೂ ವಿಶೇಷವಾಗಿ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ:** ೧) ಅನುಸೂಚಿತ ಜಾತಿಗಳು, ಅನುಸೂಚಿತ ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಇತರ ಹಿತಾಸಕ್ತಿಗಳಿಗೆ ಉತ್ತೇಜನ ೨) ಅಂಥ ಜಾತಿಗಳು, ಪಂಗಡಗಳು ಮತ್ತು ವರ್ಗಗಳನ್ನು ಸಾಮಾಜಿಕ ಅನ್ಯಾಯ ಮತ್ತು ಎಲ್ಲ ರೀತಿಯ ಶೋಷಣೆಗಳಿಂದ ರಕ್ಷಿಸುವುದು. ೩) ಅಂಥ ಜಾತಿಗಳ, ಪಂಗಡಗಳ, ವರ್ಗಗಳ ವಿದ್ಯಾರ್ಥಿನಿಲಯಗಳ ಸ್ಥಾಪನೆ ಮತ್ತು ನಿರ್ವಹಣೆ. ೪) ಜಿಲ್ಲೆಯಲ್ಲಿನ ವಿದ್ಯಾರ್ಥಿನಿಲಯಗಳ ಮೇಲ್ವಿಚಾರಣೆ ಮತ್ತು ನಿರ್ವಹಣೆ. ವ್ಯಕ್ತಿಗಳಿಗೆ ಅನುದಾನಗಳ, ಸಾಲಗಳ ಮತ್ತು ಸಹಾಯಧನಗಳ ಹಂಚಿಕೆ ಮತ್ತು ಅನುಸೂಚಿತ ಜಾತಿಗಳು, ಅನುಸೂಚಿತ

ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಇತರೇ ಯೋಜನೆಗಳು.

**೨೩) ಸಾಮುದಾಯಿಕ ಸ್ವತ್ತುಗಳ ನಿರ್ವಹಣೆ:** ೧) ಅದರಲ್ಲಿ ನಿಹಿತವಾದ ಅಥವಾ ಸರ್ಕಾರದಿಂದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಸ್ಥೆಯಿಂದ ಅದಕ್ಕೆ ವರ್ಗಾಯಿಸಲಾದ ಸಮುದಾಯ ಸ್ವತ್ತುಗಳ ನಿರ್ವಹಣೆ. ೨) ಇತರ ಸಮುದಾಯ ಸ್ವತ್ತುಗಳನ್ನು ಸಂರಕ್ಷಿಸಲು ಮತ್ತು ನಿರ್ವಹಿಸಲು ಸರ್ಕಾರಕ್ಕೆ ನೆರವು ನೀಡುವುದು.

**೨೪) ಸಾಂಸ್ಕೃತಿಕ ಚಟುವಟಿಕೆಗಳು:-** ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಉತ್ತೇಜನ.

**೨೫) ಸಾರ್ವಜನಿಕ ವಿತರಣಾ ವ್ಯವಸ್ಥೆ.**

**೨೬) ಗ್ರಾಮೀಣ ವಿದ್ಯುದ್ಧೀಕರಣ.**

**೨೭) ಸಹಕಾರ:** ಸ್ಥಳೀಯ ಚಟುವಟಿಕೆಗಳಿಗೆ ಉತ್ತೇಜನ

**೨೮) ಗ್ರಂಥಾಲಯ** : ಗ್ರಂಥಾಲಯಗಳಿಗೆ ಉತ್ತೇಜನ.

**೨೯) ವಹಿಸಬಹುದಾದದ ಇತರೇ ಕಾರ್ಯಗಳು:** ಸರ್ಕಾರವು ಜಿಲ್ಲಾ ಪಂಚಾಯತಿಗೆ ವಹಿಸುವ ಕಾರ್ಯವನ್ನು ಅದು ನಿರ್ವಹಿಸಬೇಕು.

ಕರ್ನಾಟಕದಲ್ಲಿ ಜಿಲ್ಲಾ ಪಂಚಾಯತ್ ಚುನಾವಣೆಗಳು ಮಾರ್ಚ್ ೧೩,೧೫ ಮತ್ತು ೧೮ರಂದು ಮೂರು ಹಂತಗಳಲ್ಲಿ ನಡೆದವು. (೧) ೨೦ ಜಿಲ್ಲಾ ಪಂಚಾಯತ್‌ಗಳಲ್ಲಿ ೯೧೯ ಸ್ಥಾನಗಳಿವೆ. (೨) ಮೀಸಲಾತಿ ಈ ರೀತಿ ಇದೆ (೧) ಪರಿಶಿಷ್ಟ ಜಾತಿ: ೧೭೯ (ಮಹಿಳೆಯರಿಗೆ:೬೭ (೨) ಪರಿಶಿಷ್ಟ ವರ್ಗ:೫೭, (ಮಹಿಳೆಯರಿಗೆ :೨೬); (೩) ಹಿಂದುಳಿದ ವರ್ಗ:೩೦೪ (ಮಹಿಳೆಯರಿಗೆ ೧೦೭); (೪) ಸಾಮಾನ್ಯವರ್ಗ ಜಾತಿ:೪ (ಮಹಿಳೆಯರಿಗೆ:೨); (೨) ಪರಿಶಿಷ್ಟ ವರ್ಗ : ಒಂದು ಸ್ಥಾನ; (೨) ಹಿಂದೂಳಿದ ವರ್ಗ ಬಿ ಗುಂಪು : ಒಂದು ಸ್ಥಾನ (೫) ಸಾಮಾನ್ಯ ವರ್ಗ: ೮ (ಮಹಿಳೆಯರಿಗೆ :೩) (೩) ೨೭೦ ಲಕ್ಷ ಮತದಾರರಿದ್ದು ೨೧೨ ಲಕ್ಷ ಮತ ಚಲಾವಣೆ ಮಾಡಿದ್ದಾರೆ (೪) ಜನತಾ ಪಕ್ಷವು ಶೇ ೬೭% ಸ್ಥಾನಗಳನ್ನು ಗಳಿಸಿ ಮೊದಲನೆಯ ಸ್ಥಾನದಲ್ಲಿಯೂ, ಕಾಂಗ್ರೇಸ್ ಪಕ್ಷವು ಶೇ ೨೧ರಷ್ಟು ಸ್ಥಾನಗಳನ್ನು ಗಳಿಸಿ ಎರಡನೆಯ ಸ್ಥಾನದಲ್ಲಿಯು ಮತ್ತು ಭಾರತಿಯ ಜನತಾ ಪಕ್ಷ ಶೇ ೭ರಷ್ಟು ಸ್ಥಾನಗಳನ್ನು ಗಳಿಸಿ ಮೂರನೆಯ ಸ್ಥಾನದಲ್ಲಿಯೂ ಇವೆ. (೫) ಜನತಾ ಪಕ್ಷ ೧೯ ಜಿಲ್ಲಾ ಪಂಚಾಯಿತಿಗಳಲ್ಲಿ ಅಧಿಕಾರಿದಲ್ಲಿದೆ.

**೪) ಗ್ರಾಮಸಭೆ (Grama Sabha)**

ಗ್ರಾಮ ಪಂಚಾಯಿತಿಯ ವ್ಯಾಪ್ತಿಯೊಳಗೆ ಬರುವ ಪ್ರತಿಯೊಂದು ಹಳ್ಳಿಗೂ ಒಂದು ಗ್ರಾಮಸಭೆ ಇರುತ್ತದೆ. ಜಿಲ್ಲಾ ಪರಿಷತ್ತಿನ ಮತದಾರರ ಪಟ್ಟಿಯಲ್ಲಿ ಹೆಸರುಳ್ಳ ಗ್ರಾಮಸ್ಥರು

ಆ ಗ್ರಾಮಸಭೆಯ ಸದ್ಯಸರಾಗಿರುತ್ತಾರೆ. ಗ್ರಾಮಸಭೆಯು ಆಗಾಗ್ಗೆ ಸಭೆ ಸೇರಬೇಕು. ಎರಡು ಅಧಿವೇಶನಗಳ ಮಧ್ಯದ ಕಾಲಾವಧಿಯು ಆರು ತಿಂಗಳಿಗಿಂತ ಹೆಚ್ಚಾಗಿರಕೂಡದು ಗ್ರಾಮಪಂಚಾಯಿತಿಯ ಗ್ರಾಮಸಭೆಯನ್ನು ಕರೆಯಬೇಕು. ತಪ್ಪಿದಲ್ಲಿ ಕಾರ್ಯನಿರ್ವಾಹಕ ಅಧಿಕಾರಿಯು ಗ್ರಾಮ ಸಭೆಯನ್ನು ಕರೆಯಬೇಕು. ಗ್ರಾಮ ಸಭೆಯನ್ನು ಕರೆಯುವ ಮತ್ತು ನಡೆಸುವ ಕಾರ್ಯ ವಿಧಾನವು ಗೊತ್ತುಪಡಿಸಿದಂತೆ ಇರಬೇಕು. ಅಧ್ಯಕ್ಷ ಅಥವಾ ಉಪಾಧ್ಯಕ್ಷ ಅಥವಾ ಗ್ರಾಮ ಪಂಚಾಯಿತಿಯ ಸದಸ್ಯನೊಬ್ಬನು ಗ್ರಾಮಸಭೆಯ ಅಧ್ಯಕ್ಷತೆಯನ್ನು ವಹಿಸಬಹುದು.

ಗ್ರಾಮ ಸಭೆಯು ಕೆಳಗಿನ ವಿಷಯಗಳನ್ನು ಪರಿಶೀಲಿಸಬೇಕು ಮತ್ತು ಗ್ರಾಮ ಪಂಚಾಯಿತಿಗೆ ಶಿಫಾರಸ್ಸುಗಳನ್ನು ಮತ್ತು ಸಲಹೆಗಳನ್ನು ಮಾಡಬಹುದು. ೧) ಗ್ರಾಮ ಪಂಚಾಯಿತಿಗಳು ವಾರ್ಷಿಕ ಲೆಕ್ಕ ಪತ್ರಗಳ ವಿವರಣೆ ಹಿಂದಿನ ಹಣಕಾಸು ವರ್ಷದ ಆಡಳಿತ ವರದಿ, ಕಳೆದ ವರ್ಷದ ಲೆಕ್ಕ ಪರಿಶೋಧನಾ ಟಿಪ್ಪಣಿ ಹಾಗೂ ಅದಕ್ಕೆ ನೀಡಿದ್ದ ಉತ್ತರಗಳೇನಾದರೂ ಇದ್ದಲ್ಲಿ ಅದು: (೨) ಹಿಂದಿನ ವರ್ಷಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ವರದಿ ಮತ್ತು ಪ್ರಸಕ್ತ ವರ್ಷದಲ್ಲಿ ಕೈಗೊಳ್ಳಬೇಕೆಂದು ಉದ್ದೇಶಿಸಿದ ಅಭಿವೃದ್ಧಿ ಕಾರ್ಯಕ್ರಮಗಳು; (೩) ಗ್ರಾಮದಲ್ಲಿರುವ ಸಮಾಜದ ಎಲ್ಲಾ ವರ್ಗಗಳ ಜನರಲ್ಲಿ ಏಕತೆ ಹಾಗೂ ಸೌಹರ್ದತೆಯನ್ನು ಬೆಳೆಸಿಕೊಂಡ ಬರುವುದು; (೪) ಗ್ರಾಮದೊಳಗೆ ವಯಸ್ಕರ ಶಿಕ್ಷಣ ಕಾರ್ಯಕ್ರಮ; (೫) ಗೊತ್ತುಪಡಿಸಬಹುದಾದಂಥ ಇತರೆ ವಿಷಯ.

**ಗ್ರಾಮಸಭೆಯ ಕಾರ್ಯಗಳು:** ೧) ಸಮುದಾಯ ಕಲ್ಯಾಣ ಕಾರ್ಯಕ್ರಮಗಳಿಗಾಗಿ ಸ್ವಯಂ ಸೇವೆ ಹಾಗೂ ವಸ್ತು ರೂಪದ ಮತ್ತು ನಗದು ರೂಪದ ಕೊಡುಗೆಗಳನ್ನು ಸಂಗ್ರಹಿಸುವುದು; ೨) ಗ್ರಾಮಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಲುವಾಗಿ ಫಲಾನುಭವಿಗಳನ್ನು ಗುರುತಿಸುವುದು; ಪರಂತು ಗ್ರಾಮಸಭೆಯು, ಸೂಕ್ತ ಕಾಲದೊಳಗೆ ಫಾಲಾನುಭವಿಗಳನ್ನು ಗುರುತಿಸಲು ತಪ್ಪಿದ ಪಕ್ಷದಲ್ಲಿ ಕಾರ್ಯನಿರ್ವಾಹಕ ಅಧಿಕಾರಿಯು ಗ್ರಾಮ ಪಂಚಾಯಿತಿಯೊಂದಿಗೆ ಸಮಾಲೋಚಿಸಿ ಫಲಾನುಭವಿಗಳನ್ನು ಗುರುತಿಸತಕ್ಕದ್ದು. ೩) ಗ್ರಾಮಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ನೆರವಾಗುವುದು.

**ರಾಜ್ಯ ಚುನಾವಣಾ ಆಯೋಗ:** ಈ ಮೂರು ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆಗಳನ್ನು ನಡೆಸಲು ಅದಕ್ಕೆ ಸಂಬಂಧಿಸಿದ ಚುನಾವಣಾ ಪಟ್ಟಿಯ ಸಿದ್ಧತೆಯ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣ ಕಾರ್ಯಗಳನ್ನು ನಿರ್ವಹಿಸಲು ರಾಜ್ಯ ಚುನಾವಣಾ ಕಮೀಷನರ್ ಅವರನ್ನು ಒಳಗೊಂಡ ರಾಜ್ಯ ಚುನಾವಣಾ ಆಯೋಗವನ್ನು ನೇಮಿಸಬೇಕು. ಅವರು ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಅನುಕೂಲವಾಗುವಂತೆ ಕೆಲವು ನಿಯಮಗಳನ್ನು

ಸೇರಿಸಲಾಗಿದೆ. ೧) ಅವರ ಸೇವಾ ಷರತ್ತುಗಳು ಮತ್ತು ಹುದ್ದೆಯ ಅವಧಿಯ ಬಗ್ಗೆ ರಾಜ್ಯಪಾಲರು ನಿಯಮಗಳನ್ನು ಮಾಡುತ್ತಾರೆ ೨) ಅವುಗಳನ್ನು ಅವರ ನೇಮಕಾತಿಯ ನಂತರ ಅನಾನುಕೂಲವಾಗುವಂತೆ ಬದಲಾಯಿಸುವಂತಿಲ್ಲ, ೩) ಅವರನ್ನು ಅಧಿಕಾರದಿಂದ ತೆಗೆಯಲು ಉಚ್ಚ ನ್ಯಾಯಾಲಯದ ನ್ಯಾಯಾಧೀಶರನ್ನು ತೆಗೆದುಹಾಕುವ ವಿಧಾನವನ್ನೇ ಅನುಸರಿಸಬೇಕಾಗಿದೆ. ಐ.ಎಸ್.ಎಸ್. ಅಧಿಕಾರಿ ವರ್ಗದ ಶ್ರೀ ಪಿ.ಎಸ್. ನಾಗರಾಜನ್ ರಾಜ್ಯ ಚುನಾವಣಾ ಆಯುಕ್ತರಾಗಿ ೧೯೯೩ ಮೇ ೨೬ ರಂದು ಅಧಿಕಾರ ವಹಿಸಿಕೊಂಡರು.

**ಅಭಿವೃದ್ಧಿ ಯೋಜನೆಯ ತಯಾರಿಕೆ:** ಪ್ರತಿಯೊಂದು ಗ್ರಾಮ ಪಂಚಾಯಿತಿಯು ಪ್ರತಿ ವರ್ಷವೂ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸಿ ತಾಲ್ಲೂಕು ಪಂಚಾಯಿತಿಗೆ ಸಲ್ಲಿಸಬೇಕು. ಪ್ರತಿಯೊಂದು ತಾಲ್ಲೂಕು ಪಂಚಾಯಿತಿಯು, ಗ್ರಾಮ ಪಂಚಾಯಿತಿಗಳ ಯೋಜನೆಗಳನ್ನು ಅಳವಡಿಸಿಕೊಂಡು ತಾಲ್ಲೂಕು ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸಿ, ಜಿಲ್ಲಾ ಯೋಜನ ಸಮಿತಿಗೆ ಸಲ್ಲಿಸಬೇಕು. ಜಿಲ್ಲಾ ಯೋಜನಾ ಸಮಿತಿಯು, ಈ ಮೂರು ಸ್ಥಳೀಯ ಸಂಸ್ಥೆಗಳ, ನಗರ ಪಂಚಾಯಿತಿಗಳ, ಪೌರಸಭೆಗಳ ಮತ್ತು ಮಹಾನಗರ ಪಾಲಿಕೆಗಳ ಅಭಿವೃದ್ಧಿ ಯೋಜನೆಗಳನ್ನು ಕ್ರೋಢೀಕರಿಸಿ ಒಟ್ಟಾರೆ ಜಿಲ್ಲೆಗಾಗಿ ಒಂದು ಅಭಿವೃದ್ಧಿ ಯೋಜನೆಯ ಕರಡನ್ನು ಸಿದ್ಧಗೊಳಿಸುತ್ತದೆ.

**ಹಣಕಾಸು ಆಯೋಗ:** ಸಂವಿಧಾನದ ೨೪೩ (ಐ) ವಿಧಿಯ ಹಣಕಾಸು ಆಯೋಗಕ್ಕೆ ಅವಕಾಶ ಮಾಡಿಕೊಟ್ಟಿದೆ. ಒಂದು ವರ್ಷದ ಅವಧಿಯೊಳಗೆ ಅನಂತರ ಪ್ರತಿ ಐದು ವರ್ಷಕ್ಕೊಮ್ಮೆ ಹಣಕಾಸು ಆಯೋಗವನ್ನು ರಚಿಸಬೇಕು ಅದು ರಾಜ್ಯ ಸರ್ಕಾರ ಮತ್ತು ಸ್ಥಳೀಯ ಸರ್ಕಾರಗಳ ನಡುವಿನ ಹಣಕಾಸಿನ ಸಂಬಂಧಗಳಿಗೆ ಅತಿ ಮುಖ್ಯವಾಗಿ ರಾಜ್ಯ ಸರ್ಕಾರದಿಂದ ಅವುಗಳ ಕಡೆಗೆ ಹರಿಯಬೇಕಾದ ಹಣದ ಬಗ್ಗೆ ಶಿಫಾರಸ್ಸುಗಳನ್ನು ಮಾಡಬೇಕಾಗಿದೆ. ರಾಜ್ಯ ಸರ್ಕಾರವು ಅರ್ಥಶಾಸ್ತ್ರಜ್ಞರಾದ ಡಾ.ಜಿ. ತಿಮ್ಮಯ್ಯನವರ ನೇತೃತ್ವದಲ್ಲಿ ಅರ್ಥಶಾಸ್ತ್ರದಲ್ಲಿ ಡಾ. ಅಬ್ದುಲ್ ಅಜೀಜ್ ಮತ್ತು ಶ್ರೀ ಅಗರವಾಲ ಸದಸ್ಯ ಕಾರ್ಯದರ್ಶಿ ಆಗಿರುವ ರಾಜ್ಯ ಹಣಕಾಸು ಆಯೋಗವನ್ನು ಪಡೆದಿದೆ. ಇನ್ನೂ ಕೆಲವು ವಿವರಗಳು ಮತ್ತು ಅಂಕಿ–ಅಂಶಗಳಿಗಾಗಿ ಆಯೋಗವು ಕಾಯುತ್ತಿದೆ ಅದರು ಸಹ ಆಯೋಗವು ವರದಿಯನ್ನು ಬಹುಮಟ್ಟಿಗೆ ಸಿದ್ಧಪಡಿಸಿದೆ.

**ಸಮಗ್ರ ಪರಿಶೀಲನೆ:** ೧೯೯೩ರ ಪಂಚಾಯತ್ ಕಾಯಿದೆಯ ಸಮಗ್ರ ಪರಿಶೀಲನೆ ನಡೆಸಲು ಮತ್ತು ವಿವಿಧ ವರ್ಗಗಳ ಮೀಸಲಾತಿ ಬಗ್ಗೆ ಇತ್ತೀಚಿನ ವಿಶೇಷಾಜ್ಞೆ ಹಾಗೂ ಪಂಚಾಯತ್ ರಾಜ್ ವ್ಯವಸ್ಥೆಯು ಹೆಚ್ಚು ಪರಿಣಾಮಕಾರಿಯಾಗಿ ಮತ್ತು ಜನಾಧಾರಿತ ಪದ್ಧತಿಯಾಗಲು ಆಗತ್ಯವಾದ ಬದಲಾವಣೆಗಳನ್ನು ಸಲಹೆ ಮಾಡಲು, ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ಮಾಜಿ ಉಪ–ಗೌರ್ವನರ್ ಆಗಿದ್ದ ಡಾ.ಕೆ.ಎಸ್. ಕೃಷ್ಣಸ್ವಾಮಿ ಅವರ

ಅಧ್ಯಕ್ಷತೆಯಲ್ಲಿ ಐದು ಜನರ ಸಮಿತಿಯನ್ನು ನೇಮಿಸಿಲಾಯಿತು. ಅಧ್ಯಕ್ಷರ ರಾಜೀನಾಮೆಯಿಂದಾಗಿ ಅಂದು ಮಾಜಿ ಮುಖ್ಯ ಕಾರ್ಯದರ್ಶಿ ಆಗಿದ್ದ ಪಿ.ಆರ್. ನಾಯಕ್ ಅಧ್ಯಕ್ಷರಾಗಬೇಕಾಯಿತು.

**ತರಬೇತಿ ಮಹತ್ವ:** ಪ್ರಧಾನಿ ನರಸಿಂಹರಾವ್ ಪಂಚಾಯಿತಿಯ ಚುನಾಯಿತ ಸದಸ್ಯರಿಗೆ ಹಾಗೂ ಅಧಿಕಾರ ವರ್ಗದವರಿಗೆ ತರಬೇತಿಯ ಅಗತ್ಯತೆಯನ್ನು ಕೆಳಗಿನ ರೀತಿ ಸೂಚಿಸಿದ್ದಾರೆ. ಅತಿ ಹೆಚ್ಚಿನ ಸಂಖ್ಯೆಯ ಸದಸ್ಯರು ದುರ್ಬಲ ಮತ್ತು ಹಿಂದುಳಿದ ವರ್ಗಗಳಿಂದ ಬರುತ್ತಾರೆ. ಅವರಿಗೆ ಅವರ ಪಾತ್ರ ಜವಾಬ್ದಾರಿ ಮತ್ತು ಪಂಚಾಯತ್ ರಾಜ್ ವ್ಯವಸ್ಥೆಯ ತತ್ವಗಳ ಬಗ್ಗೆ ವ್ಯಾಪಕ ತರಬೇತಿ ನೀಡಬೇಕು. ತಮ್ಮ ಕಾರ್ಯಗಳನ್ನು ಸರಿಯಾಗಿ ನಿರ್ವಹಿಸಲು ಅವರಿಗೆ ನಿಯಮಗಳು, ವಿಧಾನಗಳು ಸ್ಥಳೀಯ ಸಂಸ್ಥೆಗಳು ಮತ್ತು ರಾಜ್ಯ ಸಕಾರ ಕಾರ್ಯನಿರ್ವಹಿಸುವ ವಿಧಾನಗಳ ತಿಳುವಳಿಕೆ ಇರಬೇಕು. ಈ ತರಬೇತಿಯು ಒಮ್ಮೆ ಮಾತ್ರವೇ ನೀಡುವಂತಹುದಾಗಿರಬಾರದು. ಅವರ ತಿಳುವಳಿಕೆ ಮತ್ತು ಕೌಶಲ್ಯವನ್ನು ಬೆಳೆಸಿಕೊಳ್ಳಲು ವರ್ತಮಾನದ ತನಕದ ಅರಿವು ಬರಲು ಅಗತ್ಯವಾಗುವಂತೆ ಮತ್ತೆ ಮತ್ತೆ ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸಬೇಕು ಅದೇ ರೀತಿ ಪಂಚಾಯತ್ ರಾಜ್ ಅಧಿಕಾರವರ್ಗದವರಿಗೆ ತರಬೇತಿಯ ವ್ಯವಸ್ಥೆಯು ಇರಬೇಕು. ಈ ದಿಕ್ಕಿನಲ್ಲಿ ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಇಲಾಖೆಯು ತರಬೇತಿ ಕಾರ್ಯಕ್ರಮವೊಂದನ್ನು ರೂಪಿಸುತ್ತದೆ ಬೆಂಗಳೂರಿನ ಸಾಮಾಜಿಕ ಮತ್ತು ಆರ್ಥಿಕ ಬದಲವಾಣೆಯ ಅದ್ಯಯನ ಸಂಸ್ಥೆಯು ಜಿಲ್ಲಾ ಪಂಚಾಯತ್ ಸದಸ್ಯರು, ಉಪಾಧ್ಯಕ್ಷರು ಮತ್ತು ಅಧ್ಯಕ್ಷರಿಗೆ ನಾಲ್ಕು ದಿನಗಳ ತರಬೇತಿ ನೀಡುತ್ತಿದೆ. ಮೈಸೂರಿನಲ್ಲಿರುವ ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯು ತಾಲ್ಲೂಕು ಪಂಚಾಯಿತಿಯ ಸದಸ್ಯ, ಉಪಾಧ್ಯಕ್ಷ ಮತ್ತು ಅಧ್ಯಕ್ಷರುಗಳಿಗೆ ನಾಲ್ಕು ದಿನಗಳ ತರಬೇತಿ ನೀಡುತ್ತಿದೆ.

**ಸ್ಥಳೀಯ ಅಧಿಕಾರ ಸ್ಥಳೀಯರಿಗೇ ಅಥವಾ ಅಧಿಕಾರಿಗಳಿಗೇ?:** ಚುನಾಯಿತ ಸದಸ್ಯರಿಗಿಂತ ಆಡಳಿತ ಅಧಿಕಾರ ವರ್ಗಕ್ಕೆ ಹೆಚ್ಚಿನ ಅಧಿಕಾರವನ್ನು ಕೊಡಲಾಗಿದ್ದು, ಪಂಚಾಯಿತಿಯ ಅಧ್ಯಕ್ಷ ಕೇವಲ ಅಲಂಕಾರಿಕ ವ್ಯಕ್ತಿಯಾಗಿದ್ದಾನೆ ; ಸ್ಥಳೀಯರ ಅಶೋತ್ತರಗಳನ್ನು ಈಡೇರಿಸಲು ಆಗತ್ಯವಾದ ಅಧಿಕಾರಿಗಳು ಆತನಿಗಿಲ್ಲ; ಆತನ ಕಛೇರಿಯಲ್ಲಿ ಏನಾಗುತ್ತಿದೆ ಎಂಬುದೇ ಈತನ ಗಮನಕ್ಕೆ ಬರುವುದಿಲ್ಲ. ಇತ್ಯಾದಿಯಾಗಿ ಅಧ್ಯಕ್ಷರ ಅಧಿಕಾರದ ಬಗ್ಗೆ ೧೪-೧೦-೧೯೯೫ ರಂದು ನಡೆದ ವಿಚಾರಗೊಷ್ಠಿಯಲ್ಲಿ ಬೆಂಗಳೂರು ಗ್ರಾಮೀಣ ಜಿಲ್ಲಾ ಪಂಚಾಯಿತಿಯ ಅಧ್ಯಕ್ಷರು ಅಭಿಪ್ರಾಯ ಪಟ್ಟರು.(Conference on"Panchayati Raj and People's Aspirartion" organized by the Indian Institute of Public Administration, Karnataka Regional Branch) ಈ ಪರಿಸ್ಥಿತಿಯು ಸ್ಪಷ್ಟವಾಗಿ ೭೩ನೇಯ ತಿದ್ದುಪಡಿಯ ಅಂತಃಸತ್ವಕ್ಕೆ ಹಾಕಿದ ಪೆಟ್ಟಾಗಿದೆ. ಸಹಜವಾಗಿಯೇ ಅಧ್ಯಕ್ಷರುಗಳ ಒಕ್ಕೊರಲಿನ ಹೇಳಿಕೆಯ

ಸರ್ಕಾರದ ಮನಕ್ಕೆ ನಾಟಿದೆ. ಈ ಸಮಸ್ಯೆಯನ್ನೂ ಪರಿಶೀಲಿಸಿ ನಾಯಕ್ ಸಮಿತಿ ಶಿಫಾರಸ್ಸುಗಳನ್ನು ಮಾಡುವುದೆಂದು ನಿರೀಕ್ಷಿಸಲಾಗಿದೆ.

ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಂ.ಪಿ ಪ್ರಕಾಶ್ ಪ್ರಕಾರ "ಪಂಚಾಯತ್ ರಾಜ್ ವ್ಯವಸ್ಥೆಯು, ಖಂಡಿತವಾಗಿಯೂ ಒಂದು ರಾಜಕೀಯ ಸಂಸ್ಕೃತಿಕ ಮತ್ತು ಜೀವನದ ದೃಷ್ಟಿಕೋನವಾಗಿದೆ. ಅಷ್ಟೇ ಅಲ್ಲ, ಅದು ರಾಜ್ಯ ಮತ್ತು ಪಂಚಾಯತ್‌ಗಳ ನಡುವೆ ಅಧಿಕಾರ ಮತ್ತು ಹಣಕಾಸಿನ ವಿಕೇಂದ್ರಿಕರಣವಾಗಿದೆ".

**ಉಪಸಂಹಾರ**

ಒಟ್ಟಾರೆಯಾಗಿ ಹೇಳುವುದಾದರೆ, ಭಾರತ ಸಂವಿಧಾನದ ೭೩ನೇ ತಿದ್ದುಪಡಿಯು ಕರ್ನಾಟಕದ ೧೯೯೩ರ ಕಾಯ್ದೆಗೆ ಭದ್ರಬುನಾದಿಯನ್ನಾಕಿತು ೭೩ನೇ ತಿದ್ದುಪಡಿಯನುಸಾರವಾಗಿ ಭಾರತದಲ್ಲಿ ಪಂಚಾಯತ್ ರಾಜ್ ಕಾಯ್ದೆ ಅನುಷ್ಠಾನಗೊಳಿಸಲಾಯಿತು.

ಕೇಂದ್ರದಲ್ಲಿ ರಾಜೀವ್‌ಗಾಂಧಿ ಸರ್ಕಾರ ಮತ್ತು ಪಿ.ವಿ. ಸಿಂಗ್ ಸರ್ಕಾರಗಳು ಬಲವಂತರಾಯ್ ಮೆಹ್ತಾ, ಅಶೋಕ್ ಮೆಹ್ತಾರವರು ವರದಿಯನ್ನು ಮುಖ್ಯ ಆಧಾರವಾಗಿಟ್ಟುಕೊಂಡು ಪಂಚಾಯತ್ ರಾಜ್ ಸಲಹೆಯನ್ನು ಸಿದ್ಧಗೊಳಿಸಿದವು.

ಅದೇ ರೀತಿ ಕರ್ನಾಟಕದಲ್ಲಿ ೧೯೮೫ರಲ್ಲಿ ಅಂದಿನ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರು ಮತ್ತು ಗ್ರಾಮೀಣ ಅಭಿವೃದ್ಧಿ ಖಾತೆಯ ಮಂತ್ರಿಯಾಗಿದ್ದ ಶ್ರೀ ಅಬ್ದುಲ್ ನಜೀರ್ ಸಾಬ್‌ರವರು ದೂರದೃಷ್ಟಿಯಿಂದಾಗಿ ೧೯೮೫ರಲ್ಲಿ ಪಂಚಾಯತ್ ರಾಜ್ ಕಾಯ್ದೆ ಜಾರಿಗ ಬಂದಿತಾದರೂ ಇದು ಉದ್ದೇಶಿತ ಗುರಿ ಸಾಧಿಸದೇ ವಿಫಲಗೊಂಡ ನಂತರ ೧೯೯೩ರ ಏಪ್ರಿಲ್ ೨೦ ರಂದು ರಾಷ್ಟ್ರಪತಿಗಳ ಸಹಿಯೊಂದಿಗೆ ೧೯೯೩ರ ಕರ್ನಾಟಕ ಕಾಯ್ದೆ ಜಾರಿಗೆ ಬಂದಿತು. ಇದು ಕರ್ನಾಟಕದಲ್ಲಿ ಯಶಸ್ಸು ಕಂಡು, ಆಡಳಿತದಲ್ಲಿ ಹೊಣೆಗಾರಿಕೆ ಮತ್ತು ಪಾರದರ್ಶಕತೆಗೆ ಒತ್ತು ಕೊಡಲಾಗುತ್ತಿದೆ.

೧೯೯೩ರ ಕರ್ನಾಟಕ ಪಂಚಾಯತ್ ರಾಜ್ ವ್ಯವಸ್ಥೆಯ ಅಡಿಯಲ್ಲಿ ಹಲವಾರು ಸುಧಾರಣೆಯನ್ನು ತರಲಾಯಿತು. ಅಧಿಕಾರವನ್ನು ಹಂತ-ಹಂತವಾಗಿ ವಿಭಜನೆ ಮಾಡಿ ಅಂದರೆ ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ, ಜಿಲ್ಲಾ ಪಂಚಾಯತಿ ಮೂಲಕ ಸ್ಥಳೀಯ ಸರ್ಕಾರಗಳಿಗೆ ಹಾಗೂ ಜನರಿಗೆ ಸ್ವಾಯತ್ತತೆಯನ್ನು ಕಲ್ಪಿಸಲಾಗಿದೆ.

ಅಧ್ಯಾಯ : ನಾಲ್ಕು

# ಬಳ್ಳಾರಿ ಜಿಲ್ಲೆಯ ಐತಿಹಾಸಿಕ ಮತ್ತು ಭೌಗೋಳಿಕ ಹಿನ್ನಲೆ

ೞ.೧. ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ೞ.೨. ಜಿಲ್ಲೆಯ ಹುಟ್ಟು ಮತ್ತು ಮಹತ್ವ

ೞ.೩. ಜಿಲ್ಲೆಯ ನೈಸರ್ಗಿಕ ಸಂಪನ್ಮೂಲಗಳು

ೞ.ೞ. ಜಿಲ್ಲೆಯ ಜನಸಂಖ್ಯೆ

ೞ.೫. ಜಿಲ್ಲೆಯ ಸಾಮಾಜಿಕ ಹಿನ್ನೆಲೆ

ೞ.೬. ಜಿಲ್ಲೆಯ ಸಾಕ್ಷರತೆಯ ಪ್ರಮಾಣ

ೞ.೭. ಜಿಲ್ಲೆಯ ಆರ್ಥಿಕ ಹಿನ್ನೆಲೆ

ೞ.೮. ಜಿಲ್ಲೆಯ ರಾಜಕೀಯ ಹಿನ್ನೆಲೆ

ೞ.೯. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗ್ರಾಮಪಂಚಾಯಿತಿಗಳ ಪರಿಚಯ

# ಅಧ್ಯಾಯ - ನಾಲ್ಕು

# ಬಳ್ಳಾರಿ ಜಿಲ್ಲೆಯ ಐತಿಹಾಸಿಕ ಮತ್ತು ಭೌಗೋಳಿಕತೆ ಹಿನ್ನಲೆ




ಬಳ್ಳಾರಿ ಜಿಲ್ಲೆ

### ೪.೧. ಬಳ್ಳಾರಿ ಜಿಲ್ಲೆಯ ಐತಿಹಾಸಿಕ ಹಿನ್ನಲೆ

ಐತಿಹಾಸಿಕವಾಗಿ ನೋಡುವುದಾದರೆ ಬಳ್ಳಾರಿ ಜಿಲ್ಲೆಯು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೂ ಪೂರ್ವದಲ್ಲಿ ಕಲ್ಯಾಣ ಚಾಲುಕ್ಯರು, ತಲಕಾಡಿನ ಗಂಗರು ಕಂಪಲಿ ಸಿಂಧರು ವಂಶಸ್ಥರ ಆಡಳಿತಕ್ಕೆ ಒಳಪಟ್ಟ ಪ್ರದೇಶವಾಗಿತ್ತು ಮಾನವನು ನೆಲನಿಂತಿರುವ ಕುರಿತು ಮಾಹಿತಿ ನೀಡುವ ಪ್ರಾಗಿತಿಹಾಸಿಕ ಕಾಲದ ಚಿತ್ರಣ ಸಂಗನಕಲ್ಲು, ತೆಕ್ಕಲಕೋಟೆ, ದರೋಜಿ ಕರಡಿಧಾಮ, ಹಂಪಿ, ತಿಮ್ಮಾಲಾಪುರ, ರಾಮಸಾಗರ, ಬುಕ್ಕಸಾಗರ, ಗುಡೇಕೋಟೆ, ಸೊಂಡೂರು ಸುತ್ತ ಮುತ್ತಲಿನ ಬೆಟ್ಟ-ಗುಡ್ಡಗಳಲ್ಲಿ ಹಳೆ ಶಿಲಾಯುಗ ಮತ್ತು ನೂತನ ಶಿಲಾಯುಗದ ಕುರುಹುಗಳು ಕಂಡುಬರುತ್ತದೆ.

ಕ್ರಿ.ಶ. ೧೧ನೇ ಶತಮಾನದಲ್ಲಿ ಕಲ್ಯಾಣಿ ಚಾಲುಕ್ಯರ ದೊರೆ ಜಗದೇಕಮಲ್ಲ ಜಯಸಿಂಹದೇವನ ಸಾಮಂತನಾದ ನೊಳಂಬ ಪಲ್ಲವ ಪೆರ್ಮಾಡಿ ಎಂಬುವವನು ಈ ಪ್ರದೇಶವನ್ನು ಆಳಿದ ಎಂಬ ಮೂಲಗಳು ಶಾಸನದ ಮೂಲಕ ತಿಳಿದು ಬರುತ್ತದೆ.

ಕ್ರಿ.ಶ. ೧೦೮೪ರ ಸುಮಾರಿಗೆ ಬಳ್ಳಾರಿಯ ಆಡಳಿತದ ಕೇಂದ್ರಬಿಂದುವಾಗಿದ್ದ ಕಂಪಲಿಯನ್ನು ಚಾಲುಕ್ಯರ ಒಂದನೇ ಸೋಮೇಶ್ವರನು ವಶಪಡಿಸಿಕೊಂಡನೆಂದು ತಿಳಿದುಬರುತ್ತದೆ, ನಂತರ ಹೊಯ್ಸಳ ಅರಸರು ರಾಜ್ಯಭಾರ ಮಾಡಿದರೆಂಬ ಕುರುಹುಗಳಿವೆ.

ಕ್ರಿ.ಶ. ೧೨೮೦ರ ದಶಕದ ಅವಧಿಯಲ್ಲಿ ಸಿಂಧರ ವಂಶಸ್ಥರು ಕಂಪಲಿ ಪ್ರದೇಶವನ್ನು ಆಳ್ವಿಕೆ ನಡೆಸುತ್ತಿದ್ದಾಗ ವಿದ್ಯಾರಣರ ಮಾರ್ಗದರ್ಶನಲ್ಲಿ ಹರಿಹರ ಮತ್ತು ಬುಕ್ಕ ಸಹೋದರರು ವಿಜಯನಗರ ಸಾಮಾಜ್ರ್ಯವನ್ನು ಸ್ಥಾಪಿಸಿದರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ನಂತರ ದಕ್ಷಿಣದ ಪ್ರಾಂತ್ಯದ ಎಲ್ಲಾ ಪ್ರದೇಶಗಳಿಗೆ ರಕ್ಷಣೆ ದೊರೆಯಿತು. ವಿಜಯನಗರದ ಅರಸರು ಸಾಮ್ರಾಜ್ಯವನ್ನು ವ್ಯಾಪಕವಾಗಿ ವಿಸ್ತರಿಸುತ್ತಾ ತುಳು, ಸಾಳ್ವ, ಅರವೀಡು, ಸಂಗಮ ವಂಶಸ್ಥರು, ಈ ಸಾಮ್ರಾಜ್ಯವನ್ನು ಆಳ್ವಿಕೆ ಮಾಡುತ್ತಾ ಬರುತ್ತಾರೆ. ವಿಜಯನಗರದ ಕೊನೆಯ ಪ್ರಬಲ ಅರಸನಾದ ಅಳಿಯ ರಾಮರಾಯನು ಸುಲ್ತಾನ ರಕ್ಕಸ ತಂಗಡಗಿ ಯುದ್ದದಲ್ಲಿ ಹತನಾದ ನಂತರ ವಿಜಯನಗರ ಸಾಮ್ರಾಜ್ಯವು ಅವನತಿಯ ಹಾದಿ ಹಿಡಿಯಿತು. ಈ ಸಂಧರ್ಭದಲ್ಲಿ ಬಳ್ಳಾರಿ ಪ್ರಾಂತ್ಯವನ್ನು ಹರಪನಹಳ್ಳಿಯ ಪಾಳೆಗಾರರು ತಮ್ಮ ವಂಶಕ್ಕೆ ತೆಗೆದುಕೊಂಡರು (ಆಳ್ವಿಕೆ ನಡೆಸಿದರು).

ನಂತರ, ಮರಾಠರು, ಹೈದರಾಬಾದಿನ ನಿಜಾಮರು, ಕ್ರಿ.ಶ. ೧೮೦೦ರವರೆಗೆ ಆಳ್ವಿಕೆ (ಬಳ್ಳಾರಿ ಜಿಲ್ಲಾ ಗೆಜೆಟಿಯರ-೧೯೦೪ ಪು. ೪೫) ಮಾಡಿದರು ಕ್ರಿ.ಶ. ೧೮೦೦ ಡಿಸೆಂಬರ್‌ನಲ್ಲಿ ನಿಜಾಮನು ತನ್ನ ಆಳ್ವಿಕೆಗೆ ಒಳಪಟ್ಟಿದ ಬಳ್ಳಾರಿ ಪ್ರಾಂತ್ಯವನ್ನು ಬ್ರಿಟಿಷರಿಗೆ ದತ್ತಿಯಾಗಿ ಬಿಟ್ಟುಕೊಟ್ಟನು ಆಗಿನಿಂದ (ಕ್ರಿ.ಶ ೧೮೦೦) ಸ್ವಾತಂತ್ರ್ಯ ಬರುವವರೆಗೂ ಬ್ರಿಟಿಷರು ನೇರವಾಗಿ

ಬಳ್ಳಾರಿ ಪ್ರಾಂತ್ಯವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡರು. (ಬಳ್ಳಾರಿ ಜಿಲ್ಲಾ ಸ್ವಾತಂತ್ರ್ಯ ಹೋರಾಟ ಕ.ವಿ.ವಿ. ಹಂಪಿ ೧೯೯೮, ೨೧)

**೪.೨. ಬಳ್ಳಾರಿ ಜಿಲ್ಲೆಯ ಹುಟ್ಟು:** ಕ್ರಿ.ಶ. ೧೨ನೇ ಶತಮಾನದಲ್ಲಿ ರಚಿತಗೊಂಡ ಯಶೋಧರ ಚರಿತೆಯಲ್ಲಿ ಬಳ್ಳಾರಿ ಎಂಬ ಪದ ಪ್ರಯೋಗಗೊಂಡಿದೆ. ಬಳ್ಳಾರಿ ಎಂದು ದೇವತೆ, ಸ್ತ್ರೀದೈವ ಎಂಬ ಅರ್ಥಗಳಿವೆ. ಬಳ್ಳಾರಿಯ ಆದಿ ದೈವ ಬಳ್ಳಾರಿ (ಈಗಿನ ಕನಕದುರ್ಗಮ್ಮ ದೇವಿಯಿಂದಾಗಿಯೇ ಈ ಪ್ರಾಂತ್ಯ /ಊರಿಗೆ ಬಳ್ಳಾರಿ ಎಂಬ ಹೆಸರು ಬಂದಿದೆ ಎಂಬ ವಾದ ಇದೆ. ಹಾಗೆಯ ಬೈಲೂರು, ಸಿಂಧಿಗೇರಿ, ಕೊಳೂರು, ಕುರುಗೋಡುಗಳಲ್ಲಿ ದೊರೆತ ಶಿಲಾಶಾಸನಗಳಲ್ಲಿ ಬಳ್ಳಾರಿ ಎಂಬ ಪದ ಬಳಕೆಯಾಗಿರುವುದು ಕಂಡುಬರುತ್ತದೆ, ಹೊಯ್ಸಳ ಶಾಸನಗಳಲ್ಲಿ (ಬೇಲೂರು ಶಾಸನ ನಾಗಮಂಗಲ ಶಾಸನ) ಬಳ್ಳಾರಿ ಪದದ ಉಲ್ಲೇಖವಿರುವುದು ಕಂಡುಬರುತ್ತದೆ (ಗೆಜೆಟೆಡ್ ಆಫ್ ಇಂಡಿಯಾ ಮೈಸೂರು ಸ್ಟೇಟ್) (ಬಳ್ಳಾರಿ ಜಿಲ್ಲೆ ಸರ್ಕಾರಿ ಮುದ್ರಣಾಲಯ, ಬೆಂಗಳೂರು, ೧೯೭೨)

ಬ್ರಿಟಿಷ ಭಾರತದ ಆಳ್ವಿಕೆ ಕಾಲದಲ್ಲಿ ಆಗಿನ ಹಳೇ ಮದ್ರಾಸ್ ಪ್ರಾಂತ್ಯಕ್ಕೆ ಬಳ್ಳಾರಿ ಸೇರ್ಪಡೆಗೊಂಡಿತ್ತು. ಕ್ರಿ.ಶ ೧೮೦೦ರಲ್ಲಿ ಬಳ್ಳಾರಿ ಜಿಲ್ಲೆಗೆ ಪ್ರಥಮ ಜಿಲ್ಲಾ ಕಲೆಕ್ಟರಾಗಿ ಸರ್ ಥಾಮಸ್ ಮನ್ರೊರವರು ನೇಮಕಗೊಂಡಿದ್ದರು, ಸ್ವಾತಂತ್ರ್ಯದ ನಂತರ ಅಕ್ಟೋಬರ್ ೧, ೧೯೫೩ ರಲ್ಲಿ ಭಾಷಾವಾರು ಪ್ರಾಂತ್ಯಗಳ ವಿಂಗಡಣೆಯಾದ ತರುವಾಯ ಬಳ್ಳಾರಿಯು ಮೈಸೂರು ರಾಜ್ಯಕ್ಕೆ ಸೇರಿಸಲ್ಪಟ್ಟಿತು.

**ಬಳ್ಳಾರಿ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ:**

ಕರ್ನಾಟಕ ಒಟ್ಟು ವಿಸ್ತೀರ್ಣವು ೧,೯೧,೭೯೧ ಚ.ಕಿ.ಮಿ.ಗಳಷ್ಟಿದೆ ಅದರಲ್ಲಿ ಬಳ್ಳಾರಿ ಜಿಲ್ಲೆಯ ಒಟ್ಟು ವಿಸ್ತೀರ್ಣವು ೮.೪೫೦ ಚ.ಕಿ.ಮೀ.ಗಳಾಗಿದೆ, ಅಂದರೆ ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿಯ ಒಟ್ಟು ವಿಸ್ತೀರ್ಣವು ಶೇ. ೪.೪೦ ಗಳಷ್ಟಾಗಿದೆ.

ಬಳ್ಳಾರಿ ಜಿಲ್ಲೆಯು ಏಳು ತಾಲೂಕುಗಳನ್ನು ಒಳಗೊಂಡಿದೆ ಈ ಜಿಲ್ಲೆಯ ಪ್ರತಿಯೊಂದು ತಾಲೂಕಿನ ವಿಸ್ತೀರ್ಣವು ಈ ಕೆಳಗಿನಂತಿದೆ.

ಬಳ್ಳಾರಿ ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಹಡಗಲಿ ತಾಲೂಕಿನ ವಿಸ್ತೀರ್ಣವು ೯೪೭೮೨ ಚ.ಕಿ.ಮೀ (ಶೇ. ೧೧೨೯) ಗಳಿದೆ. ಅದೇ ರೀತಿ ಹಗರಿಬೊಮ್ಮನಹಳ್ಳಿ ತಾಲೂಕು ೯೭೩.೯೫ ಚ.ಕಿ.ಮೀ. (ಶೇ.೧೧.೯೦) ಹೊಸಪೇಟೆ ತಾಲೂಕು ೯೦೪.೨೦ ಚಕೀಮಿ (ಶೇ.೧೦.೭೯) ಸಿರುಗುಪ್ಪ ತಾಲೂಕು ೧.೦೩ ೯೧೭ ಚ.ಕಿ.ಮೀ (ಶೇ.೧೨.೩೩ ಬಳ್ಳಾರಿ ತಾಲೂಕು ೧.೯೮೮.೫೯ ಚ.ಮೀ (ಶೇ.೧೯.೯೯) ಸೊಂಡೂರು ತಾಲೂಕು ೧.೧೫೨.೪೨ ಚ.ಕಿ.ಮೀ (ಶೇ ೧೩.೭೩) ಕೂಡ್ಲಿಗಿ ತಾಲೂಕು ೧.೯೧೮.೮೭ ಚ.ಕಿ.ಮೀ (ಶೇ.೨೦.೨೭ರಷ್ಟು ವಿಸ್ತೀರ್ಣವನ್ನು ಒಳಗೊಂಡಿದೆ.

**೪.೩ ಜಿಲ್ಲೆಯ ನೈಸರ್ಗಿಕ ಸಂಪನ್ಮೂಲಗಳು:**

ತುಂಗಾಭದ್ರಾ ನದಿಯು ನೈಸರ್ಗಿಕ ಮರೆಯಾಗಿದ್ದು, ಪಶ್ಚಿಮ ಕೊಪ್ಪಳ ಜಿಲ್ಲೆಯನ್ನು ಹಾಗೂ ಉತ್ತರದಲ್ಲಿ ರಾಯಚೂರು ಜಿಲ್ಲೆಯನ್ನು ಪ್ರತ್ಯೇಕಿಸುತ್ತದೆ. ಪೂರ್ವದಲ್ಲಿ ಹಗರಿ ನದಿಯು ಹರಿಯುತ್ತದೆ. ಜಿಲ್ಲೆಯ ಪೂರ್ವಭಾಗದಲ್ಲಿ ಸಾಮಾನ್ಯವಾಗಿ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿರುತ್ತದೆ. ಸೊಂಡೂರು ತಾಲೂಕಿನಲ್ಲಿ ಎತ್ತರವಾದ ಗುಡ್ಡಗಳಿದ್ದು, ಅವುಗಳ ಎತ್ತರವು ಸಮುದ್ರ ಮಟ್ಟದಿಂದ ೩೪೦೦ ಅಡಿ ಇರುತ್ತದೆ.

ನೈಸರ್ಗಿಕವಾಗಿ ಖನಿಜ ಸಂಪತ್ತು ಹೇರಳವಾಗಿ ಲಭ್ಯವಿರುವುದರಿಂದ ಬಳ್ಳಾರಿ ಜಿಲ್ಲೆ, ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಶ್ರೀಮಂತ ಜಿಲ್ಲೆಯಾಗಿದೆ ಜಿಲ್ಲೆಯ ಶ್ರೀಮಂತಿಕೆ ಕೇವಲ ಗಣಿ ಮಾಲೀಕರಿಗೆ ಹಾಗೂ ಗಣಿ ಉದ್ಯಮಿಗಳಿಗೆ ಸೀಮಿತವಾಗಿದೆಯೇ ಹೊರತು, ಜನಸಮಾನ್ಯರಿಗೆ ಕನ್ನಡಿಯೊಳಗಿನ ಗಂಟಾಗಿದೆ. ವಿಶ್ವದಲ್ಲೇ ಉತ್ಕೃಷ್ಟ ಗುಣಮಟ್ಟದ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜ ಅದಿರು ನಿಕ್ಷೇಪಗಳು ಜಿಲ್ಲೆಯಲ್ಲಿವೆ ಪರಿಣಾಮವಾಗಿ ಜಿಲ್ಲೆಯಲ್ಲಿ ಬೃಹತ್ ಕಂಪನಿಗಳು ಕಬ್ಬಿಣ ಮತ್ತು ಉಕ್ಕು ಉದ್ದಿಮೆ ಮೇಲಿನ ಬಂಡವಾಳ ಪ್ರಸ್ತುತ ಜಿಲ್ಲೆಯಲ್ಲಿ ಒಟ್ಟು ೨೩ ಸಣ್ಣ ಮತ್ತು ಬೃಹತ್ ಪ್ರಮಾಣದ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಗಳು ಉತ್ಪಾದನೆಯಲ್ಲಿ ತೊಡಗಿವೆ. ಔದ್ಯೋಗಿಕವಾಗಿ ಮತ್ತು ನೀರಾವರಿಯಿಂದಲೂ ವಂಚಿತವಾದ ತಾಲೂಕುಗಳಾಗಿವೆ, ಜಿಲ್ಲೆಯ ಪೂರ್ವಭಾಗದ ತಾಲೂಕುಗಳನ್ನು ಅಭಿವೃದ್ಧಿ ಪ್ರದೇಶಗಳೆಂದು ಹಾಗೂ ಪಶ್ಚಿಮ ಭಾಗದ ತಾಲೂಕುಗಳನ್ನು ಹಿಂದುಳಿದ ಪ್ರದೇಶಗಳೆಂದು ಪರಿಗಣಿಸಲಾಗಿದೆ. ಹೀಗಾಗಿ ಎರಡು ಭಾಗಗಳ ನಡುವೆ ಆರ್ಥಿಕ ಅಸಮಾನತೆ ಕಂಡುಬರುವುದರಿಂದ ಬಳ್ಳಾರಿ ಜಿಲ್ಲೆಯು ಹಿಂದುಳಿದ ಜಿಲ್ಲೆಯಾಗಿದೆ.

**ನೈಸರ್ಗಿ.ಕ ಸಂಪನ್ಮೂಲ:**

**ಮಣ್ಣಿನ ನಮೂನೆ:** ಜಿಲ್ಲೆಯಲ್ಲಿ ಕಪ್ಪು ಮತ್ತು ಕೆಂಪು ಮಣ್ಣಿನ ನಮೂನೆಗಳಿವೆ, ಬಳ್ಳಾರಿ ತಾಲೂಕು, ಒಂದರಲ್ಲಿ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿದೆ. ಕಪ್ಪು ಮಣ್ಣು ಶೇ. ೬೦ರಷ್ಟು ಜೇಡಿ ಮಣ್ಣಿನಿಂದ ಕೂಡಿರುತ್ತದೆ. ಹೊಸಪೇಟೆ, ಹಡಗಲಿ, ಕೂಡ್ಲಿಗಿ, ಮತ್ತು ಸೊಂಡೂರು ತಾಲೂಕುಗಳಲ್ಲಿ ಮರಳು ಮಿಶ್ರಿತ ಕೆಂಪುಮಣ್ಣು ಜಿಗಿಟು ಮಣ್ಣು ದೊರೆಯುತ್ತದೆ. ತುಂಗಾಭದ್ರ ಜಲಾಶಯದಲ್ಲಿನ ಕಪ್ಪು ಮಣ್ಣಿನಲ್ಲಿ ೨ ರಿಂದ ೪ ಅಡಿಗಳವರೆಗೆ ಆಳವಾಗಿಯು ಹಾಗೂ ಮಣ್ಣಿನ ರಚನೆಯಲ್ಲಿ ಭಾರವಾಗಿಯೂ ಮತ್ತು ಶೇ. ೪೫ ರಿಂದ ೫೫ ರಷ್ಟು ಜಿಗುಟು ಮಣ್ಣಿನಿಂದ ಕೂಡಿರುತ್ತದೆ. ಭೂಗರ್ಭದಲ್ಲಿ ನೀರು ೬.೫ ಮಿ ನಿಂದ ೩೫ ಮೀಗಳ ವರೆಗೆ ಇರುತ್ತದೆ.

**ನದಿಗಳು:** ಜಿಲ್ಲೆಯಲ್ಲಿ ಮುಖ್ಯವಾದ ನದಿ ತುಂಗಾಭದ್ರಾ, ಇದರ ಉಪನದಿಗಳು ಹಗರಿ ಮತ್ತು ಚಿಕ್ಕಹಗರಿ ತುಂಗುಭದ್ರ ನದಿಯು ಪಶ್ಚಿಮ ಮತ್ತು ಉತ್ತರ ದಿಕ್ಕಿನಲ್ಲಿ

ಹರಿಯುತ್ತಿದ್ದು, ವರ್ಷದಲ್ಲಿ ಸದಾಕಾಲ ನೀರಿನಿಂದ ಕೂಡಿರುತ್ತದೆ. "ಗಂಗಾಸ್ನಾನ ತುಂಗಾಪಾನ" ಎಂಬ ನಾಣ್ಣುಡಿಯನ್ನು ಸ್ಮರಣೆಗೆ ತಂದು ಕೊಡುತ್ತದೆ, ಆದರೆ ಚಿಕ್ಕ ಹಗರಿ ನದಿಗಳಲ್ಲಿ ನೀರು ವರ್ಷದಲ್ಲಿ ಕೇವಲ ಕೇಲವು ಕಾಲ ಮಾತ್ರ ಇರುತ್ತದೆ, ನಾರಿಹಳ್ಳ ಜಲಾಶಯವು ಸೊಂಡೂರು ತಾಲೂಕಿನಲ್ಲಿದ್ದು, ತಾರಾನಗರ ಗ್ರಾಮದ ಹತ್ತಿರ ಹಳ್ಳಕ್ಕೆ ಒಡ್ಡು ಹಾಕಿ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ. ಇದೇ ರೀತಿ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಮಾಲ್ವಿ ಎಂಬ ಗ್ರಾಮದ ಹತ್ತಿರ ಚಿಕ್ಕ ಹಗರಿ ನದಿಗೆ ಅಣೆಕಟ್ಟು ಕಟ್ಟಿ ನೀರಾವರಿ ಸೌಲಭ್ಯವನ್ನು ಒದಗಿಸಲಾಗಿದೆ.

**ಹವಾಮಾನ:** ಜಿಲ್ಲೆಯ ಹವಮಾನವು ವರ್ಷದಲ್ಲಿ ಹೆಚ್ಚಿನ ಭಾಗ ಶುಲ್ಕೆವಾಗಿದ್ದು, ಬೇಸಿಗೆಯ ಉಷ್ಣಾಂಶಗಳಿಂದ ಕೂಡಿರುತ್ತದೆ. ಡಿಸೆಂಬರ್ ತಿಂಗಳನಿಂದ ಫೆಬ್ರವರಿಯವರೆಗೆ ವಾತಾವರಣ ತಂಪಾಗಿರುತ್ತದೆ. ಚಳಿಗಾಲದಲ್ಲಿ ಕನಿಷ್ಟ ಉಷ್ಣಾಂಶವು ೯.೧೦ ಶೇ. ಇದ್ದು ಗರಿಷ್ಠ ಉಷ್ಣಾಂಶವು ೩೫ ಸೆ.ವರೆಗೆ ಇರುತ್ತದೆ. ಬೇಸಿಗೆ ಕಾಲವು ಮಾರ್ಚ್‌ನಿಂದ ಮೇ-ಜೂನ್ ತಿಂಗಳವರೆಗೆ ಇದ್ದು, ರಾಜ್ಯದಲ್ಲಿಯೇ ಹೆಚ್ಚು ಉಷ್ಣಾಂಶದಿಂದ ಕೂಡಿರುತ್ತದೆ, ಬೇಸಿಗೆಯಲ್ಲಿ ಕನಿಷ್ಠ ೧೫ ರಿಂದ ೪೪ ಸೆಂ.ಮಿ. ವರೆಗೆ ಉಷ್ಣಂಶವು ಇರುತ್ತದೆ.

**ಮಳೆ:** ಜಿಲ್ಲೆಯಲ್ಲಿ ಒಟ್ಟು ೪೪ ಮಳೆ ಮಾಪನ ಕೇಂದ್ರಗಳಿದ್ದು, ಇದರಲ್ಲಿ ೪೧ ಮಳೆ ಮಾಪನ ಕೇಂದ್ರಗಳು ಕಾರ್ಯನಿರ್ವಹಿಸುತ್ತದೆ. ೨೦೧೧ ಡಿಸೆಂಬರ್ ಅಂತ್ಯಕ್ಕೆ ವಾಸ್ತವವಾಗಿ ಸರಾಸರಿ ಮಳೆ ೪೮೯.೬ ಮೀ.ಮೀ ಆಗಿರುತ್ತದೆ. ಜಿಲ್ಲೆಯ ವಾಡಿಕೆ ಮಳೆ ೬.೨೬ ಮೀ.ಮೀ ಇರುತ್ತದೆ. ಮಳೆಯು ಕನಿಷ್ಠ ಪ್ರಮಾಣದಲ್ಲಿ ಸಿರುಗುಪ್ಪ ತಾಲೂಕಿನಲ್ಲಿ ೨೩೧.೬ ಮೀ.ಮೀ ಹಾಗೂ ಗರಿಷ್ಠ ಪ್ರಮಾಣದಲ್ಲಿ ಸಂಡೂರು ತಾಲೂಕಿನಲ್ಲಿ ೬೨೫.೨ ಮೀ.ಮೀ ಮಳೆ ಆಗಿರುತ್ತದೆ.

**೪.೪. ಜಿಲ್ಲೆಯ ಜನಸಂಖ್ಯೆ:**

೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ೨೫,೩೨೨.೮೩ ಜನಸಂಖ್ಯೆ ಇದೆ, ಇದರಲ್ಲಿ ೧೨,೮೦೪,೦೨ರಷ್ಟು ಪುರುಷರು ಹಾಗೂ ೧೨,೫೧,೯೮೧ರಷ್ಟು ಸ್ತ್ರೀಯರಿದ್ದಾರೆ, ಗ್ರಾಮೀಣ ಪ್ರದೇಶದಲ್ಲಿ ೧೬.೧೩೦,೩೮ (ಶೇ.೬೪)ರಷ್ಟು ಮತ್ತು ನಗರ ಪ್ರದೇಶದಲ್ಲಿ ೯೧,೬೩,೪೫ (ಶೇ.೩೫)ರಷ್ಟು ಜನರು ವಾಸಿಸುತ್ತಿದ್ದಾರೆ, ೧೯೯೧ ಮತ್ತು ೨೦೦೧ರ ದಶಕದಲ್ಲಿ ಜಿಲ್ಲೆಯ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಶೇ.೨೧.೧೫ರಷ್ಟು ಹಾಗೂ ಶೇ ೨೧.೪೦ರಷ್ಟು ಇದೆ. ೨೦೧೧ರ ಜನಗಣತಿಯ ಪ್ರಕಾರ ಶೇ. ೨೪.೯೦ರಷ್ಟು ಬೆಳವಣಿಯಾಗಿದೆ, ೨೦೧೧ರ ಜನಗಣತಿಯಂತೆ ಜಿಲ್ಲೆಯ ವಿಸ್ತೀರ್ಣ ಪ್ರತಿ ಚದರ ಕೀ.ಮಿ. ಗೆ ೨೯೯ ಜನಸಂಖ್ಯೆ ಇದ್ದು ೨೦೧೧ ರಂತೆ ಜನಸಾಂದ್ರಾತೆಯಲ್ಲಿ ಜಿಲ್ಲೆಯು ೧೩ನೇ ಸ್ಥಾನದಲ್ಲಿ (೧೪) ಬಳ್ಳಾರಿ ಜಿಲ್ಲೆಯು ಲಿಂಗಾನುಪಾತದಲ್ಲಿಯೂ ಅಂತರವನ್ನು ಕಾಯ್ದುಕೊಂಡು

ಬಂದಿದೆ, ೨೦೧೧ರ ಜನಗಣತಿಯ ಪ್ರಕಾರ ಲಿಂಗಾನುಪಾತ ೯೬೯ ಆದರೆ ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯ ಲಿಂಗಾನುಪಾತ ೯೭೮ ಆಗಿರುತ್ತದೆ, ದಶಕದ ಜನಸಂಖ್ಯೆ ಬೆಳವಣಿಗೆ ದರವು ೨೪.೯೨ ಆಗಿದ್ದು, ೨೦೧೧ರ ಜನಸಂಖ್ಯೆ ಬೆಳವಣಿಗೆಯ ದರಕ್ಕಿಂತ (ಶೇ ೨೨.೪೧ರಷ್ಟು) ಅಧಿಕವಾಗಿರುತ್ತದೆ,

ಜನಸಂಖ್ಯಾಶಾಸ್ತ್ರದ ಪ್ರಕಾರ ಜಿಲ್ಲೆಯ ಜನಸಂಖ್ಯಾ ಗಾತ್ರವನ್ನು ಅವಲೋಕಿಸಿದಾಗ ತಿಳಿದು ಬರುವ ಅಂಶವೆಂದರೆ ಕರ್ನಾಟಕ ಜನಸಂಖ್ಯೆಯಲ್ಲಿ ಶೇ ೩.೮೪ ರಷ್ಟು ಪಾಲನ್ನು ೨೦೦೧ ರಲ್ಲಿ ಹೊಂದಿದ್ದಾರೆ, ೨೦೧೧ರ ಜನಗಣತಿಯ ಪ್ರಕಾರ ಶೇ ೪.೧೪ ರಷ್ಟು ರಾಜ್ಯದ ಜನಸಂಖ್ಯೆಯಲ್ಲಿ ಬಳ್ಳಾರಿ ಜಿಲ್ಲೆಯು ಜನಸಂಖ್ಯೆಯ ಪಾಲನ್ನು ಹೊಂದಿದೆ, ಈ ಕೆಳಗಿನ ಕೋಷ್ಟಕ ೧ ರಲ್ಲಿ ಬಳ್ಳಾರಿ ಜಿಲ್ಲೆಯ ತಾಲೂಕುವಾರು ಜನಸಂಖ್ಯೆ ಹಾಗೂ ದಶಕದ ಜನಸಂಖ್ಯೆ ಬೆಳವಣಿಗೆ ಧರವನ್ನು ಗಮನಿಸಬಹುದು.

**ಕೋಷ್ಟಕ ೧ : ಜನಸಂಖ್ಯೆ ಹಾಗೂ ಬೆಳವಣಿಗೆದರ**

| ತಾಲೂಕುಗಳು | ೨೦೦೧ | ೨೦೧೧ | ೨೦೦೧-೨೦೧೧ |
|---|---|---|---|
| ಬಳ್ಳಾರಿ | ೬.೨೬ | ೭.೮೮ | ೨೫.೮೭ |
| ಹಡಗಲಿ | ೧.೬೮ | ೨.೦೭ | ೨೩.೨೧ |
| ಹಗರಿಬೊಮ್ಮನಹಳ್ಳಿ | ೧.೬೦ | ೧.೯೮ | ೨೩.೭೫ |
| ಹೊಸಪೇಟೆ | ೩.೭೫ | ೪.೬೮ | ೨೪.೮ |
| ಕೂಡ್ಲಿಗಿ | ೨.೭೨ | ೩.೨೨ | ೧೮.೩೮ |
| ಸೊಂಡೂರು | ೧.೯೧ | ೨.೭೦ | ೪೧.೩೬ |
| ಸಿರುಗುಪ್ಪ | ೨.೩೫ | ೨.೭೯ | ೧೮.೭೨ |
| ಬಳ್ಳಾರಿ ಜಿಲ್ಲೆ | ೨೦.೨೭ | ೨೫.೩೨ | ೨೪.೯೧ |
| ಕರ್ನಾಟಕ ರಾಜ್ಯ | ೫೩೮.೨೦ | ೬೧೧.೩೦ | ೧೨.೫೨ |

ಮೂಲ : ೨೦೦೧ ಹಾಗೂ ೨೦೧೧ರ ಜನಗಣತಿ ಮಾಹಿತಿ.

ಜನಸಂಖ್ಯಾಶಾಸ್ತ್ರದ ಪ್ರಕಾರ ಜಿಲ್ಲೆಯ ಜನಸಂಖ್ಯೆ ಗಾತ್ರವನ್ನು ಅವಲೋಕಿಸಿದಾಗ ತಿಳಿದು ಬರುವ ಕೋಷ್ಟಕ ೧ರ ಮಾಹಿತಿಯ ಪ್ರಕಾರ ಬಳ್ಳಾರಿ ಜಿಲ್ಲೆಯ ಜನಸಂಖ್ಯೆ ಬೆಳವಣಿಗೆ ದರವನ್ನು ಕಾಣಬಹುದು ಗಮನಿಸಬಹುದಾದ ಅಂಶವೆಂದರೆ ರಾಜ್ಯದ ಜನಸಂಖ್ಯೆ ಬೆಳವಣಿಗೆ ದರಕ್ಕಿಂತ ಬಳ್ಳಾರಿ ಜಿಲ್ಲೆ ಹಾಗೂ ತಾಲೂಕುಗಳ ಜನಸಂಖ್ಯಾ ಬೆಳವಣಿಗೆ ದರ ಅಧಿಕವಿರುವುದು.

**ನಗರೀಕರಣ** : ದೇಶವೊಂದರ ಗ್ರಾಮೀಣ-ನಗರ ಅನುಪಾತವು ದೇಶದ ಕೈಗಾರೀಕರಣ ಮಟ್ಟದ ಸೂಚಿಯಾಗಿರುತ್ತದೆ. ಕೈಗಾರಿಕೆಗಳು ಬೆಳೆದಂತೆ ನಗರ ಭಾಗದ ಜನರ ಸಂಖ್ಯೆಯು

ಅಧಿಕವಾಗುತ್ತಾ ಹೋಗುತ್ತಾ ಹೋಗುತ್ತದೆ, ಜಿಲ್ಲೆಯಲ್ಲಿ ಸ್ಥಾಪಿತವಾದ ಕಾರ್ಖಾನೆಗಳಲ್ಲಿ ಉದ್ಯೋಗವನ್ನಾಧರಿಸಿ ವಲಸೆ ಬಂದ ಜನರು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ, ಹೀಗೆ ಬಳ್ಳಾರಿ ಜಿಲ್ಲೆಯಲ್ಲಿ ನಗರೀಕರಣ ಪ್ರಭಾವಕ್ಕೊಳಗಾಗಿದೆ.(೧೬)

ಈ ಕೆಳಗಿನ ಕೋಷ್ಟಕ-೨ರಲ್ಲಿ ಜಿಲ್ಲೆಯ ಗ್ರಾಮೀಣ ಹಾಗೂ ನಗರ ಪ್ರದೇಶಗಳ ಜನಸಂಖ್ಯೆ ಹಾಗೂ ೨೦೦೧ ಮತ್ತು ೨೦೧೧ ಸಾಲಿನ ಅಂದರೆ ಜಿಲ್ಲೆಯಲ್ಲಿ ದಶಕದ ಜನಸಂಖ್ಯಾ ಬೆಳವಣಿಗೆ ದರವನ್ನು ದಾಖಲಿಸಲಾಗಿದೆ.

**ಕೋಷ್ಟಕ -೨ ಗ್ರಾಮೀಣ -ನಗರ ಜನಸಂಖ್ಯೆ**

| | | | | | | |
|---|---|---|---|---|---|---|
| ತಾಲೂಕುಗಳು | ೨೦೦೧ | ೨೦೧೧ | ಜನಸಂಖ್ಯೆ | ೨೦೦೧ | ೨೦೧೧ | |
| ಬೆಳವಣಿಗೆ | | | | | | |
| | | | | | | ಧರ |
| ಬಳ್ಳಾರಿ | ೩.೦೮ | ೩.೭೯ | ೨೩.೦೫ | ೩.೧೭ | ೪.೯೭ ೫೬.೭೮ | ಹಡಗಲಿ |
| ೧.೪೫ | ೧.೭೯ | ೨೩.೪೫ | ೨೩.೪೧೪ | ೧೯.೪೦ | | |
| ಹಗರಿಬೊಮ್ಮನಹಳ್ಳಿ | ೧.೬೦ | ೧.೯೮ | ೨೩.೭೫ | – | – | – |
| ಹೊಸಪೇಟೆ | ೧.೫೩ | ೧.೯೭ | ೨೮.೭೬ | ೨.೨೧ | ೨.೭೧ ೨೨.೬೨ | ಕೂಡ್ಲಿಗಿ |
| ೨.೨೮ | ೨.೬೯ | ೧೭.೯೮ | ೪೪೫೫೦ | ೫೩.೦೧೫ | ೧೯.೦೦ | |
| ಸೊಂಡೂರು | ೧.೬೦ | ೧.೯೧ | ೧೯.೩೭ | ೩೪೧೬೮ | ೭೯೦೪೩ | |
| ೧೩೧.೨೪ | ಸಿರುಗುಪ್ಪ | ೧.೬೯ | ೨.೦೦ | ೧೮.೩೪ | ೬೬೫೦೨ | |
| ೭೮೭೮೧ | ೧೮.೪೬ | ಬಳ್ಳಾರಿ ಜಿಲ್ಲೆ೧೩.೨೦ | | ೧೬.೧೩ | ೨೨.೨ ೭೦೬ | ೯.೧೯ |
| ೨೦.೧೨ | ಮೂಲ: ೨೦೦೧ ಹಾಗೂ ೨೦೧೧ರ ಜನಗಣತಿ ಮಾಹಿತಿ | | | | | |

ಕೋಷ್ಟಕ-೨ರಲ್ಲಿ ದಾಖಲಿಸಿದ ಮಾಹಿತಿಯ ಪ್ರಕಾರ ನಗರ ಪ್ರದೇಶಗಳ ಜನಸಂಖ್ಯೆಯಲ್ಲಿ ಏರಿಕೆ ಕಂಡುಬರುತ್ತಿದೆ, ಅದರಲ್ಲೂ ಪ್ರಮುಖವಾಗಿ ಬಳ್ಳಾರಿ ತಾಲೂಕು, ಹೊಸಪೇಟೆ, ಸಂಡೂರು ಹಾಗೂ ಬಳ್ಳಾರಿ ಜಿಲ್ಲೆಗಳ ನಗರ ಪ್ರದೇಶಗಳ ಜನಸಂಖ್ಯೆ ಹೆಚ್ಚಳ ಅಧಿಕ ಪ್ರಮಾಣದಲ್ಲಿರುವುದು ಗಮನಾರ್ಹ ಸಂಗತಿಯಾಗಿದೆ.

ನಗರ ಪ್ರದೇಶಗಳಲ್ಲಿ ಉದ್ಯೋಗವನ್ನರಿಸಿ ಬಂದ ಜನರ ಸಂಖ್ಯೆಯು ಅಧಿಕವಾಗಿ ಕಂಡುಬರುತ್ತದೆ, ಗ್ರಾಮಗಳಲ್ಲಿ ಕೃಷಿಯ ಮೇಲಿನ ಅವಲಂಬನೆ ದಿನೇ ದಿನೇ ಕಡಿಮೆಯಾಗುತ್ತಿರುವುದು ನಗರ ಪ್ರದೇಶಗಳ ವಲಸಗೆ ಕಾರಣವಾಗಿದೆ.

**೪.೫. ಜಿಲ್ಲೆಯ ಸಾಮಾಜಿಕ ಹಿನ್ನೆಲೆ**

ಜಿಲ್ಲೆಯು ೧೪೫೦ ಚ.ಕೀ.ಮೀ ವಿಸ್ತಿರ್ಣ ಹೊಂದಿದೆ, ರಾಜ್ಯ ಒಟ್ಟು ಶೇ.೯ರಷ್ಟು ವಿಸ್ತೀರ್ಣವನ್ನು ಹೊಂದಿದ್ದು, ೧೧ನೇ ಸ್ಥಾನದಲ್ಲಿದೆ ೨೦೦೧ರ ಜನಗಣಿತಯ ಪ್ರಕಾರ

ಜಿಲ್ಲೆಯಲ್ಲಿ ೧೪೫೨೯೯೫ ರಷ್ಟು ಜನಸಂಖ್ಯೆ ಇದ್ದು ಇದರಲ್ಲಿ ೧೨೩೬೯೫೪ (ಶೇ.೪೯.೫೨)ರಷ್ಟು ಮಹಿಳೆಯರು ಇದ್ದಾರೆ (೨೪) ಗ್ರಾಮಾಂತರ ಪ್ರದೇಶದಲ್ಲಿ ೧೯೧೩೦೩೮ (ಶೇ.೬೪)ರಷ್ಟು ಜನ ವಾಸಿಸುತ್ತಿದ್ದಾರೆ. ರಾಜ್ಯದ ಜನಸಂಖ್ಯೆಯಲ್ಲಿ ಜಿಲ್ಲೆಯು ಶೇ. ೪.೧೪ ರಷ್ಟು ಪಾಲನ್ನು ಹೊಂದಿದೆ. (೨೫) ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ೫೧೭.೪೯ (ಶೇ.೨೧.೧೦)ರಷ್ಟು ಪರಿಶಿಷ್ಟ ಜಾತಿ ಮತ್ತು ೪೫೧.೪೦೬ (ಶೇ.೧೮.೪೧) ರಷ್ಟು ಪರಿಶಿಷ್ಟ ಪಂಗಡದವರಿದ್ದಾರೆ, ಈ ಪ್ರಮಾಣವು ಕರ್ನಾಟಕ ರಾಜ್ಯಕ್ಕೆ ಹೋಲಿಸಿದರೆ (ಶೇ.೨೪) ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆಯು ಗಮನಾರ್ಹವಾಗಿ ಹೆಚ್ಚು ಇದೆ. (೨೫)

೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೧೦೦೦ ಪುರುಷರಿಗೆ ೯೭೮ ಮಹಿಳೆಯರು ಇದ್ದಾರೆ. ರಾಜ್ಯದಲ್ಲಿ ಪ್ರತಿಸಾವಿರ ಪುರಷರಿಗೆ ೯೬೮ ಸ್ತ್ರೀಯರಿದ್ದಾರೆ, ಈ ಪ್ರಮಾಣವನ್ನು ರಾಜ್ಯಕ್ಕೆ ಹೋಲಿಸಿದರೆ ಶೇ ೪ ರಷ್ಟು ಹೆಚ್ಚಾಗಿದೆ, ೧೯೯೧ ಮತ್ತು ೨೦೧೧ ರಲ್ಲಿ ಜಿಲ್ಲೆಯ ಜನಸಂಖ್ಯೆ ಬೆಳವಣಿಗೆ ದರ ಶೇ. ೨೧.೧೫ ಮತ್ತು ಶೇ.೨೧.೪೦ ರಷ್ಟು ಇತ್ತು. ೨೦೧೧ ಗಣತಿ ಪ್ರಕಾರ ಶೇ.೨೪.೯೦ ರಷ್ಟು ದಶಕದ ಬೆಳವಣಿಗೆಯಾಗಿದೆ. ಜಿಲ್ಲೆಯ ಬೆಳವಣಿಗೆಯ ದರವನ್ನು ಕಳೆದ ದಶಕಕ್ಕೆ ಹೋಲಿಸಿದರೆ ಶೇ.೨.೫ ರಷ್ಟು ಹೆಚ್ಚಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಪ್ರತಿ ಚ.ಕಿ.ಮಿ.ಗೆ ಜನಸಂಖ್ಯೆ ೧೯೯ ರಷ್ಟಿದೆ. ಇದಕ್ಕೆ ಕಾರಣ ಜಿಲ್ಲೆಯಲ್ಲಿ ನಡೆಯುವ ಗಣಿಗಾರಿಕೆಯಾಗಿರಬಹುದು. ೨೦೦೧ ರಂತೆ ಜನಸಾಂದ್ರತೆಯಲ್ಲಿ ಜಿಲ್ಲೆಯು ೧೩ನೇ ಸ್ಥಾನದಲ್ಲಿದೆ.

ಬಳ್ಳಾರಿ ಜಿಲ್ಲೆಯಲ್ಲಿ ವಿವಿಧ ಜಾತಿ, ಧರ್ಮ ಮತ್ತು ವರ್ಗಗಳಿಂದ ಕೂಡಿದೆ, ಜಿಲ್ಲೆಯಲ್ಲಿ ಮುಖ್ಯವಾಗಿ ಲಿಂಗಾಯಿತ ಮುಸ್ಲಿಂ, ವಾಲ್ಮೀಕಿ, ಕುರುಬ, ಕಮ್ಮ ಮತ್ತು ರೆಡ್ಡಿ ಈ ಆರು ಸಮುದಾಯಗಳು ದೊಡ್ಡ ಸಂಖ್ಯೆಯಲ್ಲಿವೆ. ಪರಿಶಿಷ್ಟ ಜಾತಿ ಸಮುದಾಯವನ್ನು ಇಡಿಯಾಗಿ ಪರಿಗಣಿಸಿದಾಗ ಇದು ಈ ಮೇಲಿನ ಸಮುದಾಯಗಳಿಗೆ ಸಮ ಆಗುತ್ತದೆ, ಆದರೆ ಪರಿಶಿಷ್ಟ ಜಾತಿಯಲ್ಲಿ ಹಲವಾರು ಜಾತಿಗಳು ಸೇರಿರುವುದರಿಂದ ಇವುಗಳನ್ನು ಬಿಡಿಬಿಡಿಯಾಗಿ ನೋಡಿದಾಗ ಇದು ಬಲಿಷ್ಟ ಸಮುದಾಯವಾಗಿ ಕಂಡುಬರುವುದಿಲ್ಲ.

**೪.೬ ಜಿಲ್ಲೆಯ ಸಾಕ್ಷರತೆ ಪ್ರಮಾಣ:**

೨೦೧೧ ರ ಜನಗಣತಿಯ ಪ್ರಕಾರ, ರಾಜ್ಯದಲ್ಲಿ ಸಾಕ್ಷರತೆ ಪ್ರಮಾಣ ಶೇ. ೭೫.೬೦ ರಷ್ಟಿದ್ದು, ಇದರಲ್ಲಿ ಶೇ ೮೨.೮೫ ರಷ್ಟು ಪರುಷರು, ಮತ್ತು ಶೇ.೬೮.೧೩ ರಷ್ಟು ಮಹಿಳಾ ಸಾಕ್ಷರತೆ ದರ ಇದೆ. ಬಳ್ಳಾರಿ ಜಿಲ್ಲೆಯಲ್ಲಿ ಸಾಕ್ಷರತೆ ಪ್ರಮಾಣ ಶೇ. ೬೭೪೩ ರಷ್ಟಿದ್ದು, ಇದರಲ್ಲಿ ಪುರಷರ ಸಾಕ್ಷರತೆ ದರ ಶೇ. ೭೭.೨೪ರಷ್ಟಿದ್ದು ಶೇ.೫೮.೦೯ ರಷ್ಟು ಮಹಿಳೆಯರ ಸಾಕ್ಷರತಾದರವಿದೆ. ರಾಜ್ಯದ ಸಾಕ್ಷರತಾ ದರಕ್ಕೆ ಹೋಲಿಸಿದರೆ ಜಿಲ್ಲೆಯಲ್ಲಿ ಶೇ.೭.೫೫ ರಷ್ಟು

ಕಡಿಮೆ ಹಾಗೂ ಪುರಷ ಮತ್ತು ಮಹಿಳಾ ಸಾಕ್ಷರತೆ ಪ್ರಮಾಣದಲ್ಲಿ ಕ್ರಮವಾಗಿ ಶೇ.೫.೬೧ ರಷ್ಟು ಹಾಗೂ ಪುರಷ ಮತ್ತು ಮಹಿಳಾ ಸಾಕ್ಷರತೆ ಪ್ರಮಾಣದಲ್ಲಿ ಕ್ರಮವಾಗಿ ಶೇ.೫.೬೧ ರಷ್ಟು ಹಾಗೂ ಶೇ.೯.೮೫ರಷ್ಟು ಕಡಿಮೆ ಇದೆ. ರಾಜ್ಯದ ಸಾಕ್ಷರತೆ ಬೆಳವಣಿಗೆಯಲ್ಲಿ ಬಳ್ಳಾರಿ ಜಿಲ್ಲೆಯು ೨೪ನೇ ಸ್ಥಾನದಲ್ಲಿದೆ. (೨೭) ಹೀಗಾಗಿ ಸಾಕ್ಷರತೆ ಬೆಳವಣಿಗೆಯಲ್ಲಿ ಬಳ್ಳಾರಿ ಜಿಲ್ಲೆ ರಾಜ್ಯದಲ್ಲಿ ಒಂದು ಹಿಂದುಳಿದ ಜಿಲ್ಲೆಯಾಗಿದೆ.

**೪.೭ ಜಿಲ್ಲೆಯ ಆರ್ಥಿಕ ಹಿನ್ನೆಲೆ:**

ಬಳ್ಳಾರಿಯ ಜಿಲ್ಲೆಯನ್ನು ಪ್ರದೇಶಿಕವಾಗಿ ಪೂರ್ವ ಮತ್ತು ಪಶ್ಚಿಮ ತಾಲೂಕುಗಳಿಂದ ವಿಂಗಡಿಸಲಾಗಿದೆ, ಸಿರುಗುಪ್ಪ, ಬಳ್ಳಾರಿ, ಹೊಸಪೇಟೆ, ಮತ್ತು ಸಂಡೂರು ಪೂರ್ವ ಭಾಗದ ತಾಲೂಕುಗಳಾದರೆ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಮತ್ತು ಹಡಗಲಿ, ಪಶ್ಚಿಮ ಭಾಗದ ತಾಲೂಕುಗಳಾಗಿವೆ. ಜಿಲ್ಲೆಯ ಕೃಷಿಗೆ ತುಂಗಾಭದ್ರಾ ನದಿಯು ಪ್ರಮುಖ ನೀರಾವರಿ ಮೂಲಗಳಾಗಿವೆ, ಆದರೆ ಈ ನದಿಯಿಂದ ಇಡೀ ಜಿಲ್ಲೆಗೆ ನೀರಾವರಿ ಸೌಲಭ್ಯ ದೊರೆತಿಲ್ಲ, ಜಿಲ್ಲೆಯ ಪೂರ್ವಭಾಗದ ತಾಲೂಕುಗಳ ಸೀಮಿತ ಪ್ರದೇಶಗಳಿಗೆ ಮಾತ್ರ, ನೀರಾವರಿ ಸೌಲಭ್ಯ ದೊರೆತಿದೆ, ಪಶ್ಚಿಮ ಭಾಗದ ತಾಲೂಕುಗಳು ಸಂಪೂರ್ಣವಾಗಿ ಮಳೆ ಆಶ್ರಯದ ಕೃಷಿಯನ್ನು ಅವಲಂಭಿಸಿವೆ, ಜಿಲ್ಲೆಯ ಬಹುತೇಕ ಜನರು ಕೃಷಿ ಅವಲಂಬಿತ ದುಡಿಯುವ ವರ್ಗದವರಾಗಿದ್ದಾರೆ,

**ಜಿಲ್ಲೆಯ ಆದಾಯ:**

ಜಿಲ್ಲೆಯ ಆಧಾಯದ ನಿವ್ವಳ ೨೦೦೭-೦೮ನೇ ಸಾಲಿನ ಚಾಲ್ತಿ ಬೆಲೆಗಳಲ್ಲಿ ವಿವಿಧ ಬಾಬ್ತುಗಳಿಂದ ಅಂದರೆ ಕೃಷಿ ´ಮತ್ತು ಪಶುಸಂಗೋಪನೆಯಿಂದ ೧೨೧೮೯ ಲಕ್ಷ ರೂಪಾಯಿಗಳು, ಅರಣ್ಯ ಹಾಗೂ ಮರ ಕೆಲಸದಿಂದ ೮೩.೮೫ ಲಕ್ಷ ರೂಪಾಯಿಗಳು, ಅರಣ್ಯ ಹಾಗೂ ಮರ ಕೆಲಸದಿಂದ ೮೩.೮೫ ಲಕ್ಷ ರೂಪಾಯಿಗಳು, ಮೀನುಗಾರಿಕೆಯಿಂದ ೨೪೩೧ ಲಕ್ಷ ರೂಪಾಯಿಗಳು ಗಣಿ ಮತ್ತು ಕಲ್ಲು ಅಗೆತದಿಂದ ೨೨೧೦೭೦ ಲಕ್ಷ ರೂಪಾಯಿಗಳು, ಒಟ್ಟು ಪ್ರಾಥಮಿಕ ವಲಯದಿಂದ ೩೩೮೨೮೫ ಲಕ್ಷ ರೂಪಾಯಿಗಳು, ತಯಾರಿಕೆಯಿಂದ ೬೮೯೮ ಲಕ್ಷ ರೂ.ಗಳ ನಿರ್ಮಾಣಕಾರ್ಯದಿಂದ ೭೮೫೮೭ ಲಕ್ಷ ರೂ.ಗಳು, ವಿದ್ಯುಚ್ಛಕ್ತಿ ಅನಿಲ ಮತ್ತು ನೀರು ಸರಬರಾಜುನಿಂದ ೫೧೨೨ ಲಕ್ಷ ರೂಪಾಯಿಗಳು ಒಟ್ಟು ದ್ವಿತೀಯ ವಲಯದಿಂದ ೧೫೨೭೦೭ ಲಕ್ಷ ರೂಪಾಯಿಗಳು ರೈತಯಿಂದ ೪೫೧೮ ಲಕ್ಷ. ರೂ.ಗಳು ಇತರೆ ದ್ವಿತೀಯ ವಲಯ ದಿಂದ ೧೫೨೭೦೭ ಲಕ್ಷ ರೂ.ಗಳು ದಾಸ್ತಾನುಗಳಿಂದ ೨೬೫ ಲಕ್ಷ ರೂಗಳು, ಸಂಪರ್ಕ ದಿಂದ ೭೫೩೬ ಲಕ್ಷ ರೂ.ಗಳು ವ್ಯಾಪಾರ, ವಸತಿ, ವಿಮೆಯಿಂದ ೪೯೯೮೫ ಲಕ್ಷ ರೂ.ಗಳ ಸ್ಥಿರಾಸ್ತಿ ವಾಸಗೃಹಗಳ ಒಡೆತನ ಮತ್ತು ವ್ಯಾಪಾರ ಸೇವೆಗಳಿಂದ ೫೫೩೭೨ ಲಕ್ಷ ರೂ.ಗಳು ಸಾರ್ವಜನಿಕ ಆಡಳಿತದಿಂದ

೧೬೧೫ ಲಕ್ಷ ರೂ.ಗಳಿಗಿದ್ದು, ಇತರೆ ಸೇವೆಗಳಿಂದ ೫೯೭೮.೦೦ ಲಕ್ಷ ರೂ.ಗಳು ತೃತೀಯ ವಲಯ ದಿಂದ ೪೧೪೧೦೭ ಲಕ್ಷ ರೂ. ಗಳಾಗಿದ್ದು, ತಲಾ ಆದಾಯ ೨೧೧೬೬೨೫೨ ಲಕ್ಷ ರೂಪಾಯಿಗಳಲ್ಲಿ ಜಿಲ್ಲೆಯ ಆದಾಯ ೯೧೯೭೯ ಲಕ್ಷ ರೂಪಾಯಿಗಳಾಗಿದ್ದು, ಇದು ರಾಜ್ಯದ ಒಟ್ಟು ಆದಾಯಕ್ಕೆ ಹೋಲಿಸಿದರೆ ಶೇ.೪.೩೪ ರಷ್ಟಾಗಿರುತ್ತದೆ.

**೪.೮. ಜಿಲ್ಲೆಯ ರಾಜಕೀಯ ಹಿನ್ನೆಲೆ:**

ಬಳ್ಳಾರಿ ಜಿಲ್ಲೆಯು ಆಡಳಿತಾತ್ಮಕವಾಗಿ ಎರಡು ಉಪವಿಭಾಗಗಳನ್ನು ಹೊಂದಿದೆ, ಒಂದು ಬಳ್ಳಾರಿ ವಿಭಾಗ ಇದು ಮೂರು ತಾಲೂಕುಗಳನ್ನು ಬಳ್ಳಾರಿ ಗ್ರಾಮೀಣ ಸಿರುಗುಪ್ಪ ಮತ್ತು ಸಂಡೂರು ಒಳಗೊಂಡಿದ್ದು, ಎರಡು ಹೊಸಪೇಟೆ ವಿಭಾಗ, ಇದು ನಾಲ್ಕು (ಹೊಸಪೇಟೆ ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ ಹಾಗೂ ಹಡಗಲಿ) ತಾಲೂಕುಗಳನ್ನು ಹೊಂದಿದೆ, ಬಳ್ಳಾರಿ ಜಿಲ್ಲೆಯು  ಒಂದು ಲೋಕಸಭಾ ಕ್ಷೇತ್ರವನ್ನು ಹಾಗೂ ಒಂಭತ್ತು ವಿಧಾನಸಭಾ ಕ್ಷೇತ್ರಗಳನ್ನು ಹಾಗೂ ಒಂಭತ್ತು ವಿಧಾನಸಭಾ ಕ್ಷೇತ್ರಗಳನ್ನು ಹೊಂದಿದೆ, ೨೦೦೮ ಫೆಬ್ರವರಿ ತಿಂಗಳಲ್ಲಿ ತಿದ್ದುಪಡಿಯೊಂದಿಗೆ ಜಾರಿಗೆ ಬಂದ ೧೯೬೨ರ ಡಿಲಿಮೆಟೇಷನ್ ಕಾಯ್ದೆಯು ನೂತನವಾಗಿ ರಾಜ್ಯದ ರಾಜಕೀಯ ಭೂಪಟವನ್ನು ಬದಲಾಗಿಸಿದೆ, ೨೦೦೮ರ ಮೊದಲು ಜಿಲ್ಲೆಯ ಹೊಸಪೇಟೆ ತಾಲೂಕು ನೆರೆ ಜಿಲ್ಲೆ ಕೊಪ್ಪಳ ಲೋಕಸಭಾ ಕ್ಷೇತ್ರಕ್ಕೆ ಸೇರಿತು ಇಂದು ಇದು ಬಳ್ಳಾರಿ ಲೋಕಸಭಾ ಕ್ಷೇತ್ರಕ್ಕೆ ಸೇರ್ಪಡೆಗೊಂಡಿದೆ, ಬಳ್ಳಾರಿ ಲೋಕಸಭಾ ಕ್ಷೇತ್ರದ ವ್ಯಾಪ್ತಿ ಒಳಪಟ್ಟ ಸಿರುಗುಪ್ಪ ವಿಧಾನಸಭೆ ಕ್ಷೇತ್ರವು ಕೊಪ್ಪಳ ಲೋಕಸಭಾ ಕ್ಷೇತ್ರದ ವ್ಯಾಪ್ತಿಗೆ ಒಳಪಟ್ಟಿದೆ. ರಾಜ್ಯ ರಾಜಕೀಯದಲ್ಲಿ ಬಳ್ಳಾರಿ ಜಿಲ್ಲೆಗೆ ವಿಶೇಷ ಸ್ಥಾನ–ಮಾನವಿದೆ, ಸ್ವಾತಂತ್ರ್ಯದ ನಂತರ ನಡೆದ ಎಲ್ಲಾ ಲೋಕಸಭೆ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ಗೆಲ್ಲುತ್ತಾ ಬಂದಿದೆ, ಇದೊಂದು ಐತಿಹಾಸಿಕ ದಾಖಲೆಯಾಗಿದೆ. ಇತ್ತೀಚಿನ ಕೆಲವು ವರ್ಷಗಳಿಂದ ಬಳ್ಳಾರಿ ಜಿಲ್ಲೆ, ರಾಜ್ಯ ರಾಜಕೀಯವನ್ನು ನಿರ್ಣಯಿಸುವ ಶಕ್ತಿಯೆನ್ನುವ ಚಿತ್ರಣ ಪಡೆದಿದೆ ಎನ್ನಲಾಗುತ್ತಿದೆ, ಕಳೆದ ಲೋಕಸಭಾ ಚುನಾವಣೆಯಲ್ಲಿ ಮತ್ತು ಕಳೆದ ವಿಧಾನ ಸಭಾ ಚುನಾವಣೆಯಲ್ಲಿ ಒಂಭತ್ತು ವಿಧಾನಸಭಾ ಸ್ಥಾನಗಳಲ್ಲಿ ಒಂದನ್ನು ಹೊರತುಪಡಿಸಿ, ಎಲ್ಲಾ ಎಂಟು ಸ್ಥಾನಗಳನ್ನು ಬಾರತೀಯ ಜನತಾ ಪಕ್ಷ ಜಯಗಳಿಸಿರುವುದು ರಾಷ್ಟ್ರ ಮತ್ತು ರಾಜ್ಯ ರಾಜಕಾರಣದಲ್ಲಿ ಇದೊಂದು ಐತಿಹಾಸಿಕ ದಾಖಲೆಯಾಗಿದೆ, ಈ ಬದಲಾವಣೆಗೆ ಪ್ರಮುಖವಾಗಿ ಎರಡು ಕಾರಣಗಳನ್ನು ಗುರುತಿಸಲಾಗಿದೆ, ಒಂದು ಸಂಸತ್ತು ಮತ್ತು ವಿಧಾನ ಸಭಾ ಕ್ಷೇತ್ರ ಮರು ವಿಂಗಡನೆಯ ಪರಿಣಾಮವಾಗಿ ರಾಜ್ಯ ರಾಜಕೀಯ ಸಮೀಕರಣ ಬದಲಾಗುವುದರಲ್ಲಿ ಮಹತ್ವದ ಪಾತ್ರ ವಹಿಸಿದೆ, ಬಳ್ಳಾರಿ ಜಿಲ್ಲೆಯ ಒಂಭತ್ತು ವಿಧಾನಸಭಾ ಕೇತ್ರಗಳಲ್ಲಿ ಕೇವಲ ಎರಡನ್ನು ಬಿಟ್ಟು ಉಳಿದ ಏಳು ಕ್ಷೇತ್ರಗಳಲ್ಲಿ ಐದು ಪರಿಶಿಷ್ಟ ಪಂಗಡ ಮತ್ತು ಎರಡು

ಪರಿಶಿಷ್ಟ ಜಾತಿಗಳ ಮೀಸಲಾತಿ ಕ್ಷೇತ್ರಗಳಾಗಿ ವಿಭಾಗಿಸಲಾಗಿದೆ, ಕ್ಷೇತ್ರ ಮರು ವಿಂಗಡಣೆಯಿಂದಾಗಿ ಜಿಲ್ಲೆಯ ದೊಡ್ಡ ಸಮುದಾಯಗಳಿಗೆ ರಾಜಕೀಯ ಪ್ರಾತಿನಿಧ್ಯ ದೊರೆತಂತಾಗಿದೆ, ಆದರೆ ಜನಸಾಮಾನ್ಯರಿಗೆ ರಾಜಕೀಯ ಪ್ರಾತಿನಿಧ್ಯ ಸಿಗದಂತಹ ಸ್ಥಿತಿ ಜಿಲ್ಲೆಯಲ್ಲಿ ನಿರ್ಮಾಣವಾಗಿದೆ. ಎರಡು ಜಿಲ್ಲೆಯ ಸಂಪತ್ತು ಮತ್ತು ವಿಧಾನಸಭಾ ಕ್ಷೇತ್ರಗಳಿಗೆ ಗಣಿ ಉದ್ಯಮಿಗಳ ನೇರ ಸ್ಪರ್ದೆ, ಜಿಲ್ಲೆಯ ಲೋಕಸಭೆ ಮತ್ತು ವಿಧಾನಸಭ ಕ್ಷೇತ್ರಗಳಲ್ಲಿ ಗಣಿ ಉದ್ಯಮಿಗಳು ಹಾಗೂ ಅವರ ಸಂಬಂಧಿಗಳು ಚುನಾವಣೆಯಲ್ಲಿ ನೇರವಾಗಿ ಸ್ಪರ್ದಿಸಿದ್ದು, ಸಾಕಷ್ಟು ಪ್ರಮಾಣದಲ್ಲಿ ಹಣ ವೆಚ್ಚ ಮಾಡಿದರ ಪರಿಣಾಮವಾಗಿ ಜಿಲ್ಲೆಯ ದೊಡ್ಡ ಸಂಖ್ಯೆಯಲ್ಲಿರುವ ಸಮುದಾಯಗಳು ಪಕ್ಷ ಬದಲಾಯಿಸುವುದಕ್ಕೆ ಕಾರಣವಾಗಿದೆ, ೨೦೧೩ರ ಸಾರ್ವತ್ರಿಕ ಚುನಾವಣೆಯಲ್ಲಿ ಕ್ಷೇತ್ರಗಳಲ್ಲಿ ಕಾಂಗ್ರೇಸ್ ನಾಲ್ಕು ಸ್ಥಾನಗಳನ್ನು ಬಿ.ಎಸ್.ಆರ್. ಕಾಂಗ್ರೇಸ್ ಎರಡು ಸ್ಥಾನಗಳನ್ನು, ಬಿ.ಜೆ.ಪಿ ಹಾಗೂ ಜೆ.ಡಿ.ಎಸ್. ತಲಾ ಒಂದೊಂದು ಸ್ಥಾನಗಳನ್ನು ಹಾಗೂ ಪಕ್ಷೇತರ ಒಂದು ಸ್ಥಾನವನ್ನು ಪಡೆದುಕೊಂಡಿವೆ.

**೪.೯. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ತಾಲೂಕುಗಳು ಹಾಗೂ ಗ್ರಾಮ ಪಂಚಾಯಿತಿಗಳ ವಿವರ:**

| ಕ್ರಸಂ | ತಾಲೂಕುಗಳು | ಗ್ರಾಮ ಪಂಚಾಯಿತಿಗಳು |
|---|---|---|
| ೧. | ಬಳ್ಳಾರಿ | ಶ್ರೀಧರಗಡ್ಡೆ ಚಳ್ಳಗುರ್ಕಿ |
| ೨. | ಕೂಡ್ಲಿಗಿ | ಬಡೇಲಡಕುಅಪ್ಪಯ್ಯನಹಳ್ಳಿ |

**ಬಳ್ಳಾರಿ ತಾಲೂಕಿನ ಎರಡು ಗ್ರಾಮ ಪಂಚಾಯಿತಿಗಳ ಪರಿಚಯ:**

**ಶ್ರೀಧರಗಡ್ಡೆ :**

ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯು ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕು, ಕೇಂದ್ರದಿಂದ ೭ ಕೀ.ಮಿ ದೂರದಲ್ಲಿದೆ, ಈ ಗ್ರಾಮ ಪಂಚಾಯಿತಿಯು ಕೋರ್ಲಗುಂದಿ ಜಿಲ್ಲಾ ಪಂಚಾಯಿತಿ ವ್ಯಾಪ್ತಿಗೆ ಮತ್ತು ಶ್ರೀಧರಗಡ್ಡೆ ತಾಲೂಕು ಪಂಚಾಯತ್ ಕ್ಷೇತ್ರಗಳ ವ್ಯಾಪ್ತಿಗೆ ಬರುತ್ತದೆ ಮತ್ತು ಬಳ್ಳಾರಿ ಲೋಕಸಭಾ ಹಾಗೂ ಕಂಪ್ಲಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುತ್ತದೆ. ಶ್ರೀಧರಗಡ್ಡೆ ಗ್ರಾಮವು ಗ್ರಾಮ ಪಂಚಾಯಿತಿಯ ಕೇಂದ್ರ ಸ್ಥಾನ ಗ್ರಾಮ ಪಂಚಾಯಿತಿಗೆ ಶ್ರೀಧರಗಡ್ಡೆ, ಜಾಲಿಬೆಂಚಿ, ಲಕ್ಷ್ಮಿನಗರ ಹಾಗೂ ಗುಡಾರನಗರ ಗ್ರಾಮಗಳು ಒಳಪಡುತ್ತವೆ, ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯ ಒಟ್ಟು ಜನಸಂಖ್ಯೆ ಅಂದಾಜು ೧೦.೫೬೦ ಈ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳ ಜನರ ಮುಖ್ಯ ಕಸುಬು ವ್ಯವಸಾಯ ಕೇಂದ್ರ ಸ್ಥಾನವಿರುವ ಶ್ರೀಧರಗಡ್ಡೆ ಗ್ರಾಮಕ್ಕೆ ಶ್ರೀಧರಗಡ್ಡೆ ಎನ್ನುವ ಹೆಸರು ಗ್ರಾಮದ ಪೂರ್ವಿಕರು ಮತ್ತು ಇತಿಹಾಸ ಪ್ರಕಾರ ಈ ಗ್ರಾಮದಲ್ಲಿ ಪೂರ್ವ ಕಾಲದಿಂದಲೂ ಸಿರಿ ಸಂಪತ್ತು ಹೆಚ್ಚಾಗಿರುವುದರಿಂದ ಈ ಗ್ರಾಮ ಸಿರಿಧರಗಡ್ಡೆ

ಎಂತಲೂ ಇದು ಕಾಲಕ್ರಾಮೇಣ ಶ್ರೀಧರಗಡ್ಡೆಯಾಗಿ ರೂಡಿಗೆ ಬಂದಿದೆ. ಈ ಗ್ರಾಮ ಪಂಚಾಯಿತಿಯ ೧೯೯೪ ರ ಪೂರ್ವದಲ್ಲಿ ಮಂಡಲ ಪಂಚಾಯಿತಿಯಾಗಿದ್ದು ಸದರಿ ವರ್ಷದಿಂದ ಗ್ರಾಮ ಪಂಚಾಯಿತಿ ಅಸ್ತಿತ್ವದಲ್ಲಿ ಬಂದಿರುತ್ತದೆ.

**ಶಿಕ್ಷಣ:**

ಈ ಪಂಚಾಯಿತಿ ವ್ಯಾಪ್ತಿಯಲ್ಲಿ ನಾಲ್ಕು ಪ್ರಾಥಮಿಕ ಶಾಲೆ, ಒಂದು ಮಾಧ್ಯಮಿಕ ಶಾಲೆ ಒಂದು ಖಾಸಗಿ ಆಂಗ್ಲ ಮಾಧ್ಯಮ ಶಾಲೆ ಇದೆ ಹಾಗೂ ೧೧ ಅಂಗನವಾಡಿ ಕೇಂದ್ರಗಳಿವೆ.

**ಚಳ್ಳಗುರ್ಕಿ ಗ್ರಾಮ ಪಂಚಾಯಿತಿ:**

ಈ ಗ್ರಾಮ ಪಂಚಾಯಿತಿ ಬಳ್ಳಾರಿ ತಾಲೂಕಿನಿಂದ ೨೪ ಕಿ.ಮೀ ದೂರದಲ್ಲಿದೆ ಇಲ್ಲಿ ಹಿಂದೆ ಚೇಳುಗಳು ಹೆಚ್ಚಾಗಿ ಇದ್ದಿದರಿಂದ ಚಳ್ಳಗುರ್ಕಿ ಎಂದು ಹೆಸರು ಬಂತು ಈ ಗ್ರಾಮದ ಬೌಗೋಳಿಕ ವಿಸ್ತೀರ್ಣ ೧೩೫೩೦ ಎಕರೆಗಳು, ಸಾಗುವಳಿ ಭೂಮಿ ೧೨೬೫೯ ಎಕರೆಗಳು ಹಾಗೂ ಈ ಗ್ರಾಮದ ಜೋಳದರಾಶಿ ಒಟ್ಟು ಪುರುಷರು ೧೯೨೫ ಜೋಳದರಾಶಿ ಒಟ್ಟು ಮಹಿಳೆಯರು ೧೨೩೨, ಯಾಳಿವ ಗ್ರಾಮ ಪುರಷರು ೬೦೦, ಯಾಳಿವ ಗ್ರಾಮದ ಮಹಿಳೆಯರು ೮೭೮, ಲಿಂಗದೇವನಹಳ್ಳಿ ಗ್ರಾಮದ ಪುರುಷರು ೨೯೮, ಮಹಿಳೆಯರು ೨೬೪. ಪರಿಶಿಷ್ಟ ಜಾತಿಯವರು –೧೫೨೭, ಪರಿಶಿಷ್ಟ ಪಂಗಡದವರು –೧೧೬೮, ಅಂಗವೀಕಲರು–೮೪,

ಜನಸಂಖ್ಯೆ ೭,೩೫೮ ಅದರಲ್ಲಿ ಪುರುಷರು ೩೮೪೨ ಮಹಿಳೆಯರು ೩೫೧೬, ಬಿ.ಪಿ.ಎಲ್ ೯೭೩, ಎ.ಪಿ.ಎಲ್ ೫೮೭, ಇಲ್ಲಿ ಚಳ್ಳಗುರ್ಕಿ ಶ್ರೀ ಎರ್ರಿತಾತನ ದೇವಸ್ಥಾನವಿದೆ. ಪ್ರಮುಖವಾಗಿ ಜೋಳ, ಕಡಲೆ, ಧನಿಯ, ಸೂರ್ಯಕಾಂತಿ ಬೆಳೆಯಲಾಗುತ್ತಿದೆ, ೧೯೯೪ರಲ್ಲಿ ಮೊದಲಿಗೆ ಗ್ರಾಮ ಪಂಚಾಯಿತಿ ಪ್ರಾರಂಭವಾಯಿತು. ಮೊದಲನೆಯ ಪಂಚಾಯಿತಿ ಅಧ್ಯಕ್ಷರಾಗಿ ಶ್ರೀ ಪಂಪನಗೌಡ ಶ್ರೀಮತಿ ಆದೆಮ್ಮ ಉಪಾಧ್ಯಕ್ಷರಾಗಿ ಹಾಗೂ ೧೪ ಜನ ಸದಸ್ಯರು ಒಳಗೊಂಡು ಕಾರ್ಯನಿರ್ವಹಿಸಿದೆ.

**ಶಿಕ್ಷಣ:**

ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಒಟ್ಟು ೩ ಸರ್ಕಾರಿ ಪ್ರಾಥಮಿಕ ಶಾಲೆ, ೨ ಹಿರಿಯ ಪ್ರಾಥಮಿಕ, ಮಾಧ್ಯಮಿಕ ಶಾಲೆ,

**ಕೂಡ್ಲಿಗಿ:**

ಕೂಡ್ಲಿಗಿ ಕರ್ನಾಟಕದ ಬಳ್ಳಾರಿ ಜಿಲ್ಲೆಯ ಒಂದು ತಾಲೂಕು, ಬೆಂಗಳೂರಿಗೆ ಹೋಗುವ ಹೆದ್ದಾರಿಯಲ್ಲಿ ಕಂಡುಬರುತ್ತದೆ, ಧಾರ್ಮಿಕ ಐತಿಹಾಸಿಕ, ರಾಜಕೀಯವಾಗಿ

ಪ್ರಸಿದ್ಧ ಪಡೆದ ಸ್ಥಳ ಕೂಡ್ಲಿಗಿಯ ಇತಿಹಾಸವನ್ನು ಗಮನಿಸುತ್ತ ಬಂದಾಗ ಮೌರ್ಯರು ಶಾತವಾಹನರು, ಪಲ್ಲವರು, ಕದಂಬರು ಚಾಲುಕ್ಯದ ಆಳ್ವಿಕೆಗೆ ಈ ಭಾಗ ಒಳಪಟ್ಟಿದ್ದೆಂದು ತಿಳಿದುಬರುತ್ತದೆ. ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಇದು ಅವರ ಸಾಮಂತರಾದ ಗಂಗರ ಆಳ್ವಿಕೆಯಲ್ಲಿತ್ತು ನಂತರ ವಿಜಯನಗರ ಅರಸರು ಹೈದರಾಲಿ ಟಿಪ್ಪುಸುಲ್ತಾನರ ಆಳ್ವಿಕೆ ನಂತರ ಬ್ರಿಟಿಷರ ಅಧಿಪತ್ಯಕ್ಕೊಳಪಟ್ಟಿತ್ತು, ಸ್ವಾತಂತ್ರ ನಂತರ ೧೯೫೩ರ ಅಕ್ಟೋಬರ್‌ನಲ್ಲಿ ಬಳ್ಳಾರಿ ಜಿಲ್ಲೆಯೊಂದಿಗೆ ಇದು ಮೈಸೂರು ರಾಜ್ಯಕ್ಕೆ ಸೇರಿಸಲ್ಪಟ್ಟಿತು. ೧೯೫೬ರಲ್ಲಿ ಕರ್ನಾಟಕದಲ್ಲಿ ವಿಲೀನವಾಯಿತು.

**ಭೌಗೋಳಿಕ ಪರಿಸರ:**

ಕೂಡ್ಲಿಗಿ ತಾಲೂಕು ಮಧ್ಯದಲ್ಲಿ ಸಣ್ಣ ಬೆಟ್ಟಗುಡ್ಡಗಳನ್ನು ಹೊಂದಿದ್ದು, ಉಳಿದಂತೆ ಪ್ರಸ್ಥ ಭೂಮಿಯನ್ನು ಹೊಂದಿದೆ ಕೆಂಪು-ಬಿಳಿ ಮಿಶ್ರಿತವಾದ ಮಣ್ಣನ್ನು ಭೂಮಿ ಹೊಂದಿದೆ ಹವಾಮಾನ ಆರೋಗ್ಯಕರವಾಗಿದ್ದು, ಚಳಿಗಾಲ ಬಿಟ್ಟರೆ ಉಳಿದಂತೆ ಉಷ್ಣತೆ ಹೆಚ್ಚು ತಾಲೂಕಿನ ಪ್ರಮುಖ ಬೆಳಗಳೆಂದರೆ ಜೋಳ, ಸಜ್ಜೆ, ನವಣೆ, ನೆಲಗಡಲೆ, ಹತ್ತಿ, ಬೆಳೆಕಾಳುಗಳು, ನೀರಿನ ಆಶ್ರಯ ವಿರುವ ಕಡೆ ಭತ್ತ, ಮೆಣಸಿನಕಾಯಿ, ಈರಳ್ಳಿ ಕಬ್ಬು ಬೆಳೆಯೂಗುತ್ತದೆ, ಕೂಡ್ಲಿಗಿ ತಾಲೂಕು ಅನೇಕ ಪ್ರೇಕ್ಷಣೀಯ ಸ್ಥಳಗಳನ್ನೊಳಗೊಂಡ ಪ್ರದೇಶವಾಗಿದೆ. ಕೂಡ್ಲಿಗಿ ಪಟ್ಟಣದಲ್ಲಿಯೇ ಮಹಾತ್ಮ ಗಾಂಧಿಯವರ ಚಿತಾಭಸ್ಮ ಸ್ಮಾರಕವಿದೆ. ತಾಲೂಕಿನ ತುಂಬಾ ಹಿಂದುಳಿದ ತಾಲೂಕುಗಳಲ್ಲಿ ಒಂದಾಗಿದೆ. ಈ ತಾಲೂಕಿನ ಗುಡೆಕೋಟೆ, ಹೊಸಹಳ್ಳಿ ಭಾಗದಲ್ಲಿ ಮ್ಯಾಸನಾಯಕ ಬುಡಕಟ್ಟಿನ ಜನರಿದ್ದಾರೆ, ಇವರು ಇನ್ನೂ ಪ್ರಾಚೀನ ಕಾಲದ ಸಂಸ್ಕೃತಿಯನ್ನು ಒಳಗೊಂಡಿದ್ದಾರೆ. ಇವರ ಅಭಿವೃದ್ಧಿಗಾಗಿ ಅಂತಹ ಒಳ್ಳೆಯ ಕೆಲಸಗಳು ನಡೆಯುತಿಲ್ಲ ಕೂಡ್ಲಿಗಿ ತಾಲೂಕಿನಲ್ಲಿ ಅನೇಕ ಪಾಳೆಯಗಾರರ ಮನೆತನೆಗಳಿವೆ, ಅದರಲ್ಲಿ ಜರಿಮಲೆ ಪಾಳೆಯಗಾರರು, ಐತಿಹಾಸಿಕವಾಗಿ ಮುಖ್ಯವಾಗುತ್ತಾರೆ. ಕೂಡ್ಲಿಗಿ ತಾಲೂಕು ಅತಿ ಹಿಂದುಳಿದ ತಾಲೂಕು ಎಂದು ಡಾ॥ ನಂಜುಂಡಪ್ಪರವರ ವರದಿಯಲ್ಲಿ ನಮೂದಾಗಿರುತ್ತದೆ. ಭದ್ರ ಮೇಲ್ದಂಡೆ ಯೋಜನೆ ಜಾರಿಗೆ ಬಂದಲ್ಲಿ ತಾಲೂಕು ಭಾಗಶಃ ನೀರಾವರಿ ಸೌಲಭ್ಯ ಪಡೆಯುತ್ತಿದೆ, ಜಿಲ್ಲೆಯ ಭೌಗೋಳಿಕ ವಿಸ್ತೀರ್ಣದಲ್ಲಿ ಈ ತಾಲೂಕು ಎರಡನೇ ಸ್ಥಾನದಲ್ಲಿದೆ.

**ಕೂಡ್ಲಿಗಿ ತಾಲೂಕಿನ ಎರಡು ಗ್ರಾಮ ಪಂಚಾಯಿತಿಗಳ ಪರಿಚಯ:**

**ಬಡೇಲಡಕು ಗ್ರಾಮ ಪಂಚಾಯಿತಿ:** ತಾಲೂಕುನಿಂದ ೪.೦೦ ಕೀ.ಮಿ ದೂರದಲ್ಲಿರುವ ಬಡೇಲಡಕು ಗ್ರಾಮವು ಹಿಂದೆ ಪಾಳೆಯಗಾರರ ಆಳ್ವಿಕೆಯ ಕಾಲದಲ್ಲಿ ಸ್ಥಾಪಿಸಲ್ಪಟ್ಟಿತ್ತು ಎಂಬ ಇತಿಹಾಸವಿದೆ. ಹಿಂದೆ ಕಂಪ್ಲಿ ಕೋಟೆಯನ್ನು ಪಾಳೆಯಗಾರನು ಆಳುವ ಅಂದರೆ ಕಂಪಿಲರಾಯನ ಮಗನಾದ ರಣಸಿಂಗ ಕುಮಾರ ರಾಮನ ವಂಶಸ್ಥರು ಕಾರಣಾಂತರದಿಂದ

ಕಂಪಿಲ ದುರ್ಗವನ್ನು ಬಿಟ್ಟು ಬಡೇಲಡಕು ಗ್ರಾಮಕ್ಕೆ ಪೂರ್ವ ದಿಕ್ಕಿನಲ್ಲಿ ಮಾಳವಂತಿಯ ಪಕ್ಕದಲ್ಲೇ ತಮ್ಮ ಆರಾಧ್ಯ ದೈವನಾದ ಶೂಲದ ರಾಮದೇವಾಲಯವನ್ನು ನಿರ್ಮಿಸಿ ಅಲ್ಲಿ ವಾಸವಾಗಿದ್ದರು ಎಂದು ಇತಿಹಾಸದಿಂದ ತಿಳಿದುಬರುತ್ತದೆ. ಕಾಲ-ಕ್ರಮೇಣ ಇವರು ಬಡೇಲಡಕು ಗ್ರಾಮಕ್ಕೆ ಬಂದು ನೆಲೆನಿಂತರು ಎಂದು ತಿಳಿದುಬರುತ್ತದೆ.

ಈ ಹಿಂದೆ ಬಡೇಲಡಕು ಗ್ರಾಮವು ವೀರನದುರ್ಗ (ಬೀರಲಗುಡ್ಡ)ದ ಪಾಳೆಯಗಾರರ ವಶದಲ್ಲಿತ್ತು. ಇಲ್ಲಿ ಹಿಂದೆ ಜರ್ಮಲಿಯ ಪಾಳೆಯಗಾರರಿಗೂ ಮತ್ತು ವೀರನದುರ್ಗದ ಪಾಳೆಯಗಾರರಿಗೂ ಗಡಿಯಿಂದ ಜಗಳ ಪ್ರಾರಂಭವಾಗಿ ಘನಘೋರ ಕಾಳಗವು ಬಡೇಲಡಕು ಸ್ಥಾನೀ ಭಾಷೆಯಲ್ಲಿ ಬಡೇಲಡಕ ಎಂಬ ಹೆಸರು ಬಂದಿತು.

**ಜನಸಂಖ್ಯೆ:**

ಪುರಷರು: ೩೧೧೮, ಮಹಿಳೇಯರು: ೩೦೧೯, ಅಂಗವೀಕಲರು: ೬೩

**ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿ:**

ಅಪ್ಪಯ್ಯನಹಳ್ಳಿ ಕೂಡ್ಲಿಗಿ ತಾಲೂಕು ಬಳ್ಳಾರಿ ಜಿಲ್ಲೆ ಗುಡೇಕೋಟೆ ಹೋಬಳಿ ವ್ಯಾಪ್ತಿಗೆ ಸೇರಿದ ಗ್ರಾಮವಾಗಿದೆ. ಈ ಗ್ರಾಮವು ಗ್ರಾಮ ಪಂಚಾಯಿತಿ ಕೇಂದ್ರ ಸ್ಥಳವಾಗಿದ್ದು ಈ ಪಂಚಾಯಿತಿ ವ್ಯಾಪ್ತಿಗೆ ೯ ಹಳ್ಳಿಗಳು ಸೇರಿವೆ ಅವುಗಳು ೧.ಡಿ.ಸಿದ್ದಾಪುರ. ೨.ಕೆ.ರಾಯಾಪುರ ೩.ಅಪ್ಪಯ್ಯನಹಳ್ಳಿ ತಾಂಡ ೪.ಚಿಲುಹಳ್ಳಿ ತಾಂಡ ೫.ದೇವರ ಹಟ್ಟಿ ೬.ಹಾಲಿಸಾಗರ ೭.ಮಹದೇವಪುರ ೮.ಬೋರಯ್ಯನಗೌಡ ೯.ಬಾಂಬೆ ಕಾಲೋನಿ, ಹಾಗೆಯೇ ಗ್ರಾಮದಲ್ಲಿ ೩೦೦ ಮನೆಗೆಳಿವೆ, ಮತ್ತು ೨೦೦೦ ಜನಸಂಖ್ಯೆಯನ್ನು ಹೊಂದಿದೆ ಅಪ್ಪಯ್ಯನಹಳ್ಳಿಯಲ್ಲಿ ಪುರುಷರು ೧೨೦೯ ಮಹಿಳೆಯರು ೧೧೩೪ ಇದರಲ್ಲಿ ಒಟ್ಟು ಪರಿಶಿಷ್ಟ ಜಾತಿ ಮಹಿಳೆಯರು ೧೧೩೪ ಇದರಲ್ಲಿ ಒಟ್ಟು ಪರಿಶಿಷ್ಟ ಜಾತಿಯವರು ೮೭೮ ಪರಿಶಿಷ್ಟ ಪಂಗಡದವರು ೮೭೧ ಹಾಗೂ ದೈಹಿಕ ಅಂಗವಿಕಲರಿದ್ದಾರೆ, ಅಪ್ಪಯ್ಯನಹಳ್ಳಿ ಒಟ್ಟು ೩೮೬೭.೭ ಹೆಕ್ಟರ್, ಇದರಲ್ಲಿ ಕೃಷಿ ಭೂಮಿ ೧೭೨೮.೭ ಹೆಕ್ಟರ್ ಇದೆ, ಈ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ೩ ಪ್ರಾಥಮಿಕ ಸರ್ಕಾರಿ ಶಾಲೆ, ೧೧ ಮಾಧ್ಯಮಿಕ ಸರ್ಕಾರಿ ಶಾಲೆ ಇದೆ. ಇಲ್ಲಿಯು ಜನರ ಮುಖ್ಯ ಕಸುಬು ವ್ಯವಸಾಯವಾಗಿದೆ ಈ ಗ್ರಾಮವು ಸುಮಾರು ೫೦ ರಷ್ಟು ನೀರಾವರಿ ಭೂಮಿಯನ್ನು ಹೊಂದಿದೆ.

ಅಧ್ಯಾಯ : ಐದು

# ಕ್ಷೇತ್ರ ಪರಿಚಯ ಮತ್ತು ಪಂಚಾಯತ್ ರಾಜ್ ವ್ಯವಸ್ಥೆಯ ಬಗ್ಗೆ ಫಲಾನುಭವಿಗಳು ಹೊಂದಿರುವ ರಾಜಕೀಯ ಅರಿವು

೫.೧. ಪಂಚಾಯತ್ ರಾಜ್ ವ್ಯವಸ್ಥೆಯ ಯೋಜನೆಗಳಿಂದ ಅನುಕೂಲ ಪಡೆದ ಫಲಾನುಭವಿಗಳ ಸಂದರ್ಶನ ಮತ್ತು ವಿಶ್ಲೇಷಣೆ.

೫.೨. ಗ್ರಾಮ ಪಂಚಾಯಿತಿ ಸದಸ್ಯರ ಸಂದರ್ಶನ ವರದಿ ಮತ್ತು ವಿಶ್ಲೇಷಣೆ– ಕೋಷ್ಟಕಗಳ ಮೂಲಕ ವಿವರಣೆ

೫.೩. ಗ್ರಾಮ ಪಂಚಾಯಿತಿ ಚುನಾಯಿತಿ ಸದಸ್ಯರ ತುಲನಾತ್ಮಕ ವಿಶ್ಲೇಷಣೆ

# ಅಧ್ಯಾಯ - ಐದು

## ಕ್ಷೇತ್ರಕಾರ್ಯ

## ಪಂಚಾಯತ್ ರಾಜ್ ವ್ಯವಸ್ಥೆಯ ಬಗ್ಗೆ ಫಲಾನುಭವಿಗಳು ಹೊಂದಿರುವ ರಾಜಕೀಯ ಅರಿವು

ಈಅಧ್ಯಾಯದಲ್ಲಿ ಗ್ರಾಮ ಪಂಚಾಯಿತಿಗಳ ಅಭಿವೃದ್ಧಿ ಚಟುವಟಿಕೆಗಳ ಕುರಿತು ಅಧ್ಯಯನ ಮಾಡುವ ಉದ್ದೇಶವನ್ನಿಟ್ಟುಕೊಳ್ಳಲಾಗಿದೆ. ಭಾರತದಲ್ಲಿ ಗ್ರಾಮ ಪಂಚಾಯಿತಿಗಳಿಗೆ ಇರುವ ಅಭಿವೃದ್ಧಿ ನೀತಿಗಳು ಅದಕ್ಕೆ ಪೂರಕವಾಗಿ ಗ್ರಾಮೀಣ ಅಭಿವೃದ್ಧಿಗೆ ಹೇಗೆ ಕಾರ್ಯಕ್ರಮಗಳು ರೂಪಿತಗೊಂಡಿವೆ, ವಿದೇಶಿ ನೆರವಿನಿಂದ ಅನುಷ್ಠಾನಗೊಂಡ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ ಗ್ರಾಮೀಣ ಪ್ರದೇಶಗಳು ಯಾವ ರೀತಿಯಾಗಿ ಬಲಗೊಂಡಿವೆ ಎಂಬುದನ್ನು ನೋಡಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಬಳ್ಳಾರಿ ಜಿಲ್ಲೆಯ ಎರಡು ತಾಲೂಕುಗಳಲ್ಲಿ ಜನತೆಯ ಪಾಲ್ಗೊಳ್ಳುವಿಕೆಯನ್ನು ನೋಡುವ ಉದ್ದೇಶದೊಂದಿಗೆ ಎರಡು ನಾಲ್ಕು ಗ್ರಾಮಗಳ ಜನತೆಯನ್ನು ಸರಳ ಯಾದೃಚ್ಛಿಕ ಮಾದರಿಯನ್ನು ಅನುಸರಿಸಿ ಸಂದರ್ಶಿಸಲಾಗಿದೆ. ಹಾಗಾಗಿ, ಕುಟುಂಬಗಳ ತಿಳುವಳಿಕೆ ಮತ್ತು ಭಾಗವಹಿಸುವಿಕೆಯನ್ನು ಗುರುತಿಸಲಾಗಿದೆ. ಅಂತೆಯೇ, ಇಂದು ಗ್ರಾಮೀಣ ಜೀವನ ವ್ಯವಸ್ಥೆಯು ಸಮರ್ಪಕವಾಗಿರಲು ಸರ್ಕಾರವು ಹತ್ತು ಹಲವು ಯೋಜನೆಗಳನ್ನು ರೂಪಿಸುತ್ತಿದೆ. ಬದಲಾಗುತ್ತಿರುವ ಗ್ರಾಮೀಣ ಜೀವನಕ್ಕೆ ಅನುಕೂಲವಾಗುವಂತೆ ಈ ವ್ಯವಸ್ಥೆಗಳು ಅನುಷ್ಠಾನಗೊಳ್ಳುತ್ತಿವೆ. ಆರೋಗ್ಯ, ಶಿಕ್ಷಣ, ಕುಡಿಯುವ ನೀರು, ಒಳಚರಂಡಿ ವ್ಯವಸ್ಥೆ, ಬೀದಿ ದೀಪ, ಉತ್ತಮ ರಸ್ತೆ, ನೈರ್ಮಲ್ಯ, ತ್ಯಾಜ್ಯ ವಸ್ತುಗಳ ನಿರ್ವಹಣೆಗೆ ಈಗ ಹೆಚ್ಚು ಆದ್ಯತೆ ನೀಡಲಾಗುತ್ತಿದೆ. ಆದರೆ ಈ ಎಲ್ಲಾ ಕೆಲಸಗಳನ್ನು ಕೇವಲ ಚುನಾಯಿತ ಪ್ರತಿನಿಧಿಗಳು ಮಾತ್ರ ನಿರ್ವಹಿಸುವುದು ಕಷ್ಟಸಾಧ್ಯವಾದ ಮಾತಾಗಿದೆ. ಇದಕ್ಕೆ ಜನಪ್ರತಿನಿಧಿಗಳ ಜೊತೆಗೆ ಅಧಿಕಾರಿ ವರ್ಗ ಮತ್ತು ಗ್ರಾಮೀಣ ಜನತೆಯು ಭಾಗವಹಿಸಬೇಕು. ಹೀಗಾಗಿ ಗ್ರಾಮೀಣ ಆಡಳಿತ ವ್ಯವಸ್ಥೆ ಸುಧಾರಣೆಯಾಗುವುದು ಆದ್ಯತೆಯ ಕೆಲಸವಾಗಿರುತ್ತದೆ. ಹಾಗೂ ಗ್ರಾಮದಲ್ಲಿ ಹೆಚ್ಚುತ್ತಿರುವ ವಲಸೆಯಿಂದಾಗಿ ಅದರಿಂದಾಗ ಅನೇಕ ಸಮಸ್ಯೆಗಳು ಉದ್ಭವವಾಗುವುದಲ್ಲದೆ, ದೇಶದ ಅಭಿವೃದ್ಧಿಗೆ ಸವಾಲಾಗುತ್ತಿದೆ. ಆದ್ದರಿಂದ ಗ್ರಾಮೀಣ

ಅಭಿವೃದ್ಧಿ ಇಂದು ಪ್ರಮುಖವಾದ ಕೆಲಸವಾಗಿದ್ದು, ಈ ಮೂಲಕ ಗ್ರಾಮೀಣ ಅಭಿವೃದ್ಧಿಗಾಗಿ ಶ್ರಮವಹಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನತೆಗೆ ಒದಗಿಸಬೇಕಾದ ಮೂಲಭೂತ ಸೌಲಭ್ಯಗಳನ್ನು ಹಾಗೂ ಗ್ರಾಮದ ಸರ್ವಾಂಗೀಣ ಅಭಿವೃದ್ಧಿಗೆ ಯೋಜನೆಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ. ಗ್ರಾಮದ ಅಭಿವೃದ್ಧಿಯ ಬಗ್ಗೆ ದೂರದೃಷ್ಟಿ ಹೊಂದಿರುವ ಜನಪ್ರತಿನಿಧಿಗಳ ಹಾಗೂ ಪ್ರಜ್ಞಾವಂತ ನಾಗರಿಕರಿಂದ ಮಾತ್ರ ಅಂತಹ ಸುಸಜ್ಜಿತವಾದ ಸುಂದರ ಗ್ರಾಮಗಳನ್ನು ನಿರ್ಮಾಣ ಸಾಧ್ಯ ಎಂದು ಹೇಳಬಹುದು. ಒಟ್ಟಾರೆ ಜನಪ್ರತಿನಿಧಿಗಳು ಹಾಗೂ ಗ್ರಾಮದ ಜನತೆ ಮತ್ತು ಅಧಿಕಾರಿ ವರ್ಗ ಒಗ್ಗೂಡಿದಾಗ ಗ್ರಾಮ ನಿರ್ವಹಣೆ ಕಷ್ಟವಾದುದೇನಲ್ಲ. ಇದರಿಂದ ಜನರ ಭಾಗವಹಿಸುವಿಕೆಯಿಂದಾಗಿ ಗ್ರಾಮದ ಜನತೆಯ ಜೀವನ ಗುಣಮಟ್ಟ ಹೆಚ್ಚುತ್ತದೆ ಎಂದು ಗ್ರಹಿಸಲಾಗಿದೆ.

**೫.೧. ಕುಟುಂಬ ಪ್ರತಿನಿಧಿಗಳ ಕ್ಷೇತ್ರ ಕಾರ್ಯದ ಮಾಹಿತಿ**

**ಕೋಷ್ಟಕ–೧: ಲಿಂಗವಾರು ಮಾಹಿತಿ**

| | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|
| | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| ಲಿಂಗ | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಗಂಡು | ೨೫ | ೫೦ | ೨೫ | ೫೦ | ೨೫ | ೫೦ | ೨೫ | ೫೦ |
| ಹೆಣ್ಣು | ೨೫ | ೫೦ | ೨೫ | ೫೦ | ೨೫ | ೫೦ | ೨೫ | ೫೦ |
| ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬–೧೭

ಮೇಲೆ ತೋರಿಸಲಾದ ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿನ ನಾಲ್ಕು ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಇರುವ ಸಂದರ್ಶಿತಗೊಂಡ ಸಾಮಾನ್ಯ ಜನರ ಲಿಂಗದ ವಿವರವನ್ನು ಕೊಷ್ಟಕದಲ್ಲಿ ನೀಡಲಾಗಿದೆ. ಅದರಲ್ಲಿ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯ ಶೇ. ೧೦೦ ರಷ್ಟರಲ್ಲಿ ಶೇ. ೫೦ರಷ್ಟು ಕುಟುಂಬಗಳ ಗಂಡಸರು ಉಳಿದ ಶೇ. ೫೦ರಷ್ಟು ಕುಟುಂಬಗಳಲ್ಲಿ ಮಹಿಳೆಯರನ್ನು ಸಂದರ್ಶನ ಮಾಡಲಾಗಿದೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿಯೂ ಸಹ ಶೇ. ೧೦೦ ರಷ್ಟರಲ್ಲಿ ಶೇ. ೫೦ರಷ್ಟು ಕುಟುಂಬಗಳ ಗಂಡಸರು ಉಳಿದ ಶೇ. ೫೦ರಷ್ಟು ಕುಟುಂಬಗಳಲ್ಲಿ ಮಹಿಳೆಯರನ್ನು ಸಂದರ್ಶನ ಮಾಡಲಾಗಿದೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೫೦.೦೦ರಷ್ಟು ಕುಟುಂಬಗಳ ಗಂಡಸರು ಉಳಿದ ಶೇ. ೫೦.೦೦ರಷ್ಟು

ಕುಟುಂಬಗಳಲ್ಲಿ ಮಹಿಳೆಯರನ್ನು ಸಂದರ್ಶನ ಮಾಡಲಾಗಿದೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯ್ತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೫೦.೦೦ರಷ್ಟು ಕುಟುಂಬಗಳ ಗಂಡಸರು ಉಳಿದ ಶೇ. ೫೦.೦೦ರಷ್ಟು ಕುಟುಂಬಗಳಲ್ಲಿ ಮಹಿಳೆಯರನ್ನು ಸಂದರ್ಶನ ಮಾಡಲಾಗಿದೆ. ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳನ್ನು ಹೋಲಿಕೆಯನ್ನು ಮಾಡಿದಾಗ ಗಂಡು ಮತ್ತು ಹೆಣ್ಣು ಮಕ್ಕಳು ಸಮ ಪ್ರಮಾಣದಲ್ಲಿ ಸಂದರ್ಶನಗೊಂಡಿರುವುದನ್ನು ನೋಡಬಹುದಾಗಿದೆ.

ಮೇಲಿನ ಅಂಶಗಳಿಂದ ತಿಳಿದು ಬರುವ ಅಂಶವೆಂದರೆ, ಹೈದ್ರಾಬಾದ್ ಕರ್ನಾಟಕದ ಪ್ರದೇಶವಾದ ಬಳ್ಳಾರಿ ಗಂಡು ಹೆಣ್ಣು ಎಂಬ ಭೇದವನ್ನು ಎಣಿಸದೆ ಎಲ್ಲರು ತಮ್ಮ ಅಭಿಪ್ರಾಯವನ್ನು ಸಮ ಪ್ರಮಾಣದಲ್ಲಿ ಹಂಚಿಕೊಂಡಿರುವುದನ್ನು ಕಾಣಬಹುದಾಗಿದೆ. ಹಾಗಾಗಿ, ಕುಟುಂಬದ ಮಹಿಳೆಯರು ತಮ್ಮ ಸಮಸ್ಯೆಯನ್ನು ಹೇಳಿಕೊಳ್ಳುವ ಮೂಲಕ ಮಹಿಳೆಯರು ಸಬಲೀಕರಣವಾಗಿರುವುದನ್ನು ತೋರಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಇನ್ನು ಹೆಚ್ಚು-ಹೆಚ್ಚು ಚರ್ಚೆಯಲ್ಲಿ ಭಾಗವಹಿಸುವ ಮೂಲಕ ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಸ್ವಂತಃ ಕಂಡುಕೊಳ್ಳುವುದರ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಎಲ್ಲಾ ಹಂತಗಳಲ್ಲಿ ತೊಡಗಿಸಿಕೊಂಡು ಬೆಳವಣಿಗೆ ಆಗುವುದನ್ನು ನೋಡಲಾಗುತ್ತಿದೆ.

**ಕೋಷ್ಟಕ-೨ ವಯಸ್ಸುವಾರು ಮಾಹಿತಿ**

| | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|
| | ಅಪ್ಪಯ್ಯನಹಳ್ಳಿ | | ಬಡೇಲಡುಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| ವಯಸ್ಸು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ೨೧-೩೦ | ೧೮ | ೩೬ | ೧೮ | ೩೬ | ೧೬ | ೩೨ | ೧೭ | ೩೪ |
| ೩೧-೪೦ | ೧೨ | ೨೪ | ೧೨ | ೨೪ | ೧೨ | ೨೪ | ೧೧ | ೨೨ |
| ೪೧-೫೦ | ೨೦ | ೪೦ | ೨೦ | ೪೦ | ೨೨ | ೪೪ | ೨೨ | ೪೪ |
| | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಮೇಲೆ ಹೇಳಲಾದ ಬಳ್ಳಾರಿ ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಯಲ್ಲಿ ಸಂದರ್ಶನಗೊಂಡ ಕುಟುಂಬಗಳು ಯಾವ ವಯಸ್ಸಿನವರು ಎಂದು ವಿವರಿಸಲಾಗಿದೆ. ಪುರುಷ ಮತ್ತು ಮಹಿಳೆಯರ ವಯೋಮಿತಿಯವರು ಭಾಗವಹಿಸಿದ್ದಾರೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೩೬ರಷ್ಟು ಕುಟುಂಬಗಳು ೨೧ರಿಂದ ೩೦ ವಯೋಮಿತಿಯವರಾಗಿದ್ದಾರೆ. ಅದೇ ಪ್ರಕಾರ ಶೇ. ೨೪.೦೦ರಷ್ಟು ಕುಟುಂಬಗಳು ೩೧ರಿಂದ ೪೦ ವಯೋಮಿತಿಯವರಾಗಿದ್ದಾರೆ. ಉಳಿದ ಶೇ. ೪೦.೦೦ರಷ್ಟು ಕುಟುಂಬಗಳು ೪೧ ರಿಂದ ೫೦ ವಯೋಮಿತಿಯವರಾಗಿದ್ದಾರೆ. ಹಾಗೂ ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೩೬.೦೦ರಷ್ಟು ಕುಟುಂಬಗಳು ೨೧ರಿಂದ ೩೦ ವಯೋಮಿತಿಯವರಾಗಿದ್ದಾರೆ. ಅದೇ ಪ್ರಕಾರ ಶೇ.೨೪.೦೦ರಷ್ಟು ಕುಟುಂಬಗಳು ೩೧ರಿಂದ ೪೦ ವಯೋಮಿತಿಯವರಾಗಿದ್ದಾರೆ. ಉಳಿದ ಶೇ. ೪೦.೦೦ರಷ್ಟು ಕುಟುಂಬಗಳು ೪೧ ರಿಂದ ೫೦ ವಯೋಮಿತಿಯವರಾಗಿದ್ದಾರೆ. ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೩೨ರಷ್ಟು ಕುಟುಂಬಗಳು ೨೧ರಿಂದ ೩೦ ವಯೋಮಿತಿಯವರಾಗಿದ್ದಾರೆ. ಅದೇ ಪ್ರಕಾರ ಶೇ. ೨೪.೦೦ರಷ್ಟು ಕುಟುಂಬಗಳು ೩೧ರಿಂದ ೪೦ ವಯೋಮಿತಿಯವರಾಗಿದ್ದಾರೆ. ಉಳಿದ ಶೇ. ೪೪.೦೦ರಷ್ಟು ಕುಟುಂಬಗಳು ೪೧ ರಿಂದ ೫೦ ವಯೋಮಿತಿಯವರಾಗಿದ್ದಾರೆ. ಹಾಗೂ ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೩೪.೦೦ರಷ್ಟು ಕುಟುಂಬಗಳು ೨೧ರಿಂದ ೩೦ ವಯೋಮಿತಿಯವರಾಗಿದ್ದಾರೆ. ಅದೇ ಪ್ರಕಾರ ಶೇ. ೨೨.೦೦ರಷ್ಟು ಕುಟುಂಬಗಳು ೩೧ರಿಂದ ೪೦ ವಯೋಮಿತಿಯವರಾಗಿದ್ದಾರೆ. ಉಳಿದ ಶೇ. ೪೪.೦೦ರಷ್ಟು ಕುಟುಂಬಗಳು ೪೧ ರಿಂದ ೫೦ ವಯೋಮಿತಿಯವರಾಗಿದ್ದಾರೆ. ಆದರೆ ನಾಲ್ಕು ಗ್ರಾಮ ಪಂಚಾಯಿತಿಯಲ್ಲಿ ೫೦ ವರ್ಷಕ್ಕಿಂತ ಹೆಚ್ಚಿನ ವಯೋಮಿತಿಯ ಕುಟುಂಬದವರು ಇಲ್ಲದಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವ ಅಂಶವೆಂದರೆ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ಶೇ. ೪೦.೦೦ರಷ್ಟು ಕುಟುಂಬಗಳು ಹಾಗೂ ಬಳ್ಳಾರಿ ತಾಲೂಕಿನ ಗ್ರಾಮ ಪಮಾಚಾಯಿತಿಯಲ್ಲಿ ಶೇ. ೪೪.೦೦ರಷ್ಟು ಕುಟುಂಬಗಳು ೪೧ರಿಂದ ೫೦ ವಯೋಮಿತಿಯ ಪ್ರಮಾಣ ಹೆಚ್ಚು ಹುಮ್ಮಸ್ಸಿನಿಂದ ಸಂದರ್ಶಿತರಾಗುವ ಜೊತೆಗೆ ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚು-ಹೆಚ್ಚಾಗಿ ಭಾಗವಹಿಸುತ್ತಿದ್ದಾರೆಂದು ತಿಳಿದುಬರುತ್ತದೆ. ತಳಮಟ್ಟದ ಗ್ರಾಮ ಪಂಚಾಯಿತಿಗಳ ರಾಜಕೀಯದ ಮೂಲಕ ಜನರು ತಮ್ಮ ಸಮಸ್ಯೆಗಳನ್ನು ಹೇಳಿಕೊಳ್ಳುವುದರರೊಂದಿಗೆ ಗ್ರಾಮಗಳ ಅಭಿವೃದ್ಧಿಯಲ್ಲಿ ಪಂಚಾಯಿತಿಗಳು ಮಹತ್ತರ ಪಾತ್ರವಹಿಸುತ್ತವೆ ಎಂದು ಹೇಳಬಹುದಾಗಿದೆ.

**ಕೋಷ್ಟಕ-೩: ಶಿಕ್ಷಣದ ಮಾಹಿತಿ ವಿವರ:-**

| [illegible] | ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| | ಅನಕ್ಷರಸ್ಥರು | ೧೮ | ೩೬ | ೧೫ | ೩೦ | ೧೦ | ೨೦ | ೧೩ | ೨೬ |
| | ಪ್ರಾಥಮಿಕ ಶಿಕ್ಷಣ | ೨೨ | ೪೪ | ೨೪ | ೪೮ | ೨೨ | ೪೪ | ೧೯ | ೩೮ |
| | ಪ್ರೌಡ ಶಿಕ್ಷಣ | ೮ | ೧೬ | ೮ | ೧೬ | ೧೦ | ೨೦ | ೧೧ | ೨೨ |
| | ಪದವಿ ಪೂರ್ವ | ೨ | ೪ | ೩ | ೬ | ೮ | ೧೬ | ೭ | ೧೪ |
| ಒಟ್ಟು | | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಮೇಲಿನ ಅಂಕಿ-ಅಂಶಗಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿರುವ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳಿಂದ ಸಂದರ್ಶನಗೊಂಡವರ ಶಿಕ್ಷಣದ ವಿವರವನ್ನು ನೀಡಲಾಗಿದೆ. ಅದರಲ್ಲಿ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೪೪.೦೦ರಷ್ಟು ಕುಟುಂಬಗಳು ಪ್ರಾಥಮಿಕ ಶಿಕ್ಷಣವನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೧೬.೦೦ರಷ್ಟು ಪ್ರೌಢ ಶಿಕ್ಷಣವನ್ನು ಹೊಂದಿರುತ್ತಾರೆ. ಶೇ. ೪.೦೦ರಷ್ಟು ಕುಟುಂಬಗಳು ಪದವಿ ಶಿಕ್ಷಣವನ್ನು ಹೊಂದಿರುತ್ತಾರೆ. ಉಳಿದ ಶೇ. ೩೬.೦೦ರಷ್ಟು ಕುಟುಂಬಗಳು ಅನಕ್ಷರಸ್ಥರ ಕುಟುಂಬಗಳನ್ನು ಸಂದರ್ಶಿಸಲಾಯಿತು ಹಾಗೂ ಬಡೇಲಡಕು ಗ್ರಾಮ ಪಂಚಾಯಿತಿಯಲಿ ಶೇ. ೧೦೦ರಷ್ಟರಲ್ಲಿ ಶೇ. ೪೮.೦೦ರಷ್ಟು ಕುಟುಂಬಗಳು ಪ್ರಾಥಮಿಕ ಶಿಕ್ಷಣವನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೧೬.೦೦ರಷ್ಟು ಪ್ರೌಢ ಶಿಕ್ಷಣವನ್ನು ಹೊಂದಿರುತ್ತಾರೆ. ಶೇ. ೬.೦೦ರಷ್ಟು ಕುಟುಂಬಗಳು ಪದವಿ ಶಿಕ್ಷಣವನ್ನು ಹೊಂದಿರುತ್ತಾರೆ. ಉಳಿದ ಶೇ. ೩೦.೦೦ರಷ್ಟು ಕುಟುಂಬಗಳು ಅನಕ್ಷರಸ್ಥರ ಕುಟುಂಬಗಳನ್ನು ಸಂದರ್ಶಿಸಲಾಯಿತು

ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲಿ ಶೇ. ೧೦೦ರಷ್ಟರಲ್ಲಿ ಶೇ. ೪೪.೦೦ರಷ್ಟು ಕುಟುಂಬಗಳು ಪ್ರಾಥಮಿಕ ಶಿಕ್ಷಣವನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೨೦.೦೦ರಷ್ಟು ಪ್ರೌಢ ಶಿಕ್ಷಣವನ್ನು ಹೊಂದಿರುತ್ತಾರೆ. ಶೇ. ೧೬.೦೦ರಷ್ಟು ಕುಟುಂಬಗಳು ಪದವಿ ಶಿಕ್ಷಣವನ್ನು ಹೊಂದಿರುತ್ತಾರೆ. ಉಳಿದ ಶೇ. ೨೦.೦೦ರಷ್ಟು ಕುಟುಂಬಗಳು ಅನಕ್ಷರಸ್ಥರ ಕುಟುಂಬಗಳನ್ನು ಸಂದರ್ಶಿಸಲಾಯಿತು ಹಾಗೂ ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೩೮.೦೦ರಷ್ಟು ಕುಟುಂಬಗಳು ಪ್ರಾಥಮಿಕ ಶಿಕ್ಷಣವನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೨೨.೦೦ರಷ್ಟು ಪ್ರೌಢ ಶಿಕ್ಷಣವನ್ನು

ಹೊಂದಿರುತ್ತಾರೆ. ಶೇ. ೧೪.೦೦ರಷ್ಟು ಕುಟುಂಬಗಳು ಪದವಿ ಶಿಕ್ಷಣವನ್ನು ಹೊಂದಿರುತ್ತಾರೆ. ಉಳಿದ ಶೇ. ೨೬.೦೦ರಷ್ಟು ಕುಟುಂಬಗಳು ಅನಕ್ಷರಸ್ಥರ ಕುಟುಂಬಗಳನ್ನು ಸಂದರ್ಶಿಸಲಾಯಿತು

ತೀರಾ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಕುಟುಂಬಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಕುಟುಂಬಗಳಲ್ಲಿ ಅನಕ್ಷರಸ್ಥರಾಗಿದ್ದರೂ ನಾವು ಕೇಳಿದ ಪ್ರಶ್ನೆಗಳಿಗೆ ಸಮರ್ಥವಾದ ಉತ್ತರವನ್ನು ಕೊಟ್ಟಿರುವುದನ್ನು ನೋಡಿದರೆ, ಬಳ್ಳಾರಿ ತಾಲೂಕಿನಲ್ಲಿ ಮತ್ತು ಕೂಡ್ಲಿಗಿ ತಾಲೂಕಿನ ಬಡೇಲಡಕು ಗ್ರಾಮ ಪಂಚಾಯಿತಿ ಕುಟುಂಬಗಳಲ್ಲಿ ವಿದ್ಯಾವಂತರಾಗಿದ್ದರಿಂದ ಗ್ರಾಮ ಪಂಚಾಯಿತಿಯ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಲು ಸಮರ್ಥರಾಗಿದ್ದಾರೆ. ಆದರೆ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿ ಕುಟುಂಬಗಳು ಇಂತಹ ಜ್ಞಾನದ ಕೊರತೆಯಿರುವುದು ಅಧ್ಯಯನದಲ್ಲಿ ತಿಳಿದುಬರುತ್ತದೆ. ಅಂದಹಾಗೆ, ಇವರು ಹೆಚ್ಚಾಗಿ ವಾರ್ಡಿನ ಸಭೆ, ಚರ್ಚೆ, ಸಂಪರ್ಕ, ಆಡಳಿತದ ಬಗ್ಗೆ ಅರಿವುನ್ನು ಹೊಂದಲು ಅಕ್ಷರ ಜ್ಞಾನದ ಅವಶ್ಯಕತೆ ಇದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ-೪: ಉದ್ಯೋಗದ ಮಾಹಿತಿ**

| ಉದ್ಯೋಗ | ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| | ಕೂಲಿ | ೨೯ | ೫೮ | ೨೪ | ೪೮ | ೨೧ | ೪೨ | ೧೯ | ೩೮ |
| | ವ್ಯವಸಾಯ | ೧೮ | ೩೬ | ೨೦ | ೪೦ | ೨೩ | ೪೬ | ೨೩ | ೪೬ |
| | ಮನೆಗೆಲಸ | ೨ | ೪ | ೩ | ೬ | ೨ | ೪ | ೪ | ೮ |
| | ಸರ್ಕಾರಿ ಉದ್ಯೋಗ | ೧ | ೨ | ೩ | ೬ | ೪ | ೮ | ೪ | ೮ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಮೇಲಿನ ಅಂಶಗಳನ್ನು ಪರಿಗಣಿಸುತ್ತಾ ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಯಲ್ಲಿ ಸಂದರ್ಶನಗೊಂಡ ಕುಟುಂಬಗಳು ತಮ್ಮ ಜೀವನಕ್ಕಾಗಿ ಮಾಡಿಕೊಂಡ ಉದ್ಯೋಗದ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೫೮.೦೦ರಷ್ಟು ಕುಟುಂಬಗಳು ಕೂಲಿಯಿಂದ ತಮ್ಮ ಜೀವನ ಮಾಡುತ್ತಿದ್ದಾರೆ. ಅದೇ ಪ್ರಕಾರ ಶೇ. ೩೬.೦೦ರಷ್ಟು ಕುಟುಂಬಗಳು ವ್ಯವಸಾಯವನ್ನು ಆದಾರಿಸಿದ್ದಾರೆ. ಶೇ. ೪.೦೦ರಷ್ಟು ಕುಟುಂಬಗಳು ಮತ್ತೊಬ್ಬರ ಮನೆಗೆ ಹೋಗಿ ಮನೆಗೆಲಸವನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಇತರೆ ಶೇ. ೨.೦೦ರಷ್ಟು ಕುಟುಂಬಗಳು ಸರ್ಕಾರಿ ಉದ್ಯೋಗದ ಮೇಲೆ ಆಧಾರಿತರಾಗಿದ್ದಾರೆ. ಹಾಗೆಯೇ, ಅದೇ ತಾಲೂಕಿನ ಬಡೇಲಡಕು

ಗ್ರಾಮ ಪಂಚಾಯಿತಿಯಲ್ಲಿ ಶೇ. ೪೮.೦೦ರಷ್ಟು ಕುಟುಂಬಗಳು ಕೂಲಿಯಿಂದ ತಮ್ಮ ಜೀವನ ಮಾಡುತ್ತಿದ್ದಾರೆ. ಅದೇ ಪ್ರಕಾರ ಶೇ. ೪೦.೦೦ರಷ್ಟು ಕುಟುಂಬಗಳು ವ್ಯವಸಾಯವನ್ನು ಆದಾರಿಸಿದ್ದಾರೆ. ಶೇ. ೬.೦೦ರಷ್ಟು ಕುಟುಂಬಗಳು ಮತ್ತೊಬ್ಬರ ಮನೆಗೆ ಹೋಗಿ ಮನೆಗೆಲಸವನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಇತರೆ ಶೇ. ೬.೦೦ರಷ್ಟು ಕುಟುಂಬಗಳು ಸರ್ಕಾರಿ ಉದ್ಯೋಗದ ಮೇಲೆ ಆದಾರಿತರಾಗಿದ್ದಾರೆ. ಮುಂದುವರಿದು, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೪೨.೦೦ರಷ್ಟು ಕುಟುಂಬಗಳು ಕೂಲಿಯಿಂದ ತಮ್ಮ ಜೀವನ ಮಾಡುತ್ತಿದ್ದಾರೆ.

ಅದೇ ಪ್ರಕಾರ ಶೇ. ೪೬.೦೦ರಷ್ಟು ಕುಟುಂಬಗಳು ವ್ಯವಸಾಯವನ್ನು ಆಧರಿಸಿದ್ದಾರೆ. ಶೇ. ೪.೦೦ರಷ್ಟು ಕುಟುಂಬಗಳು ಮತ್ತೊಬ್ಬರ ಮನೆಗೆ ಹೋಗಿ ಮನೆಗೆಲಸವನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಇತರೆ ಶೇ. ೮.೦೦ರಷ್ಟು ಕುಟುಂಬಗಳು ಸರ್ಕಾರಿ ಉದ್ಯೋಗದ ಮೇಲೆ ಆಧಾರಿತರಾಗಿದ್ದಾರೆ. ಹಾಗೆಯೇ, ಅದೇ ತಾಲೂಕಿನ ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೩೮.೦೦ರಷ್ಟು ಕುಟುಂಬಗಳು ಕೂಲಿಯಿಂದ ತಮ್ಮ ಜೀವನ ಮಾಡುತ್ತಿದ್ದಾರೆ. ಅದೇ ಪ್ರಕಾರ ಶೇ. ೪೬.೦೦ರಷ್ಟು ಕುಟುಂಬಗಳು ವ್ಯವಸಾಯವನ್ನು ಆಧರಿಸಿದ್ದಾರೆ. ಶೇ. ೮.೦೦ರಷ್ಟು ಕುಟುಂಬಗಳು ಮತ್ತೊಬ್ಬರ ಮನೆಗೆ ಹೋಗಿ ಮನೆಗೆಲಸವನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಇತರೆ ಶೇ. ೮.೦೦ರಷ್ಟು ಕುಟುಂಬಗಳು ಸರ್ಕಾರಿ ಉದ್ಯೋಗದ ಮೇಲೆ ಆಧಾರಿತರಾಗಿದ್ದಾರೆ. ಇನ್ನುಳಿದ ಕುಟುಂಬಗಳು ಸಣ್ಣ ವ್ಯಾಪಾರದಲ್ಲಿ ತಮ್ಮ ಜೀವನವನ್ನು ನಡೆಸಿಕೊಂಡು ಹೋಗುತ್ತಿರುವುದು ಕ್ಷೇತ್ರಕಾರ್ಯದ ಅಧ್ಯಯದಿಂದ ತಿಳಿದು ಬರುತ್ತದೆ.

ತೀರಾ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಕುಟುಂಬಗಳಲ್ಲಿ ಸರ್ಕಾರಿ ಉದ್ಯೋಗಕ್ಕಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಕುಟುಂಬಗಳಲ್ಲಿ ಸರ್ಕಾರಿ ಉದ್ಯೋಗಿಗಳ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ. ಆದರೆ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮದಲ್ಲಿ ಹೆಚ್ಚಿನ ಸಾಕ್ಷರತೆಯ ಕೊರತೆಯಿಂದ ಸರ್ಕಾರದ ಹುದ್ದೆಗಳಲ್ಲಿ ಭಾಗವಹಿಸುವುದರಲ್ಲಿ ವಿಫಲವಾಗಿರುವುದರಿಂದ ಹಿಂದುಳಿಯುವುದಕ್ಕೆ ಒಂದು ಕಾರಣವಾಗಿದೆ ಎನ್ನಬಹುದು. ಹೆಚ್ಚು ಅಭಿವೃದ್ಧಿಯನ್ನು ಕಾಣುವುದಕ್ಕೆ ಉದ್ಯೋಗದ ಅವಶ್ಯಕತೆಯು ಇದೆ ಎನ್ನಲಾಗುತ್ತದೆ. ಆದ್ದರಿಂದ ಅಕ್ಷರವನ್ನು ಕಲಿಯುವುದ ಜೊತೆಗೆ ಬದುಕುವ ಕೌಶಲ್ಯಗಳನ್ನು ಪಡೆದುಕೊಂಡಾಗ ಸರ್ಕಾರಿ ಉದ್ಯೋಗದ ಜೊತೆಯಲ್ಲಿ ಆರೋಗ್ಯಕರವಾದ ಜೀವನವನ್ನು ನಡೆಸಲು ಸಹಾಯವಾಗುತ್ತದೆ ಎಂದು ಹೇಳಬಹುದಾಗಿದೆ.

ಕೋಷ್ಟಕ-೫: ವರಮಾನದ ವಿವರ

| | ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | | ಸಂಖ್ಯೆ | ಶೇ. | ಸಂ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ವರಮಾನ | ೧೦೦೦-೫೦೦೦ | ೨೧ | ೪೨ | ೧೯ | ೩೮ | ೧೭ | ೩೪ | ೧೮ | ೩೬ |
| | ೫೦೦೧-೧೦೦೦೦ | ೧೪ | ೨೮ | ೧೬ | ೩೨ | ೧೫ | ೩೦ | ೧೨ | ೨೪ |
| | ೧೦೦೦೧-೨೦೦೦೦ | ೧೦ | ೨೦ | ೮ | ೧೬ | ೧೦ | ೨೦ | ೧೦ | ೨೦ |
| | ೨೦೦೦೧-೩೫೦೦೦ | ೫ | ೧೦ | ೭ | ೧೪ | ೮ | ೧೬ | ೧೦ | ೨೦ |
| ಒಟ್ಟು | | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ಹೇಳಿದಂತೆ ಅಂಕಿ-ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡಾಗ ಕೂಡ್ಲಿಗಿ ತಾಲೂಕು ಮತ್ತು ಬಳ್ಳಾರಿ ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳ ವರಮಾನದ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೪೨.೦೦ರಷ್ಟು ಕುಟುಂಬಗಳು ೧೦೦೦ರಿಂದ ೫೦೦೦ ವರಮಾನ ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೨೮.೦೦ರಷ್ಟು ಕುಟುಂಬಗಳು ೫೦೦೧ರಿಂದ ೧೦೦೦೦ ವರಮಾನ ಹೊಂದಿದವರಾಗಿದ್ದಾರೆ. ಉಳಿದ ಶೇ. ೨೦.೦೦ರಷ್ಟು ಕುಟುಂಬಗಳು ೧೦,೦೦೧ರಿಂದ ೨೦,೦೦೧ ವರಮಾನ ಮತ್ತು ಶೇ. ೧೦.೦೦ರಷ್ಟು ಕುಟುಂಬಗಳು ೨೦,೦೦೧ರಿಂದ ೩೫,೦೦೦ ವರಮಾನ ಹೊಂದಿದವರಾಗಿದ್ದಾರೆ. ಅದರಂತೆ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೩೮.೦೦ರಷ್ಟು ಕುಟುಂಬಗಳು ೧೦೦೦ರಿಂದ ೫೦೦೦ ವರಮಾನ ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೩೨.೦೦ರಷ್ಟು ಕುಟುಂಬಗಳು ೫೦೦೧ರಿಂದ ೧೦೦೦೦ ವರಮಾನ ಹೊಂದಿದವರಾಗಿದ್ದಾರೆ. ಶೇ. ೧೬.೦೦ರಷ್ಟು ಕುಟುಂಬಗಳು ೧೦,೦೦೧ರಿಂದ ೨೦,೦೦೧ ವರಮಾನ ಮತ್ತು ಕೆಲವು ಶೇ. ೧೪.೦೦ರಷ್ಟು ಕುಟುಂಬಗಳು ೨೦,೦೦೧ರಿಂದ ೩೫,೦೦೦ ವರಮಾನ ಸಂಪಾದಿಸುತ್ತಿದಾರೆ ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೩೪.೦೦ರಷ್ಟು ಕುಟುಂಬಗಳು ೧೦೦೦ರಿಂದ ೫೦೦೦ ವರಮಾನ ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೩೦.೦೦ರಷ್ಟು ಕುಟುಂಬಗಳು ೫೦೦೧ರಿಂದ ೧೦೦೦೦ ವರಮಾನ ಹೊಂದಿದವರಾಗಿದ್ದಾರೆ. ಶೇ. ೨೦.೦೦ರಷ್ಟು ಕುಟುಂಬಗಳು ೧೦,೦೦೧ರಿಂದ ೨೦,೦೦೧ ವರಮಾನ ಮತ್ತು ಶೇ. ೧೬.೦೦ರಷ್ಟು ಕುಟುಂಬಗಳು ೨೦,೦೦೧ರಿಂದ ೩೫,೦೦೦ ವರಮಾನ ಹೊಂದಿದವರಾಗಿದ್ದಾರೆ.

ಮುಂದುವರಿದು, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೩೬.೦೦ರಷ್ಟು ಕುಟುಂಬಗಳು ೧೦೦೦ರಿಂದ ೫೦೦೦ ವರಮಾನ ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೨೪.೦೦ರಷ್ಟು ಕುಟುಂಬಗಳು ೫೦೦೧ರಿಂದ ೧೦೦೦೦ ವರಮಾನ ಹೊಂದಿದವರಾಗಿದ್ದಾರೆ. ಶೇ. ೨೦.೦೦ರಷ್ಟು ಕುಟುಂಬಗಳು ೧೦,೦೦೧ರಿಂದ ೨೦,೦೦೧ ವರಮಾನ ಮತ್ತು ಕೆಲವು ಶೇ. ೨೦.೦೦ರಷ್ಟು ಕುಟುಂಬಗಳು ೨೦,೦೦೧ರಿಂದ ೩೫,೦೦೦ರಷ್ಟು ವರಮಾನವನ್ನು ಹೊಂದಿರುವುದು ತಿಳಿದುಬರುತ್ತದೆ.

ಅಲ್ಲದೇ, ಮೇಲಿನ ಅಂಶಗಳನ್ನು ನೋಡಿದಾಗ ತೀರಾ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಕುಟುಂಬಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಯ ಕುಟುಂಬಗಳು ಹೆಚ್ಚಿನ ವರಮಾನ ಹೊಂದಿದವರ ಪ್ರಮಾಣ ಹೆಚ್ಚಾಗಿರುವುದು ಅಧ್ಯಯನದಿಂದ ಗಮನಿಸಲಾಗಿದೆ. ಆದರೆ ಕೂಡ್ಲಿಗಿಯಲ್ಲಿ ಆ ಪ್ರಮಾಣ ಕೆಳಮಟ್ಟದಾಗಿದೆ ಎಂದು ಹೇಳಬಹದಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ವರಮಾನದ ಏರಿಕೆಯಿಲ್ಲದೆ ಅಭಿವೃದ್ಧಿಯನ್ನು ಸಾಧಿಸುವುದು ಸಾಧ್ಯವಿಲ್ಲ. ಇದು ಇವೆರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳನ್ನು ನೋಡಿದಾಗ ತಿಳಿದು ಬರುತ್ತದೆ. ಹೆಚ್ಚು ವರಮಾನ ಹೊಂದುವುದರೊಂದಿಗೆ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ. ಆದರೆ ಹೆಚ್ಚಿನ ವರಮಾನವಿಲ್ಲದೆ ಅಭಿವೃದ್ಧಿಯು ಸಾಧ್ಯವಿಲ್ಲ. ವರಮಾನವು ಅಭಿವೃದ್ಧಿಯ ಸಾಧನ. ಅದು ಅಭಿವೃದ್ಧಿಗೆ ಅಗತ್ಯ. ಉತ್ತಮ ಜೀವನ ನಿರ್ವಹಣೆಗಾಗಿ ವರಮಾನ ಅಗತ್ಯವಿದೆ ಎಂದು ಕಂಡುಬರುತ್ತದೆ. ಹಾಗಾಗಿ, ಹಿಂದುಳಿದ ಪಟ್ಟಣ ಪಂಚಾಯಿತಿಯು ವರಮಾನವನ್ನು ಹೆಚ್ಚಾಗಿ ವೃದ್ಧಿಸಿಕೊಳ್ಳುವುದರ ಮೂಲಕ ಅಲ್ಲಿನ ಮೂಲಭೂತ ಸೌಲಭ್ಯ, ಆರೋಗ್ಯವನ್ನು ಪಡೆಯುವುದರ ಹಿನ್ನೆಲೆಯಲ್ಲಿ ಅಭಿವೃದ್ಧಿ ಕಾಣುವ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ-೬: ರಾಜಕೀಯ ಅರಿವು ಮತ್ತು ಭಾಗವಹಿಸುವಿಕೆ**

| ಅರಿವು ಮತ್ತು ಭಾಗವಹಿಸುವಿಕೆ | ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಈಗ ಯಾರು ಚುನಾಯಿತರಾಗಿದ್ದಾರೆ | ಗೊತ್ತಿದೆ | ೨೭ | ೫೪ | ೩೧ | ೬೨ | ೩೮ | ೭೬ | ೪೨ | ೮೪ |
| | ಗೊತ್ತಿಲ್ಲಾ | ೨೩ | ೪೬ | ೧೯ | ೩೮ | ೧೨ | ೨೪ | ೮ | ೧೬ |
| ಒಟ್ಟು | | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಕೋಷ್ಟಕಗಳಲ್ಲಿ ಗ್ರಾಮದ ಜನರ ರಾಜಕೀಯ ಅರಿವು ಮತ್ತು ಭಾಗವಹಿಸುವುಕೆಯ ವಿವರಗಳನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೫೪.೦೦ರಷ್ಟು ಕುಟುಂಬಗಳು ಯಾರು ಚುನಾಯಿತರಾಗಿದ್ದಾರೆ ಎಂಬುದರ ಬಗ್ಗೆ ಅರಿವನ್ನು ಹೊಂದಿ ರಾಜಕೀಯದಲ್ಲಿ ಭಾಗವಹಿಸುವುದು ತಿಳಿದುಬಂದಿದೆ. ಅದೇ ಪ್ರಕಾರ ಉಳಿದ ಶೇ. ೪೬.೦೦ರಷ್ಟು ಕುಟುಂಬಗಳಿಗೆ ಯಾರು ಚುನಾಯಿತರಾಗಿದ್ದಾರೆ ಎಂಬುದು ಅವರಿಗೆ ತಿಳಿಯದೇ ಅರಿವಿನ ಕೊರತೆ ಇರುವುದು ಕಂಡುಬಂದಿತು. ಬಡೇಲಡಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೬೨.೦೦ರಷ್ಟು ಕುಟುಂಬಗಳು ಯಾರು ಚುನಾಯಿತರಾಗಿದ್ದಾರೆ ಎಂಬುದರ ಬಗ್ಗೆ ಅರಿವನ್ನು ಹೊಂದಿ ರಾಜಕೀಯದಲ್ಲಿ ಭಾಗವಹಿಸುವುದು ತಿಳಿದುಬಂದಿದೆ. ಅದೇ ಪ್ರಕಾರ ಉಳಿದ ಶೇ. ೩೮.೦೦ರಷ್ಟು ಕುಟುಂಬಗಳಿಗೆ ಯಾರು ಚುನಾಯಿತರಾಗಿದ್ದಾರೆ ಎಂಬುದು ಅವರಿಗೆ ತಿಳಿಯದೇ ಅರಿವಿನ ಕೊರತೆ ಇರುವುದು ಕಂಡುಬಂದಿತು. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೭೬.೦೦ರಷ್ಟು ಕುಟುಂಬಗಳು ಯಾರು ಚುನಾಯಿತರಾಗಿದ್ದಾರೆ ಎಂಬುದರ ಬಗ್ಗೆ ಅರಿವನ್ನು ಹೊಂದಿ ರಾಜಕೀಯದಲ್ಲಿ ಭಾಗವಹಿಸುವುದು ತಿಳಿದುಬಂದಿದೆ. ಅದೇ ಪ್ರಕಾರ ಉಳಿದ ಶೇ. ೨೪.೦೦ರಷ್ಟು ಕುಟುಂಬಗಳಿಗೆ ಯಾರು ಚುನಾಯಿತರಾಗಿದ್ದಾರೆ ಎಂಬುದು ಅವರಿಗೆ ತಿಳಿಯದೆ ಇರುವುದು ಅರಿವಿನ ಕೊರತೆ ಇರುವುದು ಕಂಡುಬಂದಿತು. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೮೪.೦೦ರಷ್ಟು ಕುಟುಂಬಗಳು ಯಾರು ಚುನಾಯಿತರಾಗಿದ್ದಾರೆ ಎಂಬುದರ ಬಗ್ಗೆ ಅರಿವನ್ನು ಹೊಂದಿ ರಾಜಕೀಯದಲ್ಲಿ ಭಾಗವಹಿಸುವುದು ತಿಳಿದುಬಂದಿದೆ. ಅದೇ ಪ್ರಕಾರ ಉಳಿದ ಶೇ. ೧೬.೦೦ರಷ್ಟು ಕುಟುಂಬಗಳಿಗೆ ಯಾರು ಚುನಾಯಿತರಾಗಿದ್ದಾರೆ ಎಂಬುದು ಅವರಿಗೆ ತಿಳಿಯದೇ ಅರಿವಿನ ಕೊರತೆ ಇರುವುದು ಕಂಡುಬಂದಿತು.

ಒಟ್ಟಾರೆ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಕುಟುಂಬಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಖಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಚುನಾಯಿತರಾಗಿರುವುದರ ಬಗ್ಗೆ ಅರಿವು ಹೊಂದುವುದರ ಜೊತೆಗೆ ರಾಜಕೀಯದಲ್ಲಿ ಭಾಗವಹಿಸುತ್ತಿರುವುದು ತಿಳಿದುಬಂದಿದೆ. ಈ ಅಂಶದಿಂದ ತಿಳಿದುಬರುವ ಸಂಗತಿಯೆಂದರೆ ಚುನಾಯಿತಗೊಂಡಿರುವವರ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆಯಲ್ಲಿ ಹಿಂದುಳಿದ ಕೂಡ್ಲಿಗಿ ಗ್ರಾಮ ಪಂಚಾಯಿತಿಯ ಕುಟುಂಬಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿ ಇರುವುದು ತಿಳಿದುಬರುತ್ತದೆ. ಅಂದರೆ, ಹೆಚ್ಚಿನ ಜನರು ಹಿಂದುಳಿದ ಗ್ರಾಮ ಪಂಚಾಯಿತಿಯಲ್ಲಿ ಕೃಷಿ ಅವಲಂಬನೆ, ಕೂಲಿ ಕಾರ್ಮಿಕರು, ಅಕ್ಷರದಿಂದ ವಂಚಿತರಾದವರು ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಅವರಿಗೆ ಮತದಾನದ ಸಮಯ ಬಂದಾಗ ಹೋಗಿ ಮತವನ್ನು

ಚಲಾಯಿಸಿ ಬರುತ್ತೇವೆ. ಮತ್ತೆ ಯಾವ ಸಮಯದಲ್ಲಿ ನಮಗೆ ಪ್ರತಿನಿಧಿಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಇದರಿಂದ ಈ ಸ್ಥಳೀಯ ಸಂಸ್ಥೆಯ ಜನರು ನಗರದಲ್ಲಿ ಇಂತಹ ವರ್ಗದ ಜನ ತೀವ್ರ ತಾರತಮ್ಯ ಎದುರಿಸುತ್ತಿರುವುದು ತಿಳಿದುಬಂದಿದೆ. ಹಾಗಾಗಿ, ಇಂತಹ ಸವಾಲುಗಳಿಂದ ವಾರ್ಡುಗಳ ಅಭಿವೃದ್ಧಿಯಾಗದೆ ಹಿಂದುಳಿದಿದೆ ಎಂದು ತಿಳಿಯಬೇಕಾಗಿದೆ. ಆದ್ದರಿಂದ ಹಿಂದುಳಿದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು ವಾರ್ಡಿನ ಜನರಿಗೆ ಹೆಚ್ಚಿನ ರೀತಿಯಲ್ಲಿ ಸ್ಥಳೀಯ ರಾಜಕೀಯದ ಬಗ್ಗೆ ಅರಿವು ಮೂಡುಸುವುದರ ಜೊತೆಗೆ ಅಭಿವೃದ್ಧಿಯಲ್ಲಿ ಭಾಗವಹಿಸುವಂತಹ ತರಬೇತಿಯನ್ನು ನೀಡುವಂತಹ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ-೭: ನಿಮಗೆ ರಾಜಕೀಯ ನಾಯಕನ ಸಂಪರ್ಕದ ವಿವರ:-**

| ನಿಮಗೆ ರಾಜಕೀಯ ನಾಯಕನ ಸಂಪರ್ಕ ಇದೆಯಾ? | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| | ಇದೆ | ೨೧ | ೪೨ | ೨೩ | ೪೬ | ೪೧ | ೮೨ | ೪೨ | ೮೪ |
| | ಇಲ್ಲ | ೨೯ | ೫೮ | ೨೭ | ೫೪ | ೯ | ೧೮ | ೮ | ೧೬ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಕೋಷ್ಟಕದಲ್ಲಿ ಹೇಳಿದಂತೆ ಗ್ರಾಮದ ಜನತೆ ರಾಜಕೀಯ ಸಂಪರ್ಕ ಹೊಂದಿರುವುದರ ವಿವರವನ್ನು ತೋರಿಸಲಾಗಿದೆ.ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೪೨.೦೦ರಷ್ಟು ಕುಟುಂಬಗಳು ಸ್ಥಳೀಯ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿರುವುದು ತಿಳಿಸಿರುತ್ತಾರೆ. ಹಾಗೆಯೇ, ಶೇ. ೫೮.೦೦ರಷ್ಟು ಕುಟುಂಬಗಳು ನಮಗೆ ಯಾವ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿಲ್ಲ ಎಂದು ಹೇಳಿಕೊಂಡಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೪೬.೦೦ರಷ್ಟು ಕುಟುಂಬಗಳು ಸ್ಥಳೀಯ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿರುವುದು ತಿಳಿಸಿರುತ್ತಾರೆ. ಹಾಗೆಯೇ, ಶೇ. ೫೪.೦೦ರಷ್ಟು ಕುಟುಂಬಗಳು ನಮಗೆ ಯಾವ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಯಾದ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೮೨.೦೦ರಷ್ಟು ಕುಟುಂಬಗಳು ಸ್ಥಳೀಯ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿರುವುದು ತಿಳಿಸಿರುತ್ತಾರೆ. ಹಾಗೆಯೇ, ಶೇ. ೧೮.೦೦ರಷ್ಟು ಕುಟುಂಬಗಳು ನಮಗೆ ಯಾವ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿಲ್ಲ ಎಂದು ಹೇಳಿಕೊಂಡಿದ್ದಾರೆ.ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೮೪.೦೦ರಷ್ಟು

ಕುಟುಂಬಗಳು ಸ್ಥಳೀಯ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿರುವುದು ತಿಳಿಸಿರುತ್ತಾರೆ. ಹಾಗೆಯೇ, ಶೇ. ೧೬.೦೦ರಷ್ಟು ಕುಟುಂಬಗಳು ನಮಗೆ ಯಾವ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿನ ಕುಟುಂಬಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿನ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿ ಸ್ಥಳೀಯ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿದವರಾಗಿದ್ದಾರೆ. ಕೂಡ್ಲಿಗಿಯಲ್ಲಿ ಹಿಂದುಳಿಯಲು ಕಾರಣವೆಂದರೆ ಶಿಕ್ಷಣದಿಂದ ವಂಚಿತರಾಗಿದ್ದುಕೊಂಡು ಕೃಷಿಯ ಮೇಲೆ ಅವಲಂಬನೆಯಾಗಿದ್ದು ಅವರಿಗೆ ತಮ್ಮ ಜೀವನವನ್ನು ನಿರ್ವಹಣೆ ನಡಸಲಿಕ್ಕೆ ಕೂಲಿಯಾಳುಗಳಾಗಿ ಮತ್ತೊಬ್ಬರ ಮೇಲೆ ಅವಲಂಬನೆಯಾಗಿ ದುಡಿಯುವಲ್ಲೇ ಹೆಚ್ಚಿನ ಸಮಯ ವ್ಯಯಮಾಡುವುದರಿಂದ ನಾಯಕನ ಸಂಪರ್ಕ ಮಾಡುವುದು ಕನಸಿನ ಮಾತಾಗಿ ಸ್ಥಳೀಯ ರಾಜಕೀಯ ನಾಯಕನ ಮತ್ತು ಗ್ರಾಮ ಕುಟುಂಬಗಳ ನಡುವೆ ಹೆಚ್ಚಿನ ಪ್ರಮಾಣದಲ್ಲಿ ಸಂಪರ್ಕದ ಅಂತರವಿರುವುದರಿಂದ ಗ್ರಾಮವು ಹಿಂದುಳಿಯುವುದಕ್ಕೆ ಕಾರಣವೆಂದು ಹೇಳಬಹುದಾಗಿದೆ. ಸರ್ಕಾರವು ಸ್ಥಳೀಯ ಚುನಾಯಿತ ಪ್ರತಿನಿಧಿಗಳಿಗೆ ನಿಯಮಿತವಾಗಿ ಹಾಗಾಗ ವಾರ್ಡುಗಳಿಗೆ ಭೇಟಿ ನೀಡುತ್ತಾ ವಾರ್ಡಿನ ಜನರೊಂದಿಗೆ ಪಾಲ್ಗೊಂಡು ಅವರ ಸಮಸ್ಯೆಗಳನ್ನು ಅರಿವುವ ಮೂಲಕ ಹಿಂದುಳಿದ ಗ್ರಾಮ ಪಂಚಾಯಿತಿಗಳನ್ನುಅಭಿವೃದ್ಧಿಗೊಳಿಸುವಂತಹ ಇಚ್ಛಾಶಕ್ತಿಯನ್ನು ಹೊಂದಿ ಆದಷ್ಟು ಸ್ಥಳೀಯ ಅಭಿವೃದ್ಧಿಗೆ ಪೂರಕವಾದ ಉತ್ತಮ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದರ ಮೂಲಕ ಸ್ಥಳೀಯ ಸಂಸ್ಥೆಯಲ್ಲಿ ಭಾಗವಹಿಸುವ ಅನಿವಾರ್ಯತೆಯಿದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ-೮:ನಿಮ್ಮ ರಾಜಕೀಯ ಪ್ರತಿನಿಧಿ ವಾರ್ಡ್‌ಗೆ ಭೇಟಿ ನೀಡುವುದರ ಹಿನ್ನೆಲೆ**

| ನಿಮ್ಮ ರಾಜಕೀಯ ಪ್ರತಿನಿಧಿ ವಾರ್ಡಗೆ ಭೇಟಿ ನೀಡುತ್ತಾರೆಯೇ? | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚೆಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| | ನೀಡುತ್ತಾನೆ | ೧೩ | ೨೬ | ೧೯ | ೩೮ | ೪೧ | ೮೨ | ೪೨ | ೮೪ |
| | ನೀಡುವುದಿಲ್ಲ | ೩೭ | ೭೪ | ೩೧ | ೬೨ | ೯ | ೧೮ | ೮ | ೧೬ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಕೋಷ್ಟಕದಲ್ಲಿ ನೀಡಿದಂತೆ ಚುನಾಯಿತ ಪ್ರತಿನಿಧಿಯು ವಾರ್ಡ್‌ಗೆ ಭೇಟಿ ನೀಡುವ ಕುರಿತ ವಿವರಗಳನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೨೬.೦೦ರಷ್ಟು ಕುಟುಂಬಗಳು ಪ್ರತಿನಿಧಿಯು ವಾರ್ಡ್‌ಗೆ ಭೇಟಿ ನೀಡುತ್ತಾರೆ ಎಂದು ತಿಳಿಸಿರುವರು. ಉಳಿದ ಶೇ. ೭೪ರಷ್ಟು ಕುಟುಂಬಗಳು ವಾರ್ಡ್‌ಗೆ ಪ್ರತಿನಿಧಿಗಳು ಭೇಟಿ ನೀಡುವುದಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಹಾಗೆಯೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೩೮.೦೦ರಷ್ಟು ಕುಟುಂಬಗಳು ಪ್ರತಿನಿಧಿಯು ವಾರ್ಡ್‌ಗೆ ಭೇಟಿ ನೀಡುತ್ತಾರೆ ಎಂದು ತಿಳಿಸಿರುವರು. ಉಳಿದ ಶೇ. ೬೨.೦೦ರಷ್ಟು ಕುಟುಂಬಗಳು ವಾರ್ಡ್‌ಗೆ ಪ್ರತಿನಿಧಿಗಳು ಭೇಟಿ ನೀಡುವುದಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಅದರಂತೆ ಶ್ರೀಧರಗಡ್ಡೆಗ್ರಾಮ ಪಂಚಾಯಿತಿಯಲ್ಲಿ ಶೇ. ೮೨.೦೦ರಷ್ಟು ಕುಟುಂಬಗಳು ಪ್ರತಿನಿಧಿಯು ವಾರ್ಡ್‌ಗೆ ಭೇಟಿ ನೀಡುತ್ತಾರೆ ಎಂದು ತಿಳಿಸಿರುವರು. ಉಳಿದ ಶೇ. ೧೮ರಷ್ಟು ಕುಟುಂಬಗಳು ವಾರ್ಡ್‌ಗೆ ಪ್ರತಿನಿಧಿಗಳು ಭೇಟಿ ನೀಡುವುದಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಕೊನೆಯದಾಗಿ ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೮೪.೦೦ರಷ್ಟು ಕುಟುಂಬಗಳು ಪ್ರತಿನಿಧಿಯು ವಾರ್ಡ್‌ಗೆ ಭೇಟಿ ನೀಡುತ್ತಾರೆ ಎಂದು ತಿಳಿಸಿರುವರು. ಉಳಿದ ಶೇ. ೧೬.೦೦ರಷ್ಟು ಕುಟುಂಬಗಳು ವಾರ್ಡ್‌ಗೆ ಪ್ರತಿನಿಧಿಗಳು ಭೇಟಿ ನೀಡುವುದಿಲ್ಲ ಎಂದು ಹೇಳಿಕೊಂಡಿರುತ್ತಾರೆ.

ಒಟ್ಟಾರೆಯಾಗಿ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳ ವಾರ್ಡಿನ ಅದರಲ್ಲಿಯೂ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿನ ಕುಟುಂಬಗಳಿರುವ ವಾರ್ಡಿಗೆ ಚುನಾಯಿತ ಪ್ರತಿನಿಧಿಗಳು ಹೆಚ್ಚಿನ ಪ್ರಮಾಣದಲ್ಲಿ ಭೇಟಿ ನೀಡುತ್ತಿರುವುದು ಕಂಡುಬಂದಿದೆ. ಆದರೆ ಇದರ ಪ್ರಮಾಣ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಕೆಳಮಟ್ಟದಲ್ಲಿರುವುದು ತಿಳಿದುಬರುತ್ತದೆ. ಇದರಿಂದ ತಿಳಿಯಬಹುದಾದ ಸಂಗತಿಯೆಂದರೆ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಸದಸ್ಯರಲ್ಲಿ ಹೆಚ್ಚಿನ ಸಾಕ್ಷರತೆಯನ್ನು ಪಡೆದಿದ್ದು, ವಾರ್ಡಿನ ಅಭಿವೃದ್ಧಿಯ ಬಗ್ಗೆ ಆಸಕ್ತಿಯನ್ನು ತೋರಿಸುತ್ತಾರೆ ಮತ್ತು ತಮ್ಮ ವಾರ್ಡಿನ ಜನರ ಬಗ್ಗೆ ಹೆಚ್ಚಿನ ಕಾಳಜಿ ವಹಿಸುತ್ತಿರುವುದು ಕಂಡು ಬಂದಿದೆ. ಆದರೆ ಕೂಡ್ಲಿಗಿ ತಾಲೂಕಿನ ಅದರಲ್ಲೂ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ಹೆಚ್ಚಿನ ಸಂಖ್ಯೆಯ ಚುನಾಯಿತ ಸದಸ್ಯರು ಸರಿಯಾದ ಆಡಳಿತ ಅನುಭವ ಹೊಂದದೆ ಮತ್ತು ಕೆಲವು ಸದಸ್ಯರು ಶ್ರೀಮಂತ ವರ್ಗದಿಂದ ಬಂದವರಾಗಿದ್ದು ವಾರ್ಡಿನ ಜನರ ಸಮಸ್ಯೆಗಳ ಬಗ್ಗೆ ಸಂಪೂರ್ಣ ಅರಿವು ಹೊಂದದೆ ವಾರ್ಡಿನ ಬೇಟಿಯಲ್ಲಿ ವಿಫಲಗೊಂಡಿದ್ದರಿಂದ ಗ್ರಾಮ ಪಂಚಾಯಿತಿಯು ಹಿಂದುಳಿಯುವುದಕ್ಕೆ ಕಾರಣವಾಗಿದೆ ಎನ್ನಬಹುದಾಗಿದೆ. ಆದ್ದರಿಂದ ಹಿಂದುಳಿದ ಅಪ್ಪಯ್ಯನಹಳ್ಳಿ

ಗ್ರಾಮ ಪಂಚಾಯಿತಿಯ ಚುನಾಯಿತ ಸದಸ್ಯರು ಆಡಳಿತದ ಬಗ್ಗೆ ಹೆಚ್ಚಿನ ರೀತಿಯಲ್ಲಿ ತರಬೇತಿಯನ್ನು ಪಡೆಯುವುದರ ಮೂಲಕ ವಾರ್ಡಿಗೆ ನಿಯಮಿತವಾದ ಭೇಟಿಯನ್ನು ನೀಡುವುದರ ಮೂಲಕ ಗ್ರಾಮವನ್ನು ಅಭಿವೃದ್ಧಿಗೊಳಿಸುವ ಅಗತ್ಯವಿದೆ ಎಂದು ತಿಳಿಯಬಹುದಾಗಿದೆ.

**ಕೋಷ್ಟಕ-೯: ಚುನಾಯಿತ ಪ್ರತಿನಿಧಿಗಳು ಗ್ರಾಮ ಪಂಚಾಯಿತಿಗೆ ಬೇಟಿ ನೀಡುವ ಸಮಯದ ವಿವರ:**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಹೌದಾದರೆ ಯಾವ ಸಮಯದಲ್ಲಿ ಭೇಟಿ ನೀಡುತ್ತಾರೆ. | ತಿಂಗಳು | - | - | - | - | ೨೫ | ೬೦.೯೭ | ೨೭ | ೬೪.೨೮ |
| | ಮುಖನೇ ನೋಡಿಲ್ಲಾ | ೯ | ೬೯.೨೩ | ೧೫ | ೭೮.೯೪ | ೩ | ೭.೩೧ | ೬ | ೧೪.೨೮ |
| | ಯಾವಾಗಲೊಮ್ಮೆ ಬೇಟಿ ನೀಡುತ್ತಾರೆ | ೪ | ೩೦ | ೪ | ೨೧.೦೫ | ೧೩ | ೩೧.೭ | ೯ | ೨೧.೪೨ |
| | ಒಟ್ಟು | ೧೩ | ೧೦೦ | ೧೯ | ೧೦೦ | ೪೧ | ೧೦೦ | ೪೨ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಚುನಾಯಿತ ಪ್ರತಿನಿಧಿಯು ಯಾವ ಸಮಯದಲ್ಲಿ ಭೇಟಿ ನೀಡುವುದರ ವಿವರವನ್ನು ತೋರಿಸಲಾಗಿದೆ.ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೬೯.೨೩ರಷ್ಟು ಕುಟುಂಬಗಳು ಚುನಾಯಿತ ಸದಸ್ಯರನ್ನು ನಾವು ಚುನಾವಣೆಯಾದ ನಂತರ ನೋಡಿರುವುದು ಮತ್ತೆ ಅವರ ಮುಖವನ್ನೇ ನೋಡಿಲ್ಲ ಎಂದು ಹೇಳಿದ್ದಾರೆ. ಶೇ. ೩೦.೦೦ರಷ್ಟು ಕುಂಟುಂಬಗಳು ಚುನಾಯಿತ ಸದಸ್ಯರು ವರ್ಷದಲ್ಲಿ ಆವಾಗವಾಘ ಬಂದು ಭೇಟಿ ನೀಡುತ್ತಾರೆ ಅಷ್ಟೇ ಎಂದು ಹೇಳಿಕೊಂಡಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೭೮.೯೪ರಷ್ಟು ಕುಟುಂಬಗಳು ಚುನಾಯಿತ ಸದಸ್ಯರನ್ನು ನಾವು ಚುನಾವಣೆಯಾದ ನಂತರ ನೋಡಿರುವುದು ಮತ್ತೆ ಅವರ ಮುಖವನ್ನೇ ನೋಡಿಲ್ಲ ಎಂದು ಹೇಳಿದ್ದಾರೆ. ಶೇ. ೨೧.೦೫ರಷ್ಟು ಕುಂಟುಂಬಗಳು ಚುನಾಯಿತ ಸದಸ್ಯರು ವರ್ಷದಲ್ಲಿ ಆಗಾಗ ಬಂದು ಭೇಟಿ ನೀಡುತ್ತಾರೆ ಅಷ್ಟೇ ಎಂದು ಹೇಳಿಕೊಂಡಿದ್ದಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೬೦.೯೭ರಷ್ಟು ಕುಟುಂಬಗಳು ನಮ್ಮ ವಾರ್ಡಿಗೆ ತಿಂಗಳಿಗೊಮ್ಮೆ ಭೇಟಿ ನೀಡುತ್ತಾರೆ ಎಂದಿದ್ದಾರೆ. ಶೇ. ೭.೩೧ರಷ್ಟು ಕುಟುಂಬಗಳು ಚುನಾಯಿತ ಸದಸ್ಯರನ್ನು ನಾವು ಚುನಾವಣೆಯಾದ ನಂತರ

ನೋಡಿರುವುದು ಮತ್ತೆ ಅವರ ಮುಖವನ್ನೇ ನೋಡಿಲ್ಲ ಎಂದು ಹೇಳಿದ್ದಾರೆ. ಶೇ. ೩೧.೭೦ರಷ್ಟು ಕುಂಟುಂಬಗಳು ಚುನಾಯಿತ ಸದಸ್ಯರು ವರ್ಷದಲ್ಲಿ ಆವಾಗವಾಗ ಬಂದು ಭೇಟಿ ನೀಡುತ್ತಾರೆ ಅಷ್ಟೇ ಎಂದು ಹೇಳಿಕೊಂಡಿದ್ದಾರೆ.ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೬೪.೨೮ರಷ್ಟು ಕುಟುಂಬಗಳು ನಮ್ಮ ವಾರ್ಡಿಗೆ ತಿಂಗಳಿಗೊಮ್ಮೆ ಭೇಟಿ ನೀಡುತ್ತಾರೆ ಎಂದಿದ್ದಾರೆ. ಶೇ. ೧೪.೨೮ರಷ್ಟು ಕುಟುಂಬಗಳು ಚುನಾಯಿತ ಸದಸ್ಯರನ್ನು ನಾವು ಚುನಾವಣೆಯಾದ ನಂತರ ನೋಡಿರುವುದು ಮತ್ತೆ ಅವರ ಮುಖವನ್ನೇ ನೋಡಿಲ್ಲ ಎಂದು ಹೇಳಿದ್ದಾರೆ. ಶೇ. ೨೧.೪೨ರಷ್ಟು ಕುಟುಂಬಗಳು ಚುನಾಯಿತ ಸದಸ್ಯರು ವಾರ್ಡಿಗೆ ಅಪರೂಪಕ್ಕೊಮ್ಮೆ ಬಂದು ಭೇಟಿ ಕೊಡುತ್ತಾರೆ ಎಂದು ತಿಳಿದುಬಂದಿದೆ.

ಒಟ್ಟಾರೆಯಾಗಿ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಕುಟುಂಬಗಳ ಸದಸ್ಯರಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳಿಗೆ ವಾರ್ಡಿನ ಸದಸ್ಯರು ತಿಂಗಳಿಗೊಮ್ಮೆ ಭೇಟಿ ನೀಡುವುದರಲ್ಲಿ ಹೆಚ್ಚಿನ ಪ್ರಮಾಣದಲ್ಲಿದ್ದು ಹಾಗೂ ಎರಡು ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರು ವಾರ್ಡಿಗೆ ಬೇಡಿ ನೀಡದೇ ಇರುವುದರಲ್ಲಿಯೂ ಸಹ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ಹೆಚ್ಚಿನ ಪ್ರಮಾಣದಲ್ಲಿ ಇದೆಎಂದು ತಿಳಿಯಲಾಗಿದೆ. ಇಲ್ಲಿ ಗಮನಿಸುವ ಸಂಗತಿಯೆಂದರೆ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಯ ಕುಟುಂಬಗಳು ರಾಜಕೀಯ ನಾಯಕನ ಸಂಪರ್ಕ ಉತ್ತಮ ಸ್ಥಿತಿಯಲ್ಲಿದ್ದು, ಆದರೆ ಕೂಡ್ಲಿಗಿ ತಾಲೂಕಿನ ಗ್ರಾಮ ಪಮಚಾಯಿತಿಯ ಕುಟುಂಬಗಳು ರಾಜಕೀಯ ನಾಯಕನ ಸಂಪರ್ಕ ಕೆಳಮಟ್ಟದ್ದಾಗಿದೆ ಅದರಲ್ಲಿಯೂ ಅಪ್ಪಯ್ಯನಹಳ್ಳಿ ಗ್ರಾಮ ಪಮಚಾಯಿತಿಯದ್ದು ತೀರಾ ಕೆಳಮಟ್ಟದಲ್ಲಿದೆ. ಆದರೆ ಇವೆರಡೂ ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತ ಸದಸ್ಯರ ಭೇಟಿಯು ಭಿನ್ನವಾಗಿದ್ದು ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಭೇಟಿ ನೀಡುವುದನ್ನು ಹೆಚ್ಚಾಗಿ ಪರಿಗಣಿಸದ ಸಂಸ್ಥೆಗಳಿಂದಲೇ ಹೆಚ್ಚಿನ ಕೆಲಸ ಕಾರ್ಯಗಳನ್ನು ಮಾಡಿಸಿಕೊಳ್ಳುವುದರೊಂದಿಗೆ ಮುಂದುವರಿದ ಗ್ರಾಮ ಪಂಚಾಯಿತಿಗಳಿಂದ ಅಭಿವೃದ್ಧಿಯನ್ನು ಮಾಡುವುದರ ಮೂಲಕ ಮುಂದುವರಿದಿದೆ ಎಂದು ಹೇಳಬಹುದಾಗಿದೆ. ಆದರೆ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಅಭಿವೃದ್ಧಿಯ ಒಂದು ಸಾಧನವಾದ ವಾರ್ಡಿಗೆ ಚುನಾಯಿತ ಸದಸ್ಯರು ನಿಯಮಿತವಾಗಿ ಭೇಟಿ ಮಾಡದೆ ಮತ್ತು ರಾಜಕೀಯ ನಾಯಕನೊಂದಿಗೆ ಉತ್ತಮ ಸಂಪರ್ಕ ಕೊರತೆಯನ್ನು ಅನುಭವಿಸುತ್ತಾ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವಲ್ಲಿ ವಿಫಲವಾಗಿರುವುದು ಹಿಂದುಳಿಯಲಿಕ್ಕೆ ಕಾರಣ ಎಂದು ಹೇಳಬಹುದಾಗಿದೆ. ಹಾಗಾಗಿ, ಹಿಂದುಳಿದ ಗ್ರಾಮ ಪಂಚಾಯಿತಿ ಸದಸ್ಯರು ನಿಯಮಿತವಾಗಿ ವಾರ್ಡಿಗೆ ಭೇಟಿ ನೀಡುವ ಮೂಲಕ ವಾರ್ಡಿನ ಅಭಿವೃದ್ಧಿಯನ್ನು ಮಾಡುವ ರಾಜಕೀಯ ಇಚ್ಛಾಶಕ್ತಿಯನ್ನು ರೂಢಿಸಿಕೊಳ್ಳುವ ಅಗತ್ಯವಿದೆ ಎಂಬ ಅಂಶವನ್ನು ಹೇಳಬಹುದಾಗಿದೆ.

**ಕೋಷ್ಟಕ–೧೦: ಗ್ರಾಮ ಪಂಚಾಯ್ತಿಗಳಲ್ಲಿ ವಾಸವಾಗಿರುವವರ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂ | ಶೇ. | ಸಂ | ಶೇ. | ಸಂ | ಶೇ. | ಸಂ | ಶೇ. |
| ಎಷ್ಟು ವರ್ಷಗಳಿಂದ ಈ ಗ್ರಾಮ ಪಂಚಾಯಿತಿಯಲ್ಲಿ ವಾಸವಾಗಿದ್ದೀರಾ? | ೫ ವರ್ಷ | ೨ | ೪ | ೩ | ೬ | ೨ | ೪ | ೪ | ೮ |
| | ೧೦ವರ್ಷ | ೪ | ೮ | ೩ | ೬ | ೪ | ೮ | ೩ | ೬ |
| | ೨೦ ವರ್ಷ | ೧೨ | ೨೪ | ೧೧ | ೨೨ | ೮ | ೧೬ | ೫ | ೧೦ |
| | ಹುಟ್ಟಿನಿಂದ | ೩೨ | ೬೪ | ೩೩ | ೬೬ | ೩೬ | ೭೨ | ೩೮ | ೭೬ |
| ಒಟ್ಟು | | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬–೧೭

ಮೇಲೆ ಹೇಳಲಾದ ತಾಲೂಕಿನ ಗ್ರಾಮ ಪಂಚಾಯಿತಿವಾರು ಕ್ಷೇತ್ರಧ್ಯಾಯನದಲ್ಲಿ ಸಂದರ್ಶನಗೊಂಡ ಸಾಮಾನ್ಯ ಜನರು ಗ್ರಾಮದಲ್ಲಿ ವಾಸವಾಗಿರುವುದರ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೪.೦೦ರಷ್ಟು ಕುಟುಂಬಗಳು ೫ ವರ್ಷದಿಂದ ಈ ಗ್ರಾಮ ಪಂಚಾಯಿತಿಯಲ್ಲಿ ವಾಸವಾಗಿದ್ದೇನೆ ಎಂದಿರುವರು. ಅದೇ ಪ್ರಕಾರ ಶೇ. ೮.೦೦ರಷ್ಟು ಕುಟುಂಬಗಳು ೧೦ ವರ್ಷಗಳಿಂದ ಇಲ್ಲಿಯೇ ವಾಸವಾಗಿದ್ದೇವೆ ಎಂದಿರುವರು. ಇತರೆ ಶೇ. ೨೪.೦೦ರಷ್ಟು ಕುಟುಂಬಗಳು ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ೨೦ ವರ್ಷದಿಂದ ಜೀವನ ಮಾಡುತ್ತಿರುವುದು ತಿಳಿದು ಬಂದಿರುತ್ತದೆ. ಉಳಿದ ಶೇ. ೬೪.೦೦ರಷ್ಟು ಕುಟುಂಬಗಳು ಹುಟ್ಟಿನಿಂದ ಈ ಗ್ರಾಮದಲ್ಲಿಯೇ ವಾಸವಾಗಿರುವುದು ಎಂದು ಹೇಳಿಕೊಂಡಿರುತ್ತಾರೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೬.೦೦ರಷ್ಟು ಕುಟುಂಬಗಳು ೫ ವರ್ಷದಿಂದ ಈ ಗ್ರಾಮ ಪಂಚಾಯಿತಿಯಲ್ಲಿ ವಾಸವಾಗಿದ್ದೇನೆ ಎಂದಿರುವರು. ಅದೇ ಪ್ರಕಾರ ಶೇ. ೬.೦೦ರಷ್ಟು ಕುಟುಂಬಗಳು ೧೦ ವರ್ಷಗಳಿಂದ ಇಲ್ಲಿಯೇ ವಾಸವಾಗಿದ್ದೇವೆ ಎಂದಿರುವರು. ಇತರೆ ಶೇ. ೨೨.೦೦ರಷ್ಟು ಕುಟುಂಬಗಳು ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ೨೦ ವರ್ಷದಿಂದ ಜೀವನ ಮಾಡುತ್ತಿರುವುದು ತಿಳಿದು ಬಂದಿರುತ್ತದೆ. ಉಳಿದ ಶೇ. ೬೬.೦೦ರಷ್ಟು ಕುಟುಂಬಗಳು ಹುಟ್ಟಿನಿಂದ ಈ ಗ್ರಾಮದಲ್ಲಿಯೇ ವಾಸವಾಗಿರುವುದು ಎಂದು ಹೇಳಿಕೊಂಡಿರುತ್ತಾರೆ. ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೪.೦೦ರಷ್ಟು ಕುಟುಂಬಗಳು ೫ ವರ್ಷದಿಂದ ಈ ಗ್ರಾಮ ಪಂಚಾಯಿತಿಯಲ್ಲಿ ವಾಸವಾಗಿದ್ದೇನೆ ಎಂದಿರುವರು. ಅದೇ ಪ್ರಕಾರ ಶೇ. ೮.೦೦ರಷ್ಟು ಕುಟುಂಬಗಳು ೧೦ ವರ್ಷಗಳಿಂದ ಇಲ್ಲಿಯೇ ವಾಸವಾಗಿದ್ದೇವೆ ಎಂದಿರುವರು. ಇತರೆ ಶೇ. ೧೬.೦೦ರಷ್ಟು ಕುಟುಂಬಗಳು ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ೨೦ ವರ್ಷದಿಂದ ಜೀವನ ಮಾಡುತ್ತಿರುವುದು ತಿಳಿದು ಬಂದಿರುತ್ತದೆ. ಉಳಿದ ಶೇ. ೭೨.೦೦ರಷ್ಟು ಕುಟುಂಬಗಳು ಹುಟ್ಟಿನಿಂದ ಈ ಗ್ರಾಮದಲ್ಲಿಯೇ ವಾಸವಾಗಿರುವುದು

ಎಂದು ಹೇಳಿಕೊಂಡಿರುತ್ತಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೮.೦೦ರಷ್ಟು ಕುಟುಂಬಗಳು ೫ ವರ್ಷದಿಂದ ಈ ಗ್ರಾಮ ಪಂಚಾಯಿತಿಯಲ್ಲಿ ವಾಸವಾಗಿದ್ದೇವೆ ಎಂದಿರುವರು. ಅದೇ ಪ್ರಕಾರ ಶೇ. ೬.೦೦ರಷ್ಟು ಕುಟುಂಬಗಳು ೧೦ ವರ್ಷಗಳಿಂದ ಇಲ್ಲಿಯೇ ವಾಸವಾಗಿದ್ದೇವೆ ಎಂದಿರುವರು. ಇತರೆ ಶೇ. ೧೦.೦೦ರಷ್ಟು ಕುಟುಂಬಗಳು ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ೨೦ ವರ್ಷದಿಂದ ಜೀವನ ಮಾಡುತ್ತಿರುವುದು ತಿಳಿದು ಬಂದಿರುತ್ತದೆ. ಉಳಿದ ಶೇ. ೭೬.೦೦ರಷ್ಟು ಕುಟುಂಬಗಳು ತಮ್ಮ ಜೀವನವನ್ನು ಹುಟ್ಟಿನಿಂದಲೂ ಇಲ್ಲೇ ಇರುವುದಾಗಿ ತಿಳಿಸಿರುತ್ತಾರೆ.

ಒಟ್ಟಾರೆ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳಲ್ಲಿ ಹುಟ್ಟಿನಿಂದ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ವಾಸವಾಗಿರುವವರ ಸಂಖ್ಯೆಯು ಹೆಚ್ಚು ಪ್ರಮಾಣದಲ್ಲಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಆದರೆ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ಹೆಚ್ಚು ವರ್ಷಗಳ ಕಾಲ ಗ್ರಾಮದಲ್ಲಿ ವಾಸವಾಗದೆ ಇರುವುದರಿಂದ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿದ್ದರೂ ಪಂಚಾಯಿತಿ ಚುನಾಯಿತ ಸದಸ್ಯರೊಂದಿಗೆ ಉತ್ತಮ ಸಂಬಂಧದ ನಿರ್ಮಾಣದಲ್ಲಿಯೂ ವಿಫಲತೆಯನ್ನು ಇರುವುದು ಅಧ್ಯಯನದಿಂದ ತಿಳಿಯಲಾಗಿದೆ. ಮುಂದುವರಿದು, ಸಮರ್ಥವಾಗಿ ಯೋಜನೆಗಳ ಅನುಷ್ಠಾನವಾಗದಿರುವುದು, ಗ್ರಾಮದ ಜನತೆಯಲ್ಲಿ ಗ್ರಾಮ ಸರ್ಕಾರದ ಬಗ್ಗೆ ಇರುವ ಅರಿವಿನ ಕೊರತೆ, ಜನರು ಆಡಳಿತದಲ್ಲಿ ಭಾಗವಹಿಸದೆ ಇರುವುದು, ಅಭಿವೃದ್ಧಿ ಯೋಜನೆಗಳ ಅನುಷ್ಠಾನದಲ್ಲಿ ಹಿಂದುಳಿದಿರುವುದರಿಂದಾಗಿ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ಇದಕ್ಕೆ ಹೊರತಾಗಿಲ್ಲ ಎಂದು ತಿಳಿಯಲಾಗಿದೆ. ಅಂತೆಯೇ, ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಮೇಲಿನ ಅಂಶಗಳನ್ನು ಸಮರ್ಥವಾಗಿ ನಿಗದಿತ ಅವಧಿಯಲ್ಲಿ ಬಳಸಿಕೊಂಡು ಹಾಗೂ ಗ್ರಾಮ ಪಂಚಾಯಿತಿಯ ಬಗ್ಗೆ ಅರಿವು ಗಳಿಸುವುದರ ಜೊತೆಗೆ ಹೆಚ್ಚು-ಹೆಚ್ಚಾಗಿ ಭಾಗವಹಿಸಿರುವುದು ಗಮನಾರ್ಹ ಅಂಶವಾಗಿದೆ. ಒಟ್ಟಾರೆಯಾಗಿ ಮೇಲಿನ ಕಾರಣಗಳನ್ನು ನೋಡಿದಾಗ ಹಿಂದುಳಿದ ಅಪ್ಪಯ್ಯಾನಹಳ್ಳಿ ಗ್ರಾಮ ಪಂಚಾಯಿತಿಯು ಯೋಜನೆಗಳ ಕುರಿತಾಗಿ ಸರ್ಕಾರದ ನೀತಿ ನಿಯಮಾವಳಿ, ಇಲಾಖೆಯ ಮಾರ್ಗದರ್ಶನದಲ್ಲಿ ಕ್ರಿಯಾಯೋಜನೆಯನ್ನು ಸಿದ್ಧಪಡಿಸಿ ಸಮರ್ಪಕವಾಗಿ ಜಾರಿಗೊಳಿಸುವ ಮೂಲಕ ಹಿಂದುಳಿದ ಪಂಚಾಯಿತಿಯನ್ನು ಅಭಿವೃದ್ಧಿಯ ಗ್ರಾಮವನ್ನಾಗಿ ಮಾಡಲು ಸಾಧ್ಯ ಎಂದು ಹೇಳಬಹುದಾಗಿದೆ. ಆದ್ದರಿಂದ, ಅಭಿವೃದ್ಧಿ ಹೊಂದಿದ ಗ್ರಾಮ ಪಂಚಾಯ್ತಿತಿಗಳು ರೂಪಿಸಿದ ಒಂದು ಪ್ರಮುಖ ಯೋಜನೆಯನ್ನು ಹಿಂದುಳಿದ ಗ್ರಾಮಗಳ ಅಭಿವೃದ್ಧಿಗೆ ಮಾದರಿ ಆಗಬೇಕಾದ ಅಗತ್ಯವಿದೆ ಎಂದು ಹೇಳಬಹುದಾಗಿದೆ.

ಕೋಷ್ಟಕ-೧೧: ಮತದಾರರ ವಿವರ:-

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ನಿಮ್ಮ ಮನೆಯಲ್ಲಿ ಇರುವ ಒಟ್ಟು ಮತದಾರರು ಎಷ್ಟು? | "೧-೩" | ೧೧ | ೨೨ | ೧೦ | ೨೦ | ೭ | ೧೪ | ೮ | ೧೬ |
| | "೪-೬" | ೩೧ | ೬೨ | ೩೨ | ೬೪ | ೩೦ | ೬೦ | ೩೧ | ೬೨ |
| | "೭-೧೦" | ೮ | ೧೬ | ೮ | ೧೬ | ೧೩ | ೨೬ | ೧೧ | ೨೨ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳ ಸಂದರ್ಶನಗೊಂಡ ಕಟುಂಬಗಳ ಮತದಾರರ ವಿವರಗಳನ್ನು ಈ ಕೆಳಗಿನಂತೆ ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ.೨೨.೦೦ರಷ್ಟು ಕುಟುಂಬಗಳು ೧ರಿಂದ ೩ರವರೆಗಿನ ಮತದಾರರು ಮನೆಯಲ್ಲಿ ಇರುವುದಾಗಿ ಹೇಳಿದ್ದಾರೆ. ಅದೇ ಪ್ರಕಾರ ಶೇ.೬೨.೦೦ರಷ್ಟು ಕುಟುಂಬಗಳು ೪ರಿಂದ ೬ರವರೆಗಿನ ಮತದಾರರು ಮನೆಯಲ್ಲಿರುವುದನ್ನು ಕಂಡುಕೊಳ್ಳಲಾಗಿದೆ. ಉಳಿದ ಶೇ.೧೬.೦೦ರಷ್ಟು ಕುಟುಂಬಗಳು ೭ರಿಂದ ೧೦ರವರೆಗಿನ ಮತದಾರರು ಮನೆಯಲ್ಲಿರುವುದಾಗಿದೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ.೨೦.೦೦ರಷ್ಟು ಕುಟುಂಬಗಳು ೧ರಿಂದ ೩ರವರೆಗಿನ ಮತದಾರರು ಮನೆಯಲ್ಲಿ ಇರುವುದಾಗಿ ಹೇಳಿದ್ದಾರೆ. ಅದೇ ಪ್ರಕಾರ ಶೇ. ೬೪.೦೦ರಷ್ಟು ಕುಟುಂಬಗಳು ೪ರಿಂದ ೬ರವರೆಗಿನ ಮತದಾರರು ಮನೆಯಲ್ಲಿರುವುದನ್ನು ಕಂಡುಕೊಳ್ಳಲಾಗಿದೆ. ಉಳಿದ ಶೇ.೧೬.೦೦ರಷ್ಟು ಕುಟುಂಬಗಳು ೭ರಿಂದ ೧೦ರವರೆಗಿನ ಮತದಾರರು ಮನೆಯಲ್ಲಿರುವುದಾಗಿದೆ ಎಂದು ಹೇಳಿಕೊಂಡಿದ್ದಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೪.೦೦ರಷ್ಟು ಕುಟುಂಬಗಳು ೧ರಿಂದ ೩ರವರೆಗಿನ ಮತದಾರರು ಮನೆಯಲ್ಲಿ ಇರುವುದಾಗಿ ಹೇಳಿದ್ದಾರೆ. ಅದೇ ಪ್ರಕಾರ ಶೇ. ೬೦.೦೦ರಷ್ಟು ಕುಟುಂಬಗಳು ೪ರಿಂದ ೬ರವರೆಗಿನ ಮತದಾರರು ಮನೆಯಲ್ಲಿರುವುದನ್ನು ಕಂಡುಕೊಳ್ಳಲಾಗಿದೆ. ಉಳಿದ ಶೇ. ೨೬.೦೦ರಷ್ಟು ಕುಟುಂಬಗಳು ೭ರಿಂದ ೧೦ರವರೆಗಿನ ಮತದಾರರು ಮನೆಯಲ್ಲಿರುವುದಾಗಿದೆ ಎಂದು ಹೇಳಿಕೊಂಡಿದ್ದಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೬.೦೦ರಷ್ಟು ಕುಟುಂಬಗಳು ೧ರಿಂದ ೩ರವರೆಗಿನ ಮತದಾರರು ಮನೆಯಲ್ಲಿ ಇರುವುದಾಗಿ ಹೇಳಿದ್ದಾರೆ. ಅದೇ ಪ್ರಕಾರ ಶೇ. ೬೨.೦೦ರಷ್ಟು ಕುಟುಂಬಗಳು ೪ರಿಂದ ೬ರವರೆಗಿನ ಮತದಾರರು

ಮನೆಯಲ್ಲಿರುವುದನ್ನು ಕಂಡುಕೊಳ್ಳಲಾಗಿದೆ. ಉಳಿದ ಶೇ. ೨೨.೦೦ರಷ್ಟು ಕುಟುಂಬಗಳು ೭ರಿಂದ ೧೦ರವರೆಗಿನ ಮತದಾರರು ಮನೆಯಲ್ಲಿರುವುದಾಗಿದೆ ಎಂದು ಹೇಳಿಕೊಂಡಿದ್ದಾರೆ.

ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳನ್ನು ನೋಡಿದಾಗ ಹಿಂದುಳಿದ ಕೂಡ್ಲಿಗಿ ತಾಲೂಕಿ ಗ್ರಾಮ ಪಂಚಾಯಿತಿಯಲ್ಲಿನ ಕುಟುಂಬಗಳು ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಒಂದು ಕುಟುಂಬದಲ್ಲಿ ಕಡಿಮೆ ಸಂಖ್ಯೆಯ ಮತದಾರರು ವಾಸವಾಗಿರುವುದು ತಿಳಿದುಬರುತ್ತದೆ. ಇಲ್ಲಿ ಗಮನಿಸುವ ಸಂಗತಿಯೆಂದರೆ ಹಿಂದುಳಿದ ಗ್ರಾಮ ಪಂಚಾಯಿತಿಯಲ್ಲಿ ಕುಟುಂಬದ ಪ್ರಮಾಣ ಚಿಕ್ಕದಿದ್ದರೂ ಉತ್ತಮ ಜೀವನ ನಿರ್ವಹಣೆಯಲ್ಲಿ ವಿಫಲವಾಗಿದ್ದುದರಿಂದ ಅವರಲ್ಲಿ ಇರುವ ಜೀವನ ನಿರ್ವಹಣೆಯ ಕೊರತೆ, ಅನಕ್ಷರತೆ, ಮತ್ತು ವರಮಾನದ ಇಳಿಕೆಯಲ್ಲಿ ಕುಟುಂಬವನ್ನು ನಿರ್ವಹಿಸದೆ ಇರುವುದು ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಲ್ಲಿ ಮೇಲಿನ ಅಂಶಗಳಿಂದ ಉತ್ತೇಜನಗೊಳ್ಳವುದರ ಮೂಲಕ ಅಭಿವೃದ್ಧಿ ಹೊಂದಲು ಸಹಾಯಕವಾಗಿದೆ ಎನ್ನಬಹುದಾಗಿದೆ. ಹಾಗಾಗಿ, ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯು ಮುಂದುವರಿಯಲು ಮೇಲಿನ ಎಲ್ಲಾ ಅಂಶಗಳನ್ನು ಸರಿಯಾದ ರೀತಿಯಲ್ಲಿ ಅಳವಡಿಸಿಕೊಳ್ಳುವ ಅವಶ್ಯಕತೆ ಇದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ–೧೨: ಭೂಮಿಯ ವಿವರ:**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಭೂಮಿ ಹೊಂದಿರುವುದರ ವಿವರ: | ೦—೧ | ೩೦ | ೬೦ | ೧೭ | ೩೪ | ೧೬ | ೩೨ | ೧೩ | ೨೬ |
| | ೨—೪ | ೧೨ | ೨೪ | ೨೩ | ೪೬ | ೨೩ | ೪೬ | ೨೬ | ೫೨ |
| | ೫—೧೦ | ೮ | ೧೬ | ೧೦ | ೨೦ | ೧೧ | ೨೨ | ೧೧ | ೨೨ |
| ಒಟ್ಟು | | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬–೧೭

ಮೇಲಿನ ಅಂಕಿ-ಅಂಶಗಳನ್ನು ನೋಡಿದಾಗ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳ ಸಂದರ್ಶನಕ್ಕೆ ಬಂದ ಜನರ ಭೂಮಿಯ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ.೬೦.೦೦ರಷ್ಟು ಕುಟುಂಬಗಳು ೦-೧ ಎಕರೆ ಭೂಮಿಯನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೨೪.೦೦ರಷ್ಟು ಕುಟುಂಬಗಳು ೨ರಿಂದ ೪ ಎಕರೆ ಭೂಮಿಯನ್ನು ಹೊಂದಿದ್ದಾರೆ. ಇತರೆ ಶೇ. ೧೬.೦೦ರಷ್ಟು ಕುಟುಂಬಗಳು ೫ರಿಂದ ೧೦ ಎಕರೆ ಭೂಮಿಯನ್ನು ಹೊಂದಿರುವುದು ತಿಳಿದುಬಂದಿತು. ಅಲ್ಲದೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ૩૪.೦೦ರಷ್ಟು ಕುಟುಂಬಗಳು ೦-೧ ಎಕರೆ ಭೂಮಿಯನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೪೬.೦೦ರಷ್ಟು ಕುಟುಂಬಗಳು ೨ರಿಂದ ೪ ಎಕರೆ ಭೂಮಿಯನ್ನು ಹೊಂದಿದ್ದಾರೆ. ಇತರೆ ಶೇ. ೨೦.೦೦ರಷ್ಟು ಕುಟುಂಬಗಳು ೫ರಿಂದ ೧೦ ಎಕರೆ ಭೂಮಿಯನ್ನು ಹೊಂದಿರುವುದು ತಿಳಿದುಬಂದಿತು. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೩೨.೦೦ರಷ್ಟು ಕುಟುಂಬಗಳು ೦-೧ ಎಕರೆ ಭೂಮಿಯನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೪೬.೦೦ರಷ್ಟು ಕುಟುಂಬಗಳು ೨ರಿಂದ ೪ ಎಕರೆ ಭೂಮಿಯನ್ನು ಹೊಂದಿದ್ದಾರೆ. ಇತರೆ ಶೇ. ೨೨.೦೦ರಷ್ಟು ಕುಟುಂಬಗಳು ೫ರಿಂದ ೧೦ ಎಕರೆ ಭೂಮಿಯನ್ನು ಹೊಂದಿರುವುದು ತಿಳಿದುಬಂದಿತು. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೨೬.೦೦ರಷ್ಟು ಕುಟುಂಬಗಳು ೦-೧ ಎಕರೆ ಭೂಮಿಯನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೫೨.೦೦ರಷ್ಟು ಕುಟುಂಬಗಳು ೨ರಿಂದ ೪ ಎಕರೆ ಭೂಮಿಯನ್ನು ಹೊಂದಿದ್ದಾರೆ. ಇತರೆ ಶೇ. ೨೨.೦೦ರಷ್ಟು ಕುಟುಂಬಗಳು ೫ರಿಂದ ೧೦ ಎಕರೆ ಭೂಮಿಯನ್ನು ಹೊಂದಿರುವುದು ತಿಳಿದುಬಂದಿತು.

ಒಟ್ಟಾರೆ ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳನ್ನು ನೋಡಿದಾಗ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿ ಭೂಮಿಯನ್ನು ಹೊಂದಿರುವುದು ತಿಳಿದುಬರುತ್ತದೆ. ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಕೃಷಿ ಅವಲಂಬನೆ ಸಾಪೇಕ್ಷವಾಗಿ ಅಧಿಕವಾಗಿದೆ. ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಕೃಷಿ ಅವಲಂಬಿತರಲ್ಲಿ ಭೂರಹಿತ ಕೂಲಿಕಾರರ ಪ್ರಮಾಣ ಅಧಿಕವಾಗಿದೆ. ಬಳ್ಳಾರಿ ತಾಲೂಕಿನಲ್ಲಿ ಶೇ. ೬.೬೭ರಷ್ಟಿದ್ದರೆ ಕೂಡ್ಲಿಗಿ ತಾಲೂಕಿನಲ್ಲಿ ಅದರ ಪ್ರಮಾಣ ಶೇ. ೪೮.೭೫ರಷ್ಟಿದೆ. ಈ ಹೆಚ್ಚಿನ ಪ್ರಮಾಣವನ್ನು ಬಡತನಕ್ಕೆ ಕಾರಣವೆಂದು ತಿಳಿದುಕೊಳ್ಳಬಹುದು. ಈ ರೀತಿಯಾಗಿ ಭೂರಹಿತ ಕೂಲಿಕಾರರು ತಮ್ಮ ಹಸಿವನ್ನು ನೀಗಿಸಿಕೊಳ್ಳಲು ಕೂಲಿ ಮಾಡುತ್ತಿದ್ದಾರೆ. ಸಾಮಾನ್ಯವಾಗಿ ಭೂರಹಿತ ಕೂಲಿಕಾರರಲ್ಲಿ ಮಹಿಳೆಯರ ಪಾತ್ರ ಹೆಚ್ಚಿರುವುದು ಅಧ್ಯಯನದಲ್ಲಿ

ತಿಳಿದುಬಂದಿದೆ. ಇದು ಬಡತನದ ತೀವ್ರತೆಯನ್ನು ಸೂಚಿಸುತ್ತದೆ. ಇದರಿಂದ ಕೂಡ್ಲಿಗಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಹಿಂದುಳಿಯಲು ಕಾರಣವಾಗಿದೆ ಎನ್ನಬಹುದು. ಇದರಿಂದ ತಿಳಿದುಬರುವ ಸಂಗತಿಯೆಂದರೆ ಮುಂದುವರಿದ ಬಳ್ಳಾರಿ ತಾಲೂಕಿನಲ್ಲಿ ನೀರಾವರಿ ಪ್ರದೇಶವನ್ನು ಹೊಂದಿದ್ದು ಸ್ವಂತಃ ಕೃಷಿಯಲ್ಲಿ ನಿರತರಾಗಿ ವರಮಾನದಿಂದ ಜನರ ಬದುಕು ಸಮೃದ್ಧವಾಗುತ್ತಿರುವುದು ತೀವ್ರಗತಿಯಲ್ಲಿದ್ದರೆ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಅದರಲ್ಲೂ ಅಪ್ಪಯ್ಯನಹಳ್ಳಿ ಗ್ರಾಮದಲ್ಲಿ ಒಣಭೂಮಿಯನ್ನು ಹೆಚ್ಚಿನ ಪ್ರಮಾಣದಲ್ಲಿದ್ದು ಭೂರಹಿತರೆ ಹೆಚ್ಚಾಗಿರುವುದರಿಂದ ತಮ್ಮ ಜೀವನವನ್ನು ಸಾಗಿಸಲು ಕೂಲಿಯನ್ನು ಆಶ್ರಯಿಸಿರುವುದರಿಂದ ಉತ್ತಮ ಜೀವನದಿಂದ ವಂಚಿತಗೊಂಡು ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಈ ಹಿನ್ನೆಲೆಯಲ್ಲಿ ಗ್ರಾಮ ಪಂಚಾಯಿತಿಗಳ ಮೂಲಕ ಹಿಂದುಳಿದ ಗ್ರಾಮ ಪಂಚಾಯಿತಿಗಳನ್ನು ಅಭಿವೃದ್ಧಿ ಮಾಡುವ ಅಗತ್ಯವಿದೆ ಎಂದು ತಿಳಿದುಕೊಳ್ಳಲಾಗಿದೆ.

**ಕೋಷ್ಟಕ-೧೩: ವಾಸಿಸುವ ಮನೆಯ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ನೀವು ವಾಸಿಸುವ ಮನೆ ಯಾವ ಮಾದರಿಯದ್ದು? | ಸ್ವಂತ | ೩೬ | ೭೨ | ೩೨ | ೬೪ | ೩೫ | ೭೦ | ೩೨ | ೬೪ |
| | ಬಾಡಿಗೆ | ೮ | ೧೬ | ೬ | ೧೨ | ೪ | ೮ | ೫ | ೧೦ |
| | ಯೋಜನೆ ಮನೆ | ೬ | ೧೨ | ೧೨ | ೨೪ | ೧೧ | ೨೨ | ೧೩ | ೨೬ |
| ಒಟ್ಟು | | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಗ್ರಾಮವಾರು ಸಂದರ್ಶನದಲ್ಲಿ ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳಲ್ಲಿ ಸಂದರ್ಶಿಸಿದ ಜನರ ಮನೆಯ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೭೨.೦೦ರಷ್ಟು ಕುಟುಂಬಗಳು ಸ್ವಂತ ಮನೆಯನ್ನು ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೧೬.೦೦ರಷ್ಟು ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದೇವೆ ಎಂದು ತಿಳಿಸಿದರು. ಉಳಿದ ಶೇ. ೧೨.೦೦ರಷ್ಟು

ಕುಟುಂಬಗಳು ಯೋಜನೆಯಡಿಯಲ್ಲಿ ಮನೆಯನ್ನು ನಿರ್ಮಿಸಿಕೊಂಡು ವಾಸ ಮಾಡುವುದಾಗಿದೆ ಎಂದು ಹೇಳಿಕೊಂಡಿದ್ದಾರೆ. ಅಲ್ಲದೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೬೪.೦೦ರಷ್ಟು ಕುಟುಂಬಗಳು ಸ್ವಂತ ಮನೆಯನ್ನು ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೧೨.೦೦ರಷ್ಟು ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದೇವೆ ಎಂದು ತಿಳಿಸಿದರು. ಉಳಿದ ಶೇ. ೨೪.೦೦ರಷ್ಟು ಕುಟುಂಬಗಳು ಯೋಜನೆಯಡಿಯಲ್ಲಿ ಮನೆಯನ್ನು ನಿರ್ಮಿಸಿಕೊಂಡು ವಾಸ ಮಾಡುವುದಾಗಿದೆ ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೭೦.೦೦ರಷ್ಟು ಕುಟುಂಬಗಳು ಸ್ವಂತ ಮನೆಯನ್ನು ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೮.೦೦ರಷ್ಟು ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದೇವೆ ಎಂದು ತಿಳಿಸಿದರು. ಉಳಿದ ಶೇ. ೨೨.೦೦ರಷ್ಟು ಕುಟುಂಬಗಳು ಯೋಜನೆಯಡಿಯಲ್ಲಿ ಮನೆಯನ್ನು ನಿರ್ಮಿಸಿಕೊಂಡು ವಾಸ ಮಾಡುವುದಾಗಿದೆ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೬೪.೦೦ರಷ್ಟು ಕುಟುಂಬಗಳು ಸ್ವಂತ ಮನೆಯನ್ನು ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೧೦.೦೦ರಷ್ಟು ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದೇವೆ ಎಂದು ತಿಳಿಸಿದರು. ಉಳಿದ ಶೇ. ೨೬.೦೦ರಷ್ಟು ಕುಟುಂಬಗಳು ಸ್ವಂತ ಮನೆಯಿಲ್ಲದೆ ಯೋಜನೆಯ ಮನೆ ಮೇಲೆ ಅವಲಂಬಿಸಿರುವುದು ಕಂಡುಬಂದಿತು. ಕೂಡ್ಲಿಗಿ ತಾಲೂಕಿನ ಗ್ರಾಮಪಂಚಾಯಿತಿ ಕುಟುಂಬಗಳಿಗಿಂತ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಯ ಕುಟುಂಬಗಳು ಸ್ವಂತ ಮನೆಯನ್ನು ಹೆಚ್ಚಿನ ಪ್ರಮಾಣದಲ್ಲಿ ಹೊಂದದೆ, ಸರ್ಕಾರದಿಂದ ಕೊಡುವ ಯೋಜನೆಯ ಮನೆಗಳನ್ನು ಪಡೆಯದೆ ಬಾಡಿಗೆ ಮನೆಯಲ್ಲಿ ಜೀವನ ಮಾಡುವುದನ್ನು ಕ್ಷೇತ್ರಾಧ್ಯಯನಕ್ಕೆ ಹೋದಾಗ ತಿಳಿದುಬಂದ ಸಂಗತಿಯಾಗಿದೆ. ಈ ಅಂಶದಿಂದ ತಿಳಿದುಬರುವ ಸಂಗತಿಯೆಂದರೆ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಕುಟುಂಬಗಳಲ್ಲಿ ವರಮಾನ ಮಟ್ಟ ಉತ್ತಮವಾಗಿದ್ದು, ಆ ವರಮಾನದಿಂದ ಮೂಲಭೂತ ಸೌಕರ್ಯಗಳಾದ ವಸತಿಯನ್ನು ನಿರ್ಮಿಸಿಕೊಳ್ಳುವುದರ ಜೊತೆಗೆ ಜನರ ಬದುಕನ್ನು ಸಮೃದ್ಧಗೊಳಿಸುವಲ್ಲಿ ಯಶಸ್ವಿಯಾಗಿರುವುದು ತಿಳಿದುಬರುತ್ತದೆ. ಅದೇ ಪ್ರಕಾರ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ವರಮಾನ ಮಟ್ಟ ಶೋಚನೀಯವಾಗಿದ್ದು, ಸರ್ಕಾರ ನೀಡುವ ಯೋಜನಾಧಾರಿತ ವಸತಿಗಳನ್ನು ಪಡೆಯುವು ದರಲ್ಲಿಯೂ ವಸತಿ ರಹಿತರು ವಸತಿಯನ್ನು ಪಡೆಯುವುದರಲ್ಲಿ ವಿಫಲಗೊಂಡಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಹಿಂದುಳಿದ ಅಪ್ಪಯ್ಯನಹಳ್ಳಿ ಪಂಚಾಯಿತಿಯು ಕನಿಷ್ಠ ಮೂಲಭೂತ ಸೌಲಭ್ಯವನ್ನು ಪಡೆಯದೆ ಜನರ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ವಿಫಲಗೊಂಡಿರುವುದರ ಪರಿಣಾಮವಾಗಿ ಹಿಂದುಳಿದಿದೆ ಎನ್ನಬಹುದಾಗಿದೆ. ಈ ಗ್ರಾಮ ಪಂಚಾಯಿತಿಗಳ ಚುನಾಯಿತ ಸದಸ್ಯರು ಸರಿಯಾದ ರೀತಿಯಲ್ಲಿ ಸೌಲಭ್ಯ

ವಂಚಿತರನ್ನು ಪರಿಗಣಿಸಿ ರಾಜ್ಯ ಸರ್ಕಾರಕ್ಕೆ ಬೆಂಬಲಿಸುವುದರೊಂದಿಗೆ ವಿಶೇಷವೆಂದು ಪರಿಗಣಿಸಿ ವಸತಿರಹಿತರಿಗೆ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳುವುದರೊಂದಿಗೆ ಜನರ ಉತ್ತಮ ಬದುಕನ್ನು ರೂಪಿಸುವುದರ ಮೂಲಕ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಬರುವ ಜನಸಾಮಾನ್ಯರ ಅಭಿವೃದ್ಧಿಗೆ ಶ್ರಮವಹಿಸುವ ಅವಶ್ಯಕತೆ ಇದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ-೧೪: ವಸತಿ ಯೋಜನೆಗಳ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಬೆಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಯಾವ ಯೋಜನೆಯಲ್ಲಿ ಮನೆಯನ್ನು ಪಡಕೊಂಡಿರಿ? | ಇಂದಿರಾ ಆವಾಸ್ | ೪ | ೨೫ | ೫ | ೨೫ | ೬ | ೨೭.೨೭ | ೩ | ೧೩.೦೪ |
| | ಆಶ್ರಯ ವಸತಿ ಯೋಜನೆ | ೪ | ೨೫ | ೬ | ೩೦ | ೭ | ೩೧.೮೧ | ೯ | ೩೯.೧೩ |
| | ಅಂಬೇಡ್ಕರ್ ವಸತಿ ಯೋಜನೆ | ೮ | ೫೦ | ೯ | ೪೫ | ೯ | ೪೦.೯ | ೧೧ | ೪೭.೮೩ |
| ಒಟ್ಟು | | ೧೬ | ೧೦೦ | ೨೦ | ೧೦೦ | ೨೨ | ೧೦೦ | ೨೩ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ತಿಳಿಸಿರುವಂತೆ ತಾಲೂಕಿನ ಗ್ರಾಮೀಣವಾರು ಸಂದರ್ಶಿಸಿದಾಗ ಮನೆಯಿಲ್ಲ ಎಂದಾದರೆ ಸರ್ಕಾರದಿಂದ ಮನೆ ಪಡೆದವರ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಗಳಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೨೫.೦೦ರಷ್ಟು ಕುಟುಂಬಗಳು ನಮಗೆ ಇಂದಿರಾ ಆವಾಸ್ ವಸತಿ ಯೋಜನೆಯ ಸೌಲಭ್ಯ ಸಿಕ್ಕಿದೆ ಎಂದು ತಿಳಿಸಿರುತ್ತಾರೆ. ಅದರಂತೆ, ಶೇ. ೨೫.೦೦ರಷ್ಟು ಕುಟುಂಬಗಳು ನಮಗೆ ಆಶ್ರಯ ವಸತಿ ಯೋಜನೆಯ ಸೌಲಭ್ಯ ಸಿಕ್ಕದೆ ಎಂದಿದ್ದಾರೆ. ಮುಂದುವರಿದು, ಶೇ. ೫೦.೦೦ರಷ್ಟು ಕುಟುಂಬಗಳು ನಮಗೆ ಅಂಬೇಡ್ಕರ್ ವಸತಿ ಯೋಜನೆಯ ಸೌಲಭ್ಯ ದೊರಕಿದೆ ಎಂದಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಗಳಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೨೫.೦೦ರಷ್ಟು ಕುಟುಂಬಗಳು ನಮಗೆ ಇಂದಿರಾ ಆವಾಸ್ ವಸತಿ ಯೋಜನೆಯ ಸೌಲಭ್ಯ ಸಿಕ್ಕಿದೆ ಎಂದು ತಿಳಿಸಿರುತ್ತಾರೆ. ಅದರಂತೆ, ಶೇ. ೩೦.೦೦ರಷ್ಟು ಕುಟುಂಬಗಳು ನಮಗೆ ಆಶ್ರಯ ವಸತಿ ಯೋಜನೆಯ

ಸೌಲಭ್ಯ ಸಿಕ್ಕದೆ ಎಂದಿದ್ದಾರೆ. ಮುಂದುವರಿದು, ಶೇ. ೪೫.೦೦ರಷ್ಟು ಕುಟುಂಬಗಳು ನಮಗೆ ಅಂಬೇಡ್ಕರ್ ವಸತಿ ಯೋಜನೆಯ ಸೌಲಭ್ಯ ದೊರಕಿದೆ ಎಂದಿದ್ದಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಗಳಲ್ಲಿ ಶೇ.೧೦೦ರಷ್ಟರಲ್ಲಿ ಶೇ. ೨೭.೨೭.೦೦ರಷ್ಟು ಕುಟುಂಬಗಳು ನಮಗೆ ಇಂದಿರಾ ಆವಾಸ್ ವಸತಿ ಯೋಜನೆಯ ಸೌಲಭ್ಯ ಸಿಕ್ಕಿದೆ ಎಂದು ತಿಳಿಸಿರುತ್ತಾರೆ. ಅದರಂತೆ, ಶೇ. ೩೧.೮೧ರಷ್ಟು ಕುಟುಂಬಗಳು ನಮಗೆ ಆಶ್ರಯ ವಸತಿ ಯೋಜನೆಯ ಸೌಲಭ್ಯ ಸಿಕ್ಕದೆ ಎಂದಿದ್ದಾರೆ. ಮುಂದುವರಿದು, ಶೇ. ೪೦.೯೦ರಷ್ಟು ಕುಟುಂಬಗಳು ನಮಗೆ ಅಂಬೇಡ್ಕರ್ ವಸತಿ ಯೋಜನೆಯ ಸೌಲಭ್ಯ ದೊರಕಿದೆ ಎಂದಿದ್ದಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಗಳಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೧೩.೦೪ರಷ್ಟು ಕುಟುಂಬಗಳು ನಮಗೆ ಇಂದಿರಾ ಆವಾಸ್ ವಸತಿ ಯೋಜನೆಯ ಸೌಲಭ್ಯ ಸಿಕ್ಕಿದೆ ಎಂದು ತಿಳಿಸಿರುತ್ತಾರೆ. ಅದರಂತೆ, ಶೇ. ೩೯.೧೩ರಷ್ಟು ಕುಟುಂಬಗಳು ನಮಗೆ ಆಶ್ರಯ ವಸತಿ ಯೋಜನೆಯ ಸೌಲಭ್ಯ ಸಿಕ್ಕದೆ ಎಂದಿದ್ದಾರೆ. ಮುಂದುವರಿದು, ಶೇ. ೪೭.೮೨ರಷ್ಟು ಕುಟುಂಬಗಳು ನಮಗೆ ಅಂಬೇಡ್ಕರ್ ವಸತಿ ಯೋಜನೆಯ ಸೌಲಭ್ಯ ದೊರಕಿದೆ ಎಂದಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಹೇಳಿಕೆಯನ್ನು ನೋಡಿದಾಗ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಕೂಡ್ಲಿಗಿ ತಾಲೂಕಿನ ಗ್ರಾಮಗಳಲ್ಲಿ ಎಲ್ಲಾ ವಸತಿ ಯೋಜನೆಯ ಸೌಲಭ್ಯಗಳನ್ನು ಪಡೆಯುವಲ್ಲಿ ವಿಫಲವಾಗಿರುವುದು ಅಧ್ಯಯನಗಳಿಂದ ತಿಳಿದು ಬಂದಿದೆ. ಮುಂದುವರೆದ ಬಳ್ಳಾರಿ ತಾಲೂಕಿನಲ್ಲಿ ತಮಗೆ ಸ್ವಂತ ಮನೆಯನ್ನು ಹೊಂದಲು ಆಗದಿದ್ದರೂ ಸರ್ಕಾರದಿಂದ ಸಿಗುವ ಸೌಲಭ್ಯವನ್ನು ಉಪಯೋಗ ಮಾಡಿಕೊಳ್ಳುವಲ್ಲಿ ಸಫಲವಾಗಿದ್ದಾರೆ. ಆದರೆ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಅವರ ಪ್ರಮಾಣ ಕಡಿಮೆಯಿರುವುದರಿಂದ ತಮಗೆ ಸಿಗಬೇಕಾದ ಸೌಲಭ್ಯಗಳನ್ನು ಪಡೆಯುವಲ್ಲಿ ವಿಫಲ ವಾಗಿರುವುದನ್ನು ಸಹ ಅಧ್ಯಯನದಿಂದ ತಿಳಿಯಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಮುಂದುವರಿದ ತಾಲೂಕಿನ ಗ್ರಾಮಗಳಲ್ಲಿ ಜನರ ಸ್ಥಿತಿಯು ಉತ್ತಮವಾಗಿದ್ದು ಹಿಂದುಳಿದ ತಾಲೂಕಿನ ಗ್ರಾಮಗಳಲ್ಲಿ ಅವರ ಜೀವನವು ಶೋಚನೀಯವಾಗಿದೆ ಎಂದು ಅಧ್ಯಯನದಿಂದ ತಿಳಿಯಲಾಗುತ್ತದೆ.

ಕೊನೆಯದಾಗಿ, ಹಿಂದುಳಿದ ಗ್ರಾಮ ಪಂಚಾಯಿತಿಯಲ್ಲಿರುವ ಜನರು ಅವರು ಉತ್ತಮ ಜೀವನ ಮಾಡಬೇಕಾದ ಅನಿವಾರ್ಯತೆ ಇರುತ್ತದೆ ಹಾಗಾಗಿ, ಆ ಪಂಚಾಯಿತಿಯ ಜನರಿಗೂ ಬದಕನ್ನು ಉತ್ತಮಗೊಳಿಸಬೇಕಾದ ಅವಶ್ಯಕತೆಯಿದೆ ಎಂದು ಹೇಳಲಾಗುತ್ತದೆ.

ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ತೀರಾ ಕೆಳಮಟ್ಟದಲ್ಲಿ ಇರುವುದನ್ನು ನೋಡಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳನ್ನು ಹೋಲಿಕೆ ಮಾಡಿ ನೋಡಿದಾಗ ಸರ್ಕಾರದಿಂದ ಬರುವ ಶೌಚಾಲಯವನ್ನು ಪಡೆಯುವುದು ತುಂಬಾ ಕಷ್ಟದ ಕೆಲಸವಾಗಿದೆ. ಯಾಕೆಂದರೆ ಸರ್ಕಾರಿ ಸಂಸ್ಥೆಯಲ್ಲಿ ಕೆಲಸವನ್ನು ಮಾಡುವ ಸಿಬ್ಬಂದಿಗಳಿಗೆ ಯಾರು ಹಣವನ್ನು ನೀಡುತ್ತಾರೆಯೋ, ರಾಜಕೀಯ ಬಲ ಇದ್ದವರಿಗೆ ಶೌಚಾಲಯವನ್ನು ಕಟ್ಟಿಸಿಕೊಳ್ಳಲು ಸಹಾಯಧನವನ್ನು ನೀಡುತ್ತಾರೆ. ಆದರೆ ಈ ಅಂಶವನ್ನು ಪರಿಗಣಿಸಿದಾಗ ಕಡಿಮೆ ಆದಾಯ ಮತ್ತು ಅನಕ್ಷರತೆಯಿಂದ ಜನರು ಸೌಲಭ್ಯ ಪಡೆಯುವುದಕ್ಕೆ ಆಗುತ್ತಿಲ್ಲ ಎಂಬ ಮಾಹಿತಿಯು ನಮಗೆ ಕಂಡುಬಂದಿದೆ. ಅಂದರೆ ಹಲವಾರು ಅಧ್ಯಯನಗಳಿಂದ ಮತ್ತು ವರದಿಗಳನ್ವಯವಾಗಿ ಭಾರತದಲ್ಲಿ ದಶಲಕ್ಷ ಜನ ಶೌಚಾಲಯ ಸೌಲಭ್ಯದಿಂದ ವಂಚಿತರಾಗಿದ್ದಾರೆ ಎಂಬ ಅಂಶವು ತಿಳಿಯಲಾಗಿದೆ. ಹಾಗಾಗಿ ಸ್ಥಳೀಯ ಮಟ್ಟದಿಂದ ಹಿಡಿದು ರಾಜ್ಯ ಮತ್ತು ಕೇಂದ್ರ ಮಟ್ಟದವರಿಗೂ ಸಾಮಾನ್ಯ ಜನರಿಗೆ ಸ್ವಚ್ಛತೆಯ ಬಗ್ಗೆ ಅರಿವುನ್ನು ಮೂಡಿಸುವ ಮೂಲಕ ಶೌಚಾಲಯಗಳನ್ನು ಸರಳ ರೀತಿಯಲ್ಲಿ ಎಲ್ಲರಿಗೂ ತಲುಪುವಂತೆ ಮಾಡಬೇಕಾದ ಅವಶ್ಯಕತೆಯಿದೆ ಎಂದು ತಿಳಿದುಬಂದಿದೆ.

**ಕೋಷ್ಟಕ-೧೬: ಶಾಲೆಗೆ ತೆರಳುತ್ತಿರುವುದರ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚೆಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಶಾಲೆಗೆ ತೆರಳುತ್ತಿರುವುದರ ವಿವರ | ಹೋಗುತ್ತಾರೆ | ೩೯ | ೭೮ | ೪೬ | ೯೨ | ೪೫ | ೯೦ | ೪೫ | ೯೦ |
| | ಹೋಗವುದಿಲ್ಲ | ೧೧ | ೨೨ | ೪ | ೮ | ೫ | ೧೦ | ೫ | ೧೦ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಎರಡು ತಾಲೂಕಿನ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಮಕ್ಕಳು ಶಾಲೆಗೆ ಹೋಗುತ್ತಿರುವವರ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೭೮.೦೦ರಷ್ಟು ಕುಟುಂಬಗಳು ಶಾಲೆಗೆ ಹೋಗುತ್ತಾರೆ. ಅದರಂತೆ ಶೇ. ೨೨.೦೦ರಷ್ಟು ಕುಟುಂಬಗಳು

ಶಾಲೆಗೆ ಹೋಗವುದಿಲ್ಲ ಎಂಬ ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಹಾಗೆಯೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ.೯೨.೦೦ರಷ್ಟು ಕುಟುಂಬಗಳು ಶಾಲೆಗೆ ಹೋಗುತ್ತಾರೆ. ಅದರಂತೆ ಶೇ. ೮.೦೦ರಷ್ಟು ಕುಟುಂಬಗಳು ಶಾಲೆಗೆ ಹೋಗುವುದಿಲ್ಲ ಎಂಬ ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೯೦.೦೦ರಷ್ಟು ಕುಟುಂಬಗಳು ಶಾಲೆಗೆ ಹೋಗುತ್ತಾರೆ. ಅದರಂತೆ ಶೇ.೧೦.೦೦ರಷ್ಟು ಕುಟುಂಬಗಳು ಶಾಲೆಗೆ ಹೋಗುವುದಿಲ್ಲ ಎಂಬ ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ.೯೦.೦೦ರಷ್ಟು ಕುಟುಂಬಗಳು ಶಾಲೆಗೆ ಹೋಗುತ್ತಾರೆ. ಅದರಂತೆ ಶೇ.೧೦.೦೦ರಷ್ಟು ಕುಟುಂಬಗಳು ಶಾಲೆಗೆ ಹೋಗುವುದಿಲ್ಲ ಎಂಬ ಅಭಿಪ್ರಾಯವನ್ನು ತಿಳಿಸಿರುತ್ತಾರೆ.

ಮೇಲಿನ ಅಂಶಗಳಿಂದ ತಿಳಿದುಬರುವುದೇನೆಂದರೆ, ಜಿಲ್ಲೆಯಲ್ಲಿ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿ ಗ್ರಾಮ ಪಂಚಾಯಿತಿಗಳಲ್ಲಿ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಮಕ್ಕಳನ್ನು ಶಾಲೆಗೆ ಕಳುಹಿಸುವಲ್ಲಿ ಹೆಚ್ಚಿನ ಮಟ್ಟದಲ್ಲಿ ಹಿಂದುಳಿದಿದ್ದಾರೆ ಎಂದು ಅಧ್ಯಯನದಲ್ಲಿ ತಿಳಿಯಲಾಗದೆ. ಅಭಿವೃದ್ಧಿಯ ಮಾನದಂಡಗಳಲ್ಲಿ ಶಿಕ್ಷಣವು ಒಂದು ಅದನ್ನು ಮಕ್ಕಳಿಗೆ ಸರಿಯಾಗಿ ಕೊಡಿಸಿದಾಗ ಅವರ ಬದುಕು ಮತ್ತು ಆ ಗ್ರಾಮದ ಅಭಿವೃದ್ಧಿಗೊಳಿಸಬಹುದಾಗಿದೆ. ಇಲ್ಲವಾದರೆ ಅವರ ಜೀವನವು ದುಃಸ್ಥಿತಿಯನ್ನು ಅನುಭವಿಸುವಂತಾಗುತ್ತದೆ. ಇಂತಹ ಒಂದು ದುಃಸ್ಥಿತಿಯನ್ನು ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ್ಲಲ್ಲಿ ಇರುವುದನ್ನು ಅಧ್ಯಯನಗಳಿಂದ ತಿಳಿಯಲಾಗಿದೆ. ಇಂತಹ ಒಂದು ದುಃಸ್ಥಿತಿಯನ್ನು ಗಂಭೀರವಾಗಿ ಪರಿಗಣಿಸಿ ಸರ್ಕಾರಗಳು, ಶಿಕ್ಷಣ ಸಂಸ್ಥೆಗಳು ಮತ್ತು ಎನ್.ಜಿ.ಓ. ಸಂಸ್ಥೆಗಳು ಅಂತಹ ಗ್ರಾಮಗಳ ಅಭಿವೃದ್ಧಿಗೆ ಹೆಚ್ಚಿನ ರೀತಿಯಲ್ಲಿ ಸಹಕರಿಸಬೇಕಾದ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ಕೋಷ್ಟಕ-೧೭: ಶಾಲೆಗೆ ಹೋಗುವವರ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಹೌದಾದರೆ ನಿಮ್ಮ ಮಕ್ಕಳು ಯಾವ ಶಾಲೆಗೆ ಹೋಗುತ್ತಾರೆ? | ಸರ್ಕಾರಿ | ೩೫ | ೮೯.೭೪ | ೪೦ | ೮೬.೯೫ | ೨೮ | ೬೨.೨೨ | ೩೨ | ೭೧.೧೧ |
| | ಖಾಸಗಿ | ೪ | ೧೦.೨೫ | ೬ | ೧೩.೦೪ | ೧೭ | ೩೭.೭೭ | ೧೩ | ೨೮.೮೮ |
| | ಒಟ್ಟು | ೩೯ | ೧೦೦ | ೪೬ | ೧೦೦ | ೪೫ | ೧೦೦ | ೪೫ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಅಂಶವನ್ನು ಪರಿಗಣಿಸಿ ಜಿಲ್ಲೆಯಲ್ಲಿ ಎರಡು ತಾಲೂಕಿ ಗ್ರಾಮ ಪಂಚಾಯಿತಿಗಳಲ್ಲಿ ಶಾಲೆಗೆ ಹೋಗುತ್ತಿರುವವರು ಯಾವ ಶಾಲೆಗೆ ಹೋಗುತ್ತಾರೆ ಎಂಬುದರ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೮೯.೭೪ರಷ್ಟು ಕುಟುಂಬಗಳು ಸರ್ಕಾರಿ ಶಾಲೆಗೆ ಹೋಗುತ್ತಾರೆ. ಅದರಂತೆ ಶೇ. ೧೦.೨೬ರಷ್ಟು ಕುಟುಂಬಗಳು ಖಾಸಗೀ ಶಾಲೆಗೆ ಹೋಗುತ್ತಾರೆ ಎಂಬ ಅಭಿಪ್ರಾಯುವನ್ನು ತಿಳಿಸಿರುತ್ತಾರೆ. ಬಡೇಲಡಕು ಗ್ರಾವು ಪಂಚಾಯಿತಿಯುಲ್ಲಿ ಶೇ.೧೦೦ರಷ್ಟರಲ್ಲಿ ಶೇ. ೮೬.೯೬ರಷ್ಟು ಕುಟುಂಬಗಳು ಸರ್ಕಾರಿ ಶಾಲೆಗೆ ಹೋಗುತ್ತಾರೆ. ಅದರಂತೆ ಶೇ. ೧೩.೦೪ರಷ್ಟು ಕುಟುಂಬಗಳು ಖಾಸಗೀ ಶಾಲೆಗೆ ಹೋಗುತ್ತಾರೆ ಎಂಬ ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ.೬೭.೭೭ರಷ್ಟು ಕುಟುಂಬಗಳು ಸರ್ಕಾರಿ ಶಾಲೆಗೆ ಹೋಗುತ್ತಾರೆ. ಅದರಂತೆ ಶೇ. ೩೨.೨೨ರಷ್ಟು ಕುಟುಂಬಗಳು ಖಾಸಗೀ ಶಾಲೆಗೆ ಹೋಗುತ್ತಾರೆ ಎಂಬ ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೭೧.೧೧ರಷ್ಟು ಕುಟುಂಬಗಳು ಸರ್ಕಾರಿ ಶಾಲೆಗೆ ಹೋಗುತ್ತಾರೆ. ಅದರಂತೆ ಶೇ. ೨೮.೮೮ರಷ್ಟು ಕುಟುಂಬಗಳು ಖಾಸಗಿ ಶಾಲೆಗೆ ಹೋಗುತ್ತಾರೆ ಎಂಬ ಅಭಿಪ್ರಾಯವನ್ನು ತಿಳಿಸಿರುತ್ತಾರೆ.

ಮೇಲಿನ ಅಂಶಗಳಿಂದ ತಿಳಿಯಬಹುದಾದ ಅಂಶವೆಂದರೆ, ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮಗಳನ್ನು ನೋಡಿದಾಗ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳೇ ಹೆಚ್ಚಿನ ಸಂಖ್ಯೆಯಲ್ಲಿ ಖಾಸಗೀ ಶಾಲೆಗಳಿಗೆ ಕಳುಹಿಸುತ್ತಿರುವುದು ತಿಳಿದು ಬಂದಿದೆ. ಅಂದಹಾಗೆ, ಎರಡು ತಾಲೂಕಿನ ಗ್ರಾಮ ಪಂಚಾಯಿತಿಯ ಸಂದರ್ಶಿತರನ್ನು ಕೇಳಿದಾಗ ಸರ್ಕಾರಿ ಶಾಲೆಗಿಂತ ಖಾಸಗೀ ಶಾಲೆಯಲ್ಲಿ ಮಕ್ಕಳ ಶಾಲೆಯ ಶುಲ್ಕವು ತುಂಬಾನೇ ಹಣ ಖರ್ಚು ಆಗುತ್ತದೆ ಆದರೂ ಖಾಸಗೀ ಶಾಲೆಯಲ್ಲಿ ಇಂಗ್ಲೀಷ್ ಮಾಧ್ಯಮ ಇರುವುದರಿಂದ ನಮ್ಮ ಮಕ್ಕಳಿಗೆ ಎಷ್ಟು ಖರ್ಚು ಆದರೂ ಖಾಸಗಿ ಶಾಲೆಗೆ ಕಳುಹಿಸುತ್ತೇವೆ ಎಂದು ತಮ್ಮ ನಿಲುವನ್ನು ಹಂಚಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಹಲವು ಅಧ್ಯಯನಗಳ ಪರಿಣಾಮವಾಗಿ ಕೂಡ್ಲಿಗಿ ತಾಲೂಕಿನಲ್ಲಿರುವ ಗ್ರಾಮಗಳ ಸ್ಥಿತಿಯು ದುಃಸ್ಥಿತಿಯಲ್ಲಿರುವ ಹಿನ್ನೆಲೆಯಲ್ಲಿ ಅವರು ತಮ್ಮ ಮಕ್ಕಳ ಶಾಲೆಗೆ ಹೆಚ್ಚಿನ ಹಣವನ್ನು ಖರ್ಚು ಮಾಡಲಾಗದೆ ಇರುವುದರಿಂದ ಈ ಜಿಲ್ಲೆಯಲ್ಲಿರುವ ಮಕ್ಕಳನ್ನು ಸರ್ಕಾರಿ ಶಾಲೆಗಳಿಗೆ ಕಳುಹಿಸುವುದು ಅನಿವಾರ್ಯವಾಗಿದೆ. ಉಳಿದ ಬಳ್ಳಾರಿ ತಾಲೂಕಿನ ಗ್ರಾಮಗಳ ಪಾಲಕರು ತಮ್ಮ ಮಕ್ಕಳ ಉತ್ತಮ ಶಿಕ್ಷಣವು

ಖಾಸಗೀ ಶಾಲೆಗಳಿಗೆ ಕಳುಹಿಸಿದಾಗ ಮಾತ್ರ ಸಿಗುತ್ತದೆ ಎಂಬ ಮನೋಭಾವನೆಯಿಂದ ಹೆಚ್ಚಿನ ಮಕ್ಕಳನ್ನು ಖಾಸಗೀ ಶಾಲೆಗಳಿಗೆ ಕಳುಹಿಸುತ್ತಿದ್ದಾರೆ ಎಂಬ ಅಭಿಪ್ರಾಯವನ್ನು ತಿಳಿಯಲಾಗಿದೆ. ಎರಡು ಹೇಳಿಕೆಯನ್ನು ನೋಡಿದಾಗ ಮಕ್ಕಳ ಶಿಕ್ಷಣವು ಕೆಲವು ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿಯೂ ಉತ್ತಮ ಶಿಕ್ಷಣ ಸಿಗುತ್ತದೆ ಎಂಬ ನಿಲವುಗೆ ಬರಬಹುದು. ಆದರೆ ಎಲ್ಲಾ ಪಾಲಕರು ತಮ್ಮ ಮಕ್ಕಳನ್ನು ಸರ್ಕಾರಿ ಶಾಲೆಗೆ ಕಳುಹಿಸುವ ಮೂಲಕ ಶಾಲೆಯಲ್ಲಿಯೇ ಉತ್ತಮ ಸೌಲಭ್ಯಗಳನ್ನು ಬಳಸಿಕೊಂಡು ತಮ್ಮ ಮಕ್ಕಳನ್ನು ಸಮಾಜದ ಮುಖ್ಯವಾಹಿನಿಯಲ್ಲಿ ಬರುವಂತಹ ಕಾರ್ಯವನ್ನು ಮಾಡುವ ಅವಶ್ಯಕತೆಯಿದೆ ಎಂದು ತಿಳಿಯಲಾಗಿದೆ.

**ಕೋಷ್ಟಕ-೧೮: ಮನೆ-ಶಾಲೆಯ ಅಂತರದ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ನಿಮ್ಮ ಮಕ್ಕಳ ಶಾಲೆಯ ಅಂತರ ವನ್ನು ಹೇಳಿ? | ಕಾಲು ನಡಿಗೆ | ೨೮ | ೭೧.೮ | ೩೦ | ೬೫.೨೧ | ೧೬ | ೩೫.೫೫ | ೧೯ | ೪೨.೨೨ |
| | ಸೈಕಲ್‌ನಲ್ಲಿ | ೧೦<br>೧.೦೦ ಕೀ.ಮಿ | ೨೫.೬ | ೧೦<br>೨.೫ ಕೀ.ಮಿ | ೨೧.೭೩ | ೧೨<br>೨.೦೦ ಕೀ.ಮಿ | ೨೬.೬೬ | ೧೩<br>೨.೦೦ ಕೀ.ಮಿ | ೨೮.೮೮ |
| | ಆಟೋದಲ್ಲಿ | ೧<br>೧.೫ ಕೀ.ಮಿ | ೨.೫೬ | ೬<br>೨.೫ ಕೀ.ಮಿ | ೧೩.೦೪ | ೧೭<br>೨.೦೦ ಕೀ.ಮಿ | ೩೭.೭೭ | ೧೩<br>೧.೦೦ ಕೀ.ಮಿ | ೨೮.೮೮ |
| | ಒಟ್ಟು | ೩೯ | ೧೦೦ | ೪೬ | ೧೦೦ | ೪೫ | ೧೦೦ | ೪೫ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಮೇಲಿನ ಕೊಷ್ಟಕವನ್ನು ನೋಡಿದಾಗಜಿಲ್ಲೆಯ ಎರಡು ತಾಲೂಕಿನ ವ್ಯಾಪ್ತಿಯಲ್ಲಿರುವ ಗ್ರಾಮ ಪಂಚಾಯಿತಿಗಳಲ್ಲಿ ಮಕ್ಕಳು ಶಾಲೆಗೆ ಯಾವುದರಲ್ಲಿ ಹೋಗುತ್ತಾರೆ ಎಂಬುದರ ವಿವರವನ್ನು ತಿಳಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯ ಒಟ್ಟು ಶೇ. ೧೦೦ ರಷ್ಟರಲ್ಲಿ ಶೇ. ೭೧.೭೯ರಷ್ಟು ಕುಟುಂಬಗಳು ತಮ್ಮ ಮನೆಯಿಂದ ಮಕ್ಕಳು ಶಾಲೆಗೆ ಕಾಲುನಡಿಗೆಯಲ್ಲಿ ಹೋಗುತ್ತಾರೆ. ಅದೇ ತರಹ ಶೇ. ೨೫.೬೪ ರಷ್ಟು ಕುಟುಂಬಗಳ ಮಕ್ಕಳು ಶಾಲೆಗೆ ಸೈಕಲ್‌ನಲ್ಲಿ ಹೋಗುತ್ತಾರೆ ಎಂದು ಹೇಳಿದ್ದಾರೆ. ಅಲ್ಲದೇ,

ಶೇ. ೨.೫೬ರಷ್ಟು ಕುಟುಂಬಗಳ ಮಕ್ಕಳು ಆಟೋದಲ್ಲಿ ಹೋಗುತ್ತಾರೆ ಎಂದು ಹೇಳಿದ್ದಾರೆ. ಒಡೇಲಡಕು ಗ್ರಾಮ ಪಂಚಾಯಿತಿಯ ಒಟ್ಟು ಶೇ.೧೦೦ ರಷ್ಟರಲ್ಲಿ ಶೇ.೬೫.೨೧ರಷ್ಟು ಕುಟುಂಬಗಳು ತಮ್ಮ ಮನೆಯಿಂದ ಮಕ್ಕಳು ಶಾಲೆಗೆ ಕಾಲುನಡಿಗೆಯಲ್ಲಿ ಹೋಗುತ್ತಾರೆ.ಅದೇ ತರಹ ಶೇ.೨೧.೭೩ರಷ್ಟು ಕುಟುಂಬಗಳ

ಮಕ್ಕಳು ಶಾಲೆಗೆ ಸೈಕಲ್‌ನಲ್ಲಿ ಹೋಗುತ್ತಾರೆ ಎಂದು ಹೇಳಿದ್ದಾರೆ. ಅಲ್ಲದೇ, ಶೇ.೧೩.೦೪ರಷ್ಟು ಕುಟುಂಬಗಳ ಮಕ್ಕಳು ಆಟೋದಲ್ಲಿ ಹೋಗುತ್ತಾರೆ ಎಂದು ಹೇಳಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯ ಒಟ್ಟು ಶೇ. ೧೦೦ ರಷ್ಟರಲ್ಲಿ ಶೇ. ೩೫.೫೫ರಷ್ಟು ಕುಟುಂಬಗಳು ತಮ್ಮ ಮನೆಯಿಂದ ಮಕ್ಕಳು ಶಾಲೆಗೆ ಕಾಲುನಡಿಗೆಯಲ್ಲಿ ಹೋಗುತ್ತಾರೆ. ಅದೇ ತರಹ ಶೇ. ೨೬.೬೬ರಷ್ಟು ಕುಟುಂಬಗಳ ಮಕ್ಕಳು ಶಾಲೆಗೆ ಸೈಕಲ್‌ನಲ್ಲಿ ಹೋಗುತ್ತಾರೆ ಎಂದು ಹೇಳಿದ್ದಾರೆ. ಅಲ್ಲದೇ, ಶೇ.೩೭.೭೭ರಷ್ಟು ಕುಟುಂಬಗಳ ಮಕ್ಕಳು ಆಟೋದಲ್ಲಿ ಹೋಗುತ್ತಾರೆ ಎಂದು ಹೇಳಿದ್ದಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯ ಒಟ್ಟು ಶೇ.೧೦೦ ರಷ್ಟರಲ್ಲಿ ಶೇ.೪೨.೨೨ರಷ್ಟು ಕುಟುಂಬಗಳು ತಮ್ಮ ಮನೆಯಿಂದ ಮಕ್ಕಳು ಶಾಲೆಗೆ ಕಾಲುನಡಿಗೆಯಲ್ಲಿ ಹೋಗುತ್ತಾರೆ. ಅದೇ ತರಹ ಶೇ. ೨೮.೮೮ರಷ್ಟು ಕುಟುಂಬಗಳ ಮಕ್ಕಳು ಶಾಲೆಗೆ ಸೈಕಲ್‌ನಲ್ಲಿ ಹೋಗುತ್ತಾರೆ ಎಂದು ಹೇಳಿದ್ದಾರೆ. ಅಲ್ಲದೇ, ಶೇ. ೨೮.೮೮ರಷ್ಟು ಕುಟುಂಬಗಳ ಮಕ್ಕಳು ಆಟೋದಲ್ಲಿ ಹೋಗುತ್ತಾರೆ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ,ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಮಕ್ಕಳು ಶಾಲೆಗೆ ಹೋಗುವುದು ಹೆಚ್ಚಿನ ಸಂಖ್ಯೆಯಲ್ಲಿ ಕಾಲುನಡಿಗೆಯಲ್ಲಿ ಹೋಗುವುದು ಎಂದಿದ್ದಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಪಾಲಕರು ಅದರಲ್ಲಿಯೂ ಹೆಚ್ಚಿನ ಪ್ರಮಾಣದಲ್ಲಿ ಅಪ್ಪಯ್ಯನಹಳ್ಳಿ ಗ್ರಾಮದ ಮಕ್ಕಳ ಪಾಲಕರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ತುಂಬ ದುಃಸ್ಥಿತಿಯನ್ನು ಅನುಭವಿಸುತ್ತಿದ್ದು ಅಲ್ಲದೇ, ಅವರನ್ನು ಶಾಲೆಗೆ ಕಳುಹಿಸುವುದೇ ದುಸ್ತರ ಎಂದು ಹೇಳಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಅಂದಹಾಗೆ ಮಕ್ಕಳು ಯಾವ ವಿಧಾನದಲ್ಲಿ ಶಾಲೆಗೆ ಹೋಗುವುದು ಮುಖ್ಯ ಅಲ್ಲ ಅವರು ಉತ್ತಮ ಶಿಕ್ಷಣವನ್ನು ಕಲಿತು ತಮ್ಮಗಿರುವ ದುಃಸ್ಥಿತಿಯನ್ನು ಶಿಕ್ಷಣದ ಮೂಲಕ ಸುಃಸ್ಥಿತಿಯ ಕಡೆಗೆ ಹೋಯ್ಯಬೇಕಾದ ಅನಿವಾರ್ಯತೆ ಇದೆ ಎಂದು ತಿಳಿಯಲಾಗುತ್ತದೆ. ತಾಲೂಕಿನಲ್ಲಿರುವ ಮಕ್ಕಳ ಶಿಕ್ಷಣದ ಸ್ಥಿತಿಯ ಸುಧಾರಿಸಲು ರಾಜ್ಯ ಸರ್ಕಾರವು ಮುಂದುವರಿದ ಶಾಲಾ ಮಕ್ಕಳಿಗೆ ಯಾವ ಮಾದರಿಯನ್ನು ಅಳವಡಿಸಿಕೊಂಡಿದಿಯೋ ಅಂತಹ ಅಂಶಗಳ ಅವಶ್ಯಕತೆಯಿದೆ ಎಂದು ತಿಳಿದು ಬಂದಿದೆ.

**ಕೋಷ್ಟಕ-೧೯: ಶಾಲೆಯಲ್ಲಿರುವ ಯೋಜನೆಗಳ ವಿವರ:-**

| | ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| | ಮಧ್ಯಾಹ್ನದ ಬಿಸಿ ಊಟ | — | — | — | — | — | — | — | — |
| ಈ ಕೆಳಗಿನ ಯಾವ ಯೋಜನೆಗಳು ನಿಮ್ಮ ಶಾಲೆಯಲ್ಲಿ ಲಭ್ಯವಿರುತ್ತವೆ? | ಉಚಿತ ಪುಸ್ತಕ ಮತ್ತು ಬಟ್ಟೆ ವಿತರಣೆ | — | — | — | — | — | — | — | — |
| | ವಿದ್ಯಾರ್ಥಿ ವೇತನಗಳು | — | — | — | — | — | — | — | — |
| | ಕ್ಷೀರಾ ಭಾಗ್ಯ | — | — | — | — | — | — | — | — |
| | ಅಕ್ಷರ ದಾಸೋಹ | — | — | — | — | — | — | — | — |
| | ಮೇಲಿನ ಎಲ್ಲಾ | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಮೇಲಿನ ಕೊಷ್ಟಕವನ್ನು ನೋಡಿದಾಗ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳಲ್ಲಿರುವ ಒಟ್ಟಾರೆ ಶಿಕ್ಷಣ ಕ್ಷೇತ್ರಕ್ಕೆ ಇರುವ ಕಾರ್ಯಕ್ರಮಗಳ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯ ಶಾಲೆಯಲ್ಲಿ ಶೇ.೧೦೦ಕ್ಕೆ ಶೇ. ೧೦೦ರಷ್ಟು ಶಾಲೆಯಲ್ಲಿ ಮದ್ಯಾಹ್ನದ ಬಿಸಿಯೂಟ, ಉಚಿತ ಪಠ್ಯ ಪುಸ್ತಕ ಹಾಗೂ ಬಟ್ಟೆ ವಿತರಣೆ, ಮತ್ತು ವಿವಿಧ ವಿದ್ಯಾರ್ಥಿ ವೇತನಗಳನ್ನು ಸಹ ನೀಡಲಾಗುತ್ತದೆ ಎಂದು ಹೇಳಿಕೊಂಡಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಯ ಶಾಲೆಯಲ್ಲಿ ಶೇ. ೧೦೦ಕ್ಕೆ ಶೇ. ೧೦೦ರಷ್ಟು ಶಾಲೆಯಲ್ಲಿ ಮದ್ಯಾಹ್ನದ ಬಿಸಿಯೂಟ, ಉಚಿತ ಪಠ್ಯ ಪುಸ್ತಕ ಹಾಗೂ ಬಟ್ಟೆ ವಿತರಣೆ, ಮತ್ತು ವಿವಿಧ ವಿದ್ಯಾರ್ಥಿ ವೇತನಗಳನ್ನು ಸಹ ನೀಡಲಾಗುತ್ತದೆ ಎಂದು ಹೇಳಿಕೊಂಡಿದ್ದಾರೆ. ಅದರಂತೆ ಬಳ್ಳಾರಿ ತಾಲೂಕಿನ

ಶ್ರೀದರಗಡ್ಡೆ ಗ್ರಾಮ ಪಂಚಾಯಿತಿಯ ಶಾಲೆಯಲ್ಲಿ ಶೇ. ೧೦೦ಕ್ಕೆ ಶೇ. ೧೦೦ರಷ್ಟು ಶಾಲೆಯಲ್ಲಿ ಮದ್ಯಾಹ್ನದ ಬಿಸಿಯೂಟ, ಉಚಿತ ಪಠ್ಯ ಪುಸ್ತಕ ಹಾಗೂ ಬಟ್ಟೆ ವಿತರಣೆ, ಮತ್ತು ವಿವಿಧ ವಿದ್ಯಾರ್ಥಿ ವೇತನಗಳನ್ನು ಸಹ ನೀಡಲಾಗುತ್ತದೆ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯ ಶಾಲೆಯಲ್ಲಿ ಶೇ. ೧೦೦ಕ್ಕೆ ಶೇ. ೧೦೦ರಷ್ಟು ಶಾಲೆಯಲ್ಲಿ ಮದ್ಯಾಹ್ನದ ಬಿಸಿಯೂಟ, ಉಚಿತ ಪಠ್ಯ ಪುಸ್ತಕ ಹಾಗೂ ಬಟ್ಟೆ ವಿತರಣೆ, ಮತ್ತು ವಿವಿಧ ವಿದ್ಯಾರ್ಥಿ ವೇತನಗಳನ್ನು ಸಹ ನೀಡಲಾಗುತ್ತದೆ ಎಂದು ಸಂದರ್ಶನಗೊಂಡ ಸದಸ್ಯರು ಹೇಳಿಕೊಂಡಿರುವುದು ಅಧ್ಯಯನದಲ್ಲಿ ತಿಳಿಯಲಾಗುತ್ತದೆ.

ಒಟ್ಟಾರೆಯಾಗಿ, ಎರಡು ತಾಲೂಕಿನ ಗ್ರಾಮ ಪಂಚಾಯಿತಿಯ ಶಾಲೆಯ ಶಿಕ್ಷಕರು ತಮ್ಮ ತಮ್ಮ ಶಾಲೆಯಲ್ಲಿ ಸರ್ಕಾರದಿಂದ ಸಿಗುವ ಎಲ್ಲಾ ಸೌಲಭ್ಯಗಳು ನಿಯಮಿತವಾಗಿ ಬಂದರೂ ಅವುಗಳ ಬಳಕೆಯು ಸರಿಸುಮಾರು ಸಮನಾಂತರವಾಗಿ ಆದರೂ ಅವುಗಳ ಬಳಕೆಯಲ್ಲಿ ಮಾತ್ರ ಪಾಲಕರಲ್ಲಿ ಸಮರ್ಥವಾಗಿ ಆಗುತ್ತಿಲ್ಲ ಎಂದು ಹೇಳಲಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಆದರೆ ಸೌಲಭ್ಯಗಳನ್ನು ಪಡೆದುಕೊಳ್ಳುವಲ್ಲಿ ಸಮವಾಗಿ ಇದ್ದರೂ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿ ಹೊರತುಪಡಿಸಿ ಉಳಿದ ಪಂಚಾಯಿತಿಗಳು ಸಮರ್ಥವಾಗಿ ಬಳಕೆ ಮಾಡಿಕೊಂಡು ಮಕ್ಕಳಿಗೆ ಅಕ್ಷರವನ್ನು ಕಲಿಸುವಲ್ಲಿ ಸಾಪೇಕ್ಷವಾಗಿ ಯಶಸ್ವಿಗೊಂಡಿದ್ದಾರೆ ಎಂದು ಹೇಳಲಾಗಿದೆ. ಆದರೆ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯ ಪಾಲಕರು ಮೂಲಭೂತ ಸೌಲಭ್ಯವನ್ನು ಪಡೆದುಕೊಂಡರು ತಮ್ಮ ಮಕ್ಕಳ ಶಿಕ್ಷಣವನ್ನು ಸುಧಾರಿಸುವಲ್ಲಿ ವಿಫಲಗೊಂಡಿದ್ದು ಅಭಿವೃದ್ಧಿಯನ್ನು ಕಾಣದೇ ದುಃಸ್ಥಿತಿಯನ್ನು ಅನುಭವಿಸಿದ್ದಾರೆ ಎಂದು ತಿಳಿದು ಬಂದಿದೆ. ಅಲ್ಲದೇ, ಜಿಲ್ಲೆಯಲ್ಲಿ ಹಿಂದುಳಿದ ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಬಿಸಿ ಊಟದ ಬಗ್ಗೆ ಹೆಚ್ಚಿನ ಪ್ರಮಾಣದಲ್ಲಿ ಅತೃಪ್ತಿಯನ್ನು ಹೊಂದಿದ್ದಾರೆ ಎನ್ನಲಾಗಿದೆ. ಈ ನಿಟ್ಟಿನಲ್ಲಿ ಶಾಲೆಯ ಮೇಲುಸ್ತುವಾರಿ ಸಮಿತಿಯ ಸದಸ್ಯರು ಸರಿಯಾದ ರೀತಿಯಲ್ಲಿ ಪರಿಗಣಿಸಿ ರಾಜ್ಯ ಸರ್ಕಾರಕ್ಕೆ ಬೆಂಬಲಿಸುವುದರೊಂದಿಗೆ ವಿಶೇಷವೆಂದು ಪರಿಗಣಿಸಿ ಅತೃಪ್ತಿಯನ್ನು ಹೊಂದಿರುವ ಶಾಲೆಯಲ್ಲಿ ಉತ್ತಮ ರೀತಿಯ ಬಿಸಿ ಊಟವನ್ನು ಕೊಡಿಸಲು ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳುವುದರೊಂದಿಗೆ ಮಕ್ಕಳ ಬದುಕನ್ನು ರೂಪಿಸುವುದರ ಮೂಲಕ ದುಃಸ್ಥಿತಿಯಿಂದ ಅಭಿವೃದ್ಧಿಯನ್ನು ಮಾಡುವ ಅವಶ್ಯಕತೆ ಇದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ-೨೦ : ಕುಡಿಯುವ ನೀರಿನ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ನೀರು ಸರಬರಾಜು ವ್ಯವಸ್ಥೆ ಇದೆಯಾ? | ಇದೆ | ೨೮ | ೫೬ | ೩೪ | ೬೮ | ೩೬ | ೭೨ | ೩೭ | ೭೪ |
| | ಇಲ್ಲ | ೨೨ | ೪೪ | ೧೬ | ೩೨ | ೧೪ | ೨೮ | ೧೩ | ೨೬ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಎರಡು ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ವಾಸಿಸುವ ಜನರಿಗೆ ಕುಡಿಯುವ ನೀರಿನ ವ್ಯವಸ್ಥೆಯ ಬಗ್ಗೆ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೫೬.೦೦ರಷ್ಟು ಕುಟುಂಬಗಳು ನೀರು ಸೌಲಭ್ಯವನ್ನು ಮಾಡಿಕೊಂಡಿದ್ದೇವೆ ಎಂದಿದ್ದಾರೆ. ಅದರಂತೆ, ಶೇ. ೪೪.೦೦ ರಷ್ಟು ಕುಟುಂಬಗಳು ಯಾವ ನೀರಿನ ವ್ಯವಸ್ಥೆಯನ್ನು ಹೊಂದಿಲ್ಲ ಎಂದಿದ್ದಾರೆ. ಬಡಲಡಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ.೬೮.೦೦ರಷ್ಟು ಕುಟುಂಬಗಳು ನೀರು ಸೌಲಭ್ಯವನ್ನು ಮಾಡಿಕೊಂಡಿದ್ದೇವೆ ಎಂದಿದ್ದಾರೆ. ಅದರಂತೆ, ಶೇ.೩೨.೦೦ ರಷ್ಟು ಕುಟುಂಬಗಳು ಯಾವ ನೀರಿನ ವ್ಯವಸ್ಥೆಯನ್ನು ಹೊಂದಿಲ್ಲ ಎಂದಿದ್ದಾರೆ. ಹಾಗೆಯೇ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ.೧೦೦ ರಷ್ಟರಲ್ಲಿ ಶೇ.೭೨.೦೦ರಷ್ಟು ಕುಟುಂಬಗಳು ನೀರು ಸೌಲಭ್ಯವನ್ನು ಮಾಡಿಕೊಂಡಿದ್ದೇವೆ ಎಂದಿದ್ದಾರೆ. ಅದರಂತೆ, ಶೇ.೨೮.೦೦ ರಷ್ಟು ಕುಟುಂಬಗಳು ಯಾವ ನೀರಿನ ವ್ಯವಸ್ಥೆಯನ್ನು ಹೊಂದಿಲ್ಲ ಎಂದಿದ್ದಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ.೭೪.೦೦ರಷ್ಟು ಕುಟುಂಬಗಳು ನೀರು ಸೌಲಭ್ಯವನ್ನು ಮಾಡಿಕೊಂಡಿದ್ದೇವೆ ಎಂದಿದ್ದಾರೆ. ಅದರಂತೆ, ಶೇ.೨೬.೦೦ ರಷ್ಟು ಕುಟುಂಬಗಳು ಯಾವ ನೀರಿನ ವ್ಯವಸ್ಥೆಯನ್ನು ಹೊಂದಿಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ, ಎರಡು ತಾಲೂಕುಗಳನ್ನು ನೋಡಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮೀಣ ಪ್ರದೇಶದ ಜನರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮೀಣ

ಪ್ರದೇಶದಲ್ಲಿ ಕುಡಿಯುವ ನೀರನ್ನು ಹೊಂದಿರುವುದರ ಪ್ರಮಾಣ ಕಡಿಮೆಯಿರುವುದನ್ನು ನೋಡಲಾಗಿದೆ. ಅಂದರೆ, ಸಾಮಾನ್ಯ ಜನರಿಗೆ ನೀಡಿರುವ ಮೂಲಭೂತ ಸೌಲಭ್ಯಗಳನ್ನು ನೋಡಿದಾಗ ಹಿಂದುಳಿದ ತಾಲೂಕಿನ ಗ್ರಾಮಗಳಿಗಿಂತ ಮುಂದುವರಿದ ತಾಲೂಕಿನ ಗ್ರಾಮಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ನೀಡಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಆದರೆ, ಕೂಡ್ಲಿಗಿ ತಾಲೂಕಿನ ಗ್ರಾಮಗಳಲ್ಲಿ ಮುಖ್ಯವಾಗಿ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯನ್ನು ಕಡೆಗಣಿಸಲಾಗಿದೆ ಎಂದು ತಿಳಿದು ಬಂದಿದೆ. ಕೊನೆಯದಾಗಿ, ಇಂತಹ ಒಂದು ತಾರತಮ್ಯವನ್ನು ರಾಜ್ಯ ಸರ್ಕಾರಗಳು ಮನಗಂಡು ಎಲ್ಲಾ ಗ್ರಾಮ ಪಂಚಾಯಿತಿಗಳಲ್ಲಿ ವಾಸಿಸುವ ಜನ ಜನರೇ ಹೊರತಾಗಿ ಮೃಗಗಳಲ್ಲಾ ಎನ್ನುವಂತ ಮನೋಭಾವನೆಯನ್ನು ಹೊಂದಿ ಅಭಿವೃದ್ಧಿಯಲ್ಲಿ ಸಮತೋಲನವನ್ನು ಕಾಣಬೇಕಾದ ಅವಶ್ಯಕತೆಯಿದೆ ಎಂದು ತಿಳಿದು ಬಂದಿದೆ.

**ಕೋಷ್ಟಕ–೨೧: ಕುಡಿಯುವ ನೀರಿನ ಗುಣಮಟ್ಟದ ವಿವರ:–**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ನೀರಿನ ಗುಣಮಟ್ಟ ಹೇಗಿದೆ? | ಉತ್ತಮ | ೧೨ | ೨೪ | ೧೬ | ೩೨ | ೨೦ | ೪೦ | ೨೨ | ೪೪ |
| | ಉತ್ತಮವಾಗಿಲ್ಲ | ೧೮ | ೩೬ | ೧೬ | ೩೨ | ೧೦ | ೨೦ | ೧೦ | ೨೦ |
| | ಪರವಾಗಿಲ್ಲ | ೨೦ | ೪೦ | ೧೮ | ೩೬ | ೨೦ | ೪೦ | ೧೮ | ೩೬ |
| ಒಟ್ಟು | | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬–೧೭

ಈ ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಎರಡು ತಾಲೂಕಿನಲ್ಲಿ ವಾಸಿಸುವ ಜನರಿಗೆ ಕುಡಿಯುವ ನೀರಿನ ಗುಣಮಟ್ಟದ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೨೪.೦೦ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಉತ್ತಮವಾಗಿದೆ ಎಂದಿದ್ದಾರೆ. ಅದರಂತೆ, ಶೇ. ೩೬.೦೦ ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಉತ್ತಮವಾಗಿಲ್ಲ ಎಂದಿದ್ದಾರೆ.

ಅಂತೆಯೇ, ಶೇ. ೪೦.೦೦ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಪರವಾಗಿಲ್ಲ ಎಂದು ಹೇಳಿಕೊಂಡಿದ್ದಾರೆ. ಒಡೇಲಡುಕು ಗ್ರಾಮ ಪಂಚಾಯಿತಿಯಲ್ಲಿ ಶೇ.೧೦೦ ರಷ್ಟರಲ್ಲಿ ಶೇ. ೩೨.೦೦ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಉತ್ತಮವಾಗಿದೆ ಎಂದಿದ್ದಾರೆ. ಅದರಂತೆ, ಶೇ.೩೨.೦೦ ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಉತ್ತಮವಾಗಿಲ್ಲ ಎಂದಿದ್ದಾರೆ. ಅಂತೆಯೇ, ಶೇ. ೩೬.೦೦ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಪರವಾಗಿಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀದರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೪೦.೦೦ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಉತ್ತಮವಾಗಿದೆ ಎಂದಿದ್ದಾರೆ. ಅದರಂತೆ, ಶೇ. ೨೦.೦೦ ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಉತ್ತಮವಾಗಿಲ್ಲ ಎಂದಿದ್ದಾರೆ. ಅಂತೆಯೇ, ಶೇ. ೪೦.೦೦ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಪರವಾಗಿಲ್ಲ ಎಂದು ಹೇಳಿಕೊಂಡಿದ್ದಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೪೪.೦೦ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಉತ್ತಮವಾಗಿದೆ ಎಂದಿದ್ದಾರೆ. ಅದರಂತೆ, ಶೇ. ೨೦.೦೦ ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಉತ್ತಮವಾಗಿಲ್ಲ ಎಂದಿದ್ದಾರೆ. ಅಂತೆಯೇ, ಶೇ. ೩೬.೦೦ರಷ್ಟು ಕುಟುಂಬಗಳು ನೀರಿನ ಗುಣಮಟ್ಟ ಪರವಾಗಿಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳನ್ನು ನೋಡಿದಾಗ ಸರಿಸುಮಾರು ನೀರಿನ ಗುಣಮಟ್ಟ ಉತ್ತಮವಾಗಿರುವುದರ ಫಲಿತಾಂಶ ಕಡಿಮೆ ಪ್ರಮಾಣದಲ್ಲಿದ್ದು, ಪರವಾಗಿಲ್ಲ ಎಂಬ ಅಂಶವು ಹೆಚ್ಚಿನ ಪ್ರಮಾಣದಲ್ಲಿದೆ ಎನ್ನಲಾಗಿದೆ. ಅಂದರೆ, ನೀರು ಸರಬುರಾಜು ಮಾಡುವುದು ಒಂದೇ ಅಲ್ಲ ಅದರ ಜೊತೆಗೆ ನೀರನ್ನು ಗುಣಮಟ್ಟದ ರೀತಿಯಲ್ಲಿ ಸರಬುರಾಜು ಮಾಡಬೇಕಾಗುತ್ತದೆ. ಅಂದರೆ, ನೀರು ಎಷ್ಟೇ ಪ್ರಮಾಣದಲ್ಲಿದ್ದರೂ ಅದನ್ನು ಬಳಸಲು ಉಪಯುಕ್ತ ಇದ್ದಾಗ ಮಾತ್ರ ಅದರಿಂದ ಸಮಾಜದಲ್ಲಿರುವ ಎಲ್ಲಾರೂ ಬೆಳವಣೆಗೆಯನ್ನು ಕಾಣಬಹುದಾಗಿದೆ. ಇಂತಹ ಒಂದು ವಾತಾವರಣವನ್ನು ಪರಿಗಣಿಸಿದಾಗ ಪ್ರತಿಯೊಬ್ಬ ಪ್ರಜೆಯು ನೀರು ಪಡೆಯುವುದಲ್ಲದೆ ಗುಣಮಟ್ಟದ ನೀರನ್ನು ಪಡೆದಾಗ ಮಾತ್ರ ಅಭಿವೃದ್ಧಿಯ ಒಂದು ಮಾನದಂಡವಾದ ಉತ್ತಮವಾದ ಆರೋಗ್ಯವನ್ನು ಪಡೆಯುವ ಮೂಲಕ ಗ್ರಾಮದ ಜನರು ಮತ್ತು ಗ್ರಾಮ ಪಂಚಾಯತಿಗಳು ಗ್ರಾಮೀಣ ಪ್ರದೇಶಗಳನ್ನು ಪ್ರಗತಿಯ ಹಂತಕ್ಕೆ ಒಯ್ಯುವಂತಹ ವಾತವಾರಣವನ್ನು ನಿರ್ಮಾಣ ಮಾಡಬೇಕಾದ ಅವಶ್ಯಕತೆಯಿದೆ ಎಂದು ತಿಳಿದು ಬಂದಿದೆ.

**ಕೋಷ್ಟಕ-೨೨: ಬಳಕೆಯ ನೀರಿನ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ನಿಮ್ಮ ಬಳಕೆಗೆ ಸಾಕಷ್ಟು ನೀರು ಪೂರೈಕೆಯಾಗುತ್ತದೆಯಾ? | ಆಗುತ್ತದೆ | ೨೧ | ೪೨ | ೧೯ | ೩೮ | ೨೨ | ೪೪ | ೨೪ | ೪೮ |
| | ಇಲ್ಲ | ೨೯ | ೫೮ | ೩೧ | ೬೨ | ೨೮ | ೫೬ | ೨೬ | ೫೨ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಎರಡು ತಾಲೂಕಿನಲ್ಲಿ ವಾಸಿಸುವ ಜನರಿಗೆ ಕುಡಿಯುವ ನೀರು ಬಳಕೆಯ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೪೨.೦೦ರಷ್ಟು ಕುಟುಂಬಗಳು ನೀರಿನ ಪೂರೈಕೆ ಸಾಕಷ್ಟು ಆಗುತ್ತದೆ ಎಂದಿದ್ದಾರೆ. ಅದರಂತೆ, ಶೇ. ೫೮.೦೦ ರಷ್ಟು ಕುಟುಂಬಗಳು ನೀರಿನ ಸೌಲಭ್ಯದಿಂದ ಸಾಕಷ್ಟು ಪೂರೈಕೆಯಾಗುವುದಿಲ್ಲ ಎಂದಿದ್ದಾರೆ. ಬಡೇಲಡುಕು ಗ್ರಾಮ ಪಂಚಾಯಿತಿಯಲ್ಲಿ ಶೇ.೧೦೦ ರಷ್ಟರಲ್ಲಿ ಶೇ. ೩೮.೦೦ರಷ್ಟು ಕುಟುಂಬಗಳು ನೀರಿನ ಪೂರೈಕೆ ಸಾಕಷ್ಟು ಆಗುತ್ತದೆ ಎಂದಿದ್ದಾರೆ. ಅದರಂತೆ, ಶೇ.೬೨.೦೦ರಷ್ಟು ಕುಟುಂಬಗಳು ನೀರಿನ ಸೌಲಭ್ಯದಿಂದ ಸಾಕಷ್ಟು ಪೂರೈಕೆಯಾಗುವುದಿಲ್ಲ ಎಂದಿದ್ದಾರೆ. ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೪೪.೦೦ರಷ್ಟು ಕುಟುಂಬಗಳು ನೀರಿನ ಪೂರೈಕೆ ಸಾಕಷ್ಟು ಆಗುತ್ತದೆ ಎಂದಿದ್ದಾರೆ. ಅದರಂತೆ, ಶೇ. ೬೬.೦೦ರಷ್ಟು ಕುಟುಂಬಗಳು ನೀರಿನ ಸೌಲಭ್ಯದಿಂದ ಸಾಕಷ್ಟು ಪೂರೈಕೆಯಾಗುವುದಿಲ್ಲ ಎಂದಿದ್ದಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೪೮.೦೦ರಷ್ಟು ಕುಟುಂಬಗಳು ನೀರಿನ ಪೂರೈಕೆ ಸಾಕಷ್ಟು ಆಗುತ್ತದೆ ಎಂದಿದ್ದಾರೆ. ಅದರಂತೆ, ಶೇ. ೫೨.೦೦ರಷ್ಟು ಕುಟುಂಬಗಳು ನೀರಿನ ಸೌಲಭ್ಯದಿಂದ ಸಾಕಷ್ಟು ಪೂರೈಕೆಯಾಗುವುದಿಲ್ಲ ಎಂದಿದ್ದಾರೆ.

ಒಟ್ಟಾರೆಯಾಗಿ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳ ಮಾಹಿತಿಯನ್ನು ಗಮನಿಸಿದಾಗ ಹಿಂದುಳಿದ ಕೂಡ್ಲಿಗಿ ತಾಲೂಕುಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನಲ್ಲಿಯೇ ಹೆಚ್ಚಿನ ನೀರಿನ ಪ್ರಮಾಣವಿರುವುದನ್ನು ಕಾಣಲಾಗಿದೆ. ಇಲ್ಲಿ ಗಮನಿಸಬೇಕಾದ

ಸಂಗತಿಯೆಂದರೆ, ಇವೆರಡು ತಾಲೂಕಿನ ಗ್ರಾಮೀಣ ಪ್ರದೇಶದಲ್ಲಿ ಹಿಂದುಳಿದ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಕಡೆಗಣಿಸಿರುದನ್ನು ನೋಡಲಾಗಿದೆ. ಮುಂದುವರಿದ ತಾಲೂಕಿನಲ್ಲಿ ಗ್ರಾಮ ಪಂಚಾಯಿತಿಗಳ ಮಾಹಿತಿಯ ಹಿನ್ನೆಲೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಸಾಮಾನ್ಯ ಜನರಿಗೆ ಆದ್ಯತೆಯನ್ನು ನೀಡಲಾಗಿದೆ ಎಂದು ತಿಳಿಯಲಾಗಿದೆ. ಕುಡಿಯುವ ನೀರನ್ನು ಸಾಕಷ್ಟು ಪ್ರಮಾಣದಲ್ಲಿ ಪಡೆಯುವುದು ಮಾನವನ ಹಕ್ಕು ಅದರಲ್ಲಿ ಯಾವ ತಾರತಮ್ಯ ಎಸಗದೆ ನೀರನ್ನು ಸಮರ್ಪಕವಾಗಿ ಯಾರನ್ನು ಕಡೆಗಣಿಸದೆ ಎಲ್ಲರಿಗೂ ಸಮ ಪ್ರಮಾಣದಲ್ಲಿ ಪೂರೈಕೆ ಮಾಡುವುದು ಅಗತ್ಯವಿದೆ ಎಂದು ತಿಳಿದುಬಂದಿದೆ.

**ಕೋಷ್ಟಕ–೨೩: ನೀರಿನ ಸಂಪನ್ಮೂಲಗಳ ಬಳಕೆಯ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಆ ಸಂದರ್ಭದಲ್ಲಿ ನಿಮ್ಮ ನೀರಿನ ಸಮಸ್ಯೆಗೆ ಪರ್ಯಾಯ ಮಾರ್ಗ ಕಂಡುಕೊಂಡಿದ್ದೀರಿ? | ಕೊಳವೆ ಬಾವಿ | ೧೯ | ೩೮ | ೧೭ | ೩೪ | ೧೦ | ೨೦ | ೯ | ೧೮ |
| | ಸಾರ್ವಜನಿಕ ನಳ | ೨೧ | ೪೨ | ೨೩ | ೪೬ | ೩೫ | ೭೦ | ೩೬ | ೭೨ |
| | ವಾಟರ್ ಟ್ಯಾಂಕ್ | ೧೦ | ೨೦ | ೧೦ | ೨೦ | ೫ | ೧೦ | ೫ | ೧೦ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬–೧೭

ಈ ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಜಿಲ್ಲೆಯಲ್ಲಿರುವ ಎರಡು ತಾಲೂಕಿನಲ್ಲಿ ವಾಸಿಸುವ ಜನರಿಗೆ ಕುಡಿಯುವ ನೀರಿನಲ್ಲಿ ಏನಾದರೂ ಸಮಸ್ಯೆ ಉಂಟಾದರೆ ಅದಕ್ಕೆ ಪರಿಹಾರವನ್ನು ಮಾಡಿಕೊಳ್ಳುವುದರ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೩೮.೦೦ರಷ್ಟು ಕುಟುಂಬಗಳು ನೀರಿನ ಸಮಸ್ಯೆಯನ್ನು ಕೊಳವೆ ಬಾವಿಯ ಮುಖಾಂತರ ಪರಿಹರಿಸಿಕೊಳ್ಳುತ್ತೇವೆ ಎಂದಿದ್ದಾರೆ. ಅದರಂತೆ, ಶೇ. ೪೨.೦೦ರಷ್ಟು ಕುಟುಂಬಗಳು ನೀರಿನ ಸಮಸ್ಯೆ ಬಂದಾಗ ಸಾರ್ವಜನಿಕ ನಳ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತೇವೆ ಎಂದಿದ್ದಾರೆ. ಅಂತೆಯೇ, ಶೇ. ೨೦.೦೦ ವಾಟರ್ ಟ್ಯಾಂಕ್‌ನ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತೇವೆ ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಬಡೇಲಡುಕು ಗ್ರಾಮ ಪಂಚಾಯಿತಿಯಲ್ಲಿ ಶೇ.

೧೦೦ ರಷ್ಟರಲ್ಲಿ ಶೇ. ೩೪.೦೦ರಷ್ಟು ಕುಟುಂಬಗಳು ನೀರಿನ ಸಮಸ್ಯೆಯನ್ನು ಕೊಳವೆ ಬಾವಿಯ ಮುಖಾಂತರ ಪರಿಹರಿಸಿಕೊಳ್ಳುತ್ತೇವೆ ಎಂದಿದ್ದಾರೆ. ಅದರಂತೆ, ಶೇ. ೪೬.೦೦ರಷ್ಟು ಕುಟುಂಬಗಳು ನೀರಿನ ಸಮಸ್ಯೆ ಬಂದಾಗ ಸಾರ್ವಜನಿಕ ನಳ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತೇವೆ ಎಂದಿದ್ದಾರೆ. ಅಂತೆಯೇ, ಶೇ. ೨೦.೦೦ ವಾಟರ್ ಟ್ಯಾಂಕ್‌ನ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತೇವೆ ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಬಳ್ಳಾರಿ ತಾಲೂಕಿನ ಶ್ರೀದರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೨೦.೦೦ರಷ್ಟು ಕುಟುಂಬಗಳು ನೀರಿನ ಸಮಸ್ಯೆಯನ್ನು ಕೊಳವೆ ಬಾವಿಯ ಮುಖಾಂತರ ಪರಿಹರಿಸಿಕೊಳ್ಳುತ್ತೇವೆ ಎಂದಿದ್ದಾರೆ. ಅದರಂತೆ, ಶೇ. ೭೦.೦೦ರಷ್ಟು ಕುಟುಂಬಗಳು ನೀರಿನ ಸಮಸ್ಯೆ ಬಂದಾಗ ಸಾರ್ವಜನಿಕ ನಳದ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತೇವೆ ಎಂದಿದ್ದಾರೆ. ಅಂತೆಯೇ, ಶೇ.೧೦.೦೦ ವಾಟರ್ ಟ್ಯಾಂಕ್‌ನ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತೇವೆ ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ ರಷ್ಟರಲ್ಲಿ ಶೇ. ೧೮.೦೦ರಷ್ಟು ಕುಟುಂಬಗಳು ನೀರಿನ ಸಮಸ್ಯೆಯನ್ನು ಕೊಳವೆ ಬಾವಿಯ ಮುಖಾಂತರ ಪರಿಹರಿಸಿಕೊಳ್ಳುತ್ತೇವೆ ಎಂದಿದ್ದಾರೆ. ಅದರಂತೆ, ಶೇ. ೭೨.೦೦ರಷ್ಟು ಕುಟುಂಬಗಳು ನೀರಿನ ಸಮಸ್ಯೆ ಬಂದಾಗ ಸಾರ್ವಜನಿಕ ನಳ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತೇವೆ ಎಂದಿದ್ದಾರೆ. ಅಂತೆಯೇ, ಶೇ. ೧೦.೦೦ ವಾಟರ್ ಟ್ಯಾಂಕ್‌ನ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತೇವೆ ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಅಂಕಿ-ಅಂಶಗಳನ್ನು ನೋಡಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಮಚಾಯಿತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೊಳವೆ ಬಾವಿಯನ್ನು ಅವಲಂಬಿಸಿರುವುದನ್ನು ಕಾಣಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಬೇಸಿಗೆ ಮತ್ತು ವಿದ್ಯುತ್ತಿನ ಸಮಸ್ಯೆಯ ಸಂದರ್ಭದಲ್ಲಿ ಹಿಂದುಳಿದ ಗ್ರಾಮ ಪಂಚಾಯಿತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಪ್ರತ್ಯೇಕ ನಳಗಳನ್ನು ಹೊಂದದೆ ಇರುವುದರಿಂದ ಸಾರ್ವಜನಿಕ ನಳಗಳಿಗೆ ಸರಬುರಾಜು ಮಾಡುವ ವ್ಯವಸ್ಥೆ ಸಮರ್ಪಕವಾಗಿ ಇಲ್ಲದೆಯಿರುವುದರಿಂದ ಕೊಳವೆ ಬಾವಿಗಳಿಗೆ ಹೋಗಿ ನೀರನ್ನು ತೆಗೆದುಕೊಂಡು ಬರುವ ವ್ಯವಸ್ಥೆಯನ್ನು ಮಾಡಿಕೊಂಡಿರುವುದು ತಿಳಿದು ಬರುತ್ತದೆ. ಅಲ್ಲದೇ, ಇಂತಹ ನೀರಿನ ಸಮಸ್ಯೆಯನ್ನು ಬಗೆಹರಿಸಲು ಇಲ್ಲಿ ಸಮರ್ಪಕವಾದ ನೀರನ್ನು ಬಿಡುವ ವ್ಯವಸ್ಥೆಯನ್ನು ಮಾಡದೆ ಇರುವುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ. ಕೊನೆಯದಾಗಿ, ಸರ್ಕಾರದಿಂದ ಹಲವು ನೀರು ಪೂರೈಕೆ ಮಾಡುವಂತಹ ಯೋಜನೆಗಳಿದ್ದು, ಸರಕಾರದ ನಿಯಮಾವಳಿ ಪ್ರಕಾರ ಸಮರ್ಪಕವಾಗಿ ನೀರು ಪೂರೈಕೆಯಾಗುವ ಹಂತದಲ್ಲಿದೆಯೇ

ಇದೆ ಹೊರತು ಯಾವ ಪ್ರಗತಿಯನ್ನು ಕಂಡುಕೊಂಡಿಲ್ಲ ಎನ್ನಲಾಗಿದೆ. ಆದರೆ ಅದು ದಾಖಲೆಯಲ್ಲಿ ಮಾತ್ರವಿದ್ದು ಯಾವುದೇ ಸಮರ್ಪಕ ನಿರ್ವಹಣೆಯ ಅನುಷ್ಠಾನದಲ್ಲಿ ಇಲ್ಲದಿರುವುದು ತಿಳಿದು ಬಂದಿದೆ. ಅಂದಹಾಗೆ, ನೀರು ಪೊರೈಕೆ ನಿರ್ವಹಣೆಯಲ್ಲಿ ಗುಣಮಟ್ಟದ ಬದಲಾವಣೆಯನ್ನು ತರುವುದರ ಮೂಲಕ ನೀರು ಪೊರೈಕೆಯಲ್ಲಿ ತುರ್ತು ಕಾರ್ಯ ನಿರ್ವಹಿಸಬೇಕಾದ ಅಗತ್ಯತೆ ಹಿಂದುಳಿದ ಗ್ರಾಮ ಪಂಚಾಯಿತಿಗಳಿಗೆ ಮಾಡಬೇಕು ಎಂದು ತಿಳಿಯಬಹುದಾಗಿದೆ.

**ಕೋಷ್ಟಕ-೨೪: ರಸ್ತೆಗಳ ವಿವರ-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಗ್ರಾಮ ಪಂಚಾಯಿತಿಯಿಂದ ರಸ್ತೆಗಳು ನಿರ್ಮಾಣಗೊಂಡಿದೆಯಾ? | ಹೌದು | ೧೬ | ೩೨ | ೨೪ | ೪೮ | ೩೬ | ೭೨ | ೩೨ | ೬೪ |
| | ಇಲ್ಲ | ೩೪ | ೬೮ | ೨೬ | ೫೨ | ೧೪ | ೨೮ | ೧೮ | ೩೬ |
| ಒಟ್ಟು | | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ತೋರಿಸಲಾದ ಅಂಕಿ-ಅಂಶಗಳನ್ನು ಪರಿಗಣಿಸಿದಾಗ ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳ ರಸ್ತೆಗಳ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೩೨.೦೦ರಷ್ಟು ರಸ್ತೆಗಳು ನಿರ್ಮಾಣಗೊಂಡಿವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ. ೬೮.೦೦ರಷ್ಟು ರಸ್ತೆಗಳು ನೀರ್ಮಾಣಗೊಂಡಿಲ್ಲ ಎಂದು ಹೇಳಿಕೊಂಡಿದ್ದಾರೆ. ಅಲ್ಲದೇ, ಬಡೇಲಡುಕು ಗ್ರಾಮ ಪಂಚಾಯಿತಿಯಲ್ಲಿ ಶೇ.೧೦೦ರಷ್ಟರಲ್ಲಿ ಶೇ.೪೮.೦೦ರಷ್ಟು ರಸ್ತೆಗಳು ನೀರ್ಮಾಣಗೊಂಡಿವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ.೫೨.೦೦ರಷ್ಟು ರಸ್ತೆಗಳು ನಿರ್ಮಾಣಗೊಂಡಿಲ್ಲ

ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ.೧೦೦ರಷ್ಟರಲ್ಲಿ ಶೇ.೭೨.೦೦ರಷ್ಟು ರಸ್ತೆಗಳು ನೀರ್ಮಾಣಗೊಂಡಿವೆ ಎಂದು ಹೇಳಿಕೊಂಡಿದ್ದರೆ.

ಹಾಗೆಯೇ, ಶೇ. ೨೮.೦೦ರಷ್ಟು ರಸ್ತೆಗಳು ನಿರ್ಮಾಣಗೊಂಡಿಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ.೬೪.೦೦ರಷ್ಟು ರಸ್ತೆಗಳು ನಿರ್ಮಾಣಗೊಂಡಿವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ.೩೬.೦೦ರಷ್ಟು ರಸ್ತೆಗಳು ನಿರ್ಮಾಣಗೊಂಡಿಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಅಂಶಗಳನ್ನು ಪರಿಗಣಿಸಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು ರಸ್ತೆ ನಿರ್ಮಾಣಗೊಳ್ಳುವಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಹಿಂದೆ ಉಳಿದಿರುವುದು ಕ್ಷೇತ್ರಕಾರ್ಯ ಅಧ್ಯಯನದಲ್ಲಿ ತಿಳಿದು ಬಂದಿದೆ. ಅದರಲ್ಲಿ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ಅತ್ಯಂತ ಹೀನಾಯವಾದ ರಸ್ತೆಗಳನ್ನು ಹೊಂದಿರುವುದು ನಾವು ಹೋಗಿ ಆ ಗ್ರಾಮವನ್ನು ನೋಡಿದಾಗ ಮತ್ತು ಪಂಚಾಯಿತಿಯವರು ಆ ಗ್ರಾಮದ ಬಗ್ಗೆ ಇರುವ ಕಾಳಜಿಯನ್ನು ವಹಿಸುವಲ್ಲಿ ತಿಳಿದಾಗನೇ ಗೊತ್ತಾಗಿದ್ದು ಎನ್ನಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಗ್ರಾಮ ಪಂಚಾಯಿತಿಗಳ ಮೂಲಕ ಗ್ರಾಮಗಳ ಅಭಿವೃದ್ಧಿಯನ್ನು ಕಾಣಲು ಸಾಧ್ಯ. ಅದರಲ್ಲಿ ಅಭಿವೃದ್ಧಿಯ ಮಾನದಂಡವಾದ ರಸ್ತೆಗಳ ನೀರ್ಮಾಣವು ಒಂದು. ಹಾಗಾಗಿ ಇವುಗಳನ್ನು ಬಳ್ಳಾರಿ ತಾಲೂಕಿನ ಗ್ರಾಮಾ ಪಂಚಾಯಿತಿಗೆ ಹೋಲಿಕೆ ಮಾಡಿದಾಗ ಕೂಡ್ಲಿಗಿ ತಾಲೂಕಿನ ಪಂಚಾಯಿತಿಗಳ ಅಭಿವೃದ್ಧಿಯಾಗಿರುವುದು ಕಣ್ಣಿಗೆ ರಾಚುತ್ತದೆ. ಹಾಗಾಗಿ ಮೇಲಿನ ಅಂಶಗಳನ್ನು ಪರಿಗಣಿಸಿ ರಸ್ತೆಗಳ ನಿರ್ಮಾಣಕ್ಕೆ ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ತುಂಬಾ ಅನುದಾನ ಬರುತ್ತದೆ ಆದರೆ ಅದರ ಬಳಕೆ ಸಮರ್ಪಕವಾಗಿ ಆಗದೆ ಅದು ಬೇಕಾದಂತೆ ಪೋಲಾಗುತ್ತದೆ. ಇಂತಹ ಒಂದು ವ್ಯವಸ್ಥೆಯು ಎಲ್ಲ ಪ್ರದೇಶಗಳಲ್ಲಿ ಇರುತ್ತೆ ಆದರೆ ಇಲ್ಲಿರುವ ಪಂಚಾಯಿತಿ ಸದಸ್ಯರು ಅಕ್ಷರದ ಕೊರತೆ, ಯೋಜನೆಗಳನ್ನು ಸರ್ಮಕವಾಗಿ ಜಾರಿಗೆ ತರುವುದರಲ್ಲಿ ವಿಫಲತೆಯನ್ನು ಕಾಣುವುದು ಇನ್ನು ಮುಂತಾದ ಅಂಶಗಳಿಂದ ಈ ಕೂಡ್ಲಿಗಿ ತಾಲೂಕಿನ ಪಂಚಾಯಿತಿಗಳು ಹಿಂದುಳಿಯಲಿಕ್ಕೆ ಕಾರಣವಾಗಿವೆ. ಇಂತಹವುಗಳಿಗೆ ಸರಿಯಾದ ಅಧಿಕಾರಿ ವರ್ಗ ಮತ್ತು ಗ್ರಾಮದ ಬಗ್ಗೆ ಕಾಳಜಿ ಇರುವ ಸದಸ್ಯರನ್ನು ನೇಮಕ ಮಾಡುವಂತಹ ಕೇಲಸ ಆಗಬೇಕಾದ ಅನಿವಾರ್ಯತೆ ಇದೆ ಎಂದು ತಿಳಿಯಲಾಗಿದೆ.

ಕೋಷ್ಟಕ-೨೫: ರಸ್ತೆಗಳ ವಿವರ:-

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ. |
| ಹೌದಾದರೆ? ರಸ್ತೆಗಳು ನಿರ್ಮಾಣಗೊಂಡು ಎಷ್ಟು ವರ್ಷಗಳಾಯಿತು? | ಹೌದು | ೮ | ೧೬ | ೨೯ | ೫೮ | ೧೮ | ೩೬ | ೧೮ | ೩೬ |
| | ಇಲ್ಲ | ೪೨ | ೮೪ | ೨೧ | ೪೨ | ೩೨ | ೬೪ | ೩೨ | ೬೪ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ತೋರಿಸಲಾದ ಅಂಕಿ-ಅಂಶಗಳನ್ನು ಪರಿಗಣಿಸಿದಾಗ ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳ ರಸ್ತೆಗಳ ಮಾದರಿ ಯಾವುದು ಎಂಬುದರ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ.೧೦೦ರಷ್ಟರಲ್ಲಿ ಶೇ.೧೬.೦೦ರಷ್ಟು ರಸ್ತೆಗಳು ಸಿ. ಸಿ. ರಸ್ತೆಗಳಾಗಿವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ.೮೪.೦೦ರಷ್ಟು ರಸ್ತೆಗಳು ಸಿ.ಸಿ. ರಸ್ತೆಗಳು ಇಲ್ಲಾ ಎಂದು ಹೇಳಿಕೊಂಡಿದ್ದಾರೆ. ಅಲ್ಲದೇ, ಬಡೇಲಡುಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ.೫೮.೦೦ರಷ್ಟು ರಸ್ತೆಗಳು ಸಿ.ಸಿ. ರಸ್ತೆಗಳಾಗಿ ನಿರ್ಮಾಣಗೊಂಡಿವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ. ೪೨.೦೦ರಷ್ಟು ರಸ್ತೆಗಳು ಸಿ.ಸಿ. ರಸ್ತೆಗಳು ಇಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀದರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೩೬.೦೦ರಷ್ಟು ಸಿ.ಸಿ. ರಸ್ತೆಗಳಾಗಿ ನಿರ್ಮಾಣಗೊಂಡಿವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ.೬೪.೦೦ರಷ್ಟು ಸಿ.ಸಿ. ರಸ್ತೆಗಳು ಇಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೩೬.೦೦ರಷ್ಟು ಸಿ.ಸಿ. ರಸ್ತೆಗಳಾಗಿ ನಿರ್ಮಾಣಗೊಂಡಿವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ.೬೪.೦೦ರಷ್ಟು ಸಿ.ಸಿ. ರಸ್ತೆಗಳಾಗಿ ನಿರ್ಮಾಣಗೊಂಡಿಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಅಂಶಗಳನ್ನು ನೋಡಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ

ಪಂಚಾಯಿತಿಗಳಲ್ಲಿ ಸಿ.ಸಿ. ರಸ್ತೆಗಳನ್ನು ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದಾಗಿದೆ. ಅದರಲ್ಲಿಯೂ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿಯೇ ತೀರಾ ಕಡಿಮೆ ಪ್ರಮಾಣದಲ್ಲಿ ಸರ್ಕಾರದಿಂದ ಮತ್ತು ಪಂಚಾಯಿತಿಯಿಂದ ರಸ್ತೆ ಕಾಮಗಾರಿಗಳು ಹೆಚ್ಚಿನ ಸಂಖ್ಯೆಯಲ್ಲಿ ನಡೆಯದೆ ಇರುವುದನ್ನು ಅಧ್ಯಯನಗಳಿಂದ ತಿಳಿಯಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಕೂಡ್ಲಿಗಿ ತಾಲೂಕಿನ ಪಂಚಾಯಿತಿಗಳಲ್ಲಿ ಆದ ಸಿ.ಸಿ. ರಸ್ತೆಗಳು ಬಹಳ ವರ್ಷಗಳ ಕಾಲದ ಹಿಂದೆಯೇ ನೀರ್ಮಾಣಗೊಂಡಿರುವುದನ್ನು ಕ್ಷೇತ್ರಾಧ್ಯಯನದಲ್ಲಿ ತಿಳಿಯಲಾಗಿದೆ. ಅಂದರೆ ಗ್ರಾಮ ಪಂಚಾಯಿತಿಗಳಲ್ಲಿ ಅಭಿವೃದ್ಧಿ ಕಾರ್ಯಗಳ ಬಗ್ಗೆ ಪ್ರಶ್ನೆ ಮಾಡಿದಾಗ ಅದಕ್ಕೆ ಯಾವ ಸರ್ಕಾರದಿಂದ ಯಾವ ಅನುದಾನ ಬಂದಿಲ್ಲ ಎಂಬ ಉತ್ತರವನ್ನು ಕೊಡುವಂತಹ ಕೆಲಸ ಮಾಡುತ್ತಾರೆ. ಅಂದರೆ, ರಸ್ತೆಗಳು ಸುಸಜ್ಜಿತವಾಗಿ ಇಲ್ಲದೇ ಗ್ರಾಮದಲ್ಲಿ ಚರಂಡಿಯ ನೀರು ಎಲ್ಲೆಂದರಲ್ಲಿ ಹರಿದು ಹಲವು ರೋಗಗಳಿಗೆ ಕಾರಣವಾಗಿ ಗ್ರಾಮೀಣ ಅಭಿವೃದ್ಧಿಯನ್ನು ಕಾಣದೆ ಹಿಂದುಳಿಯುವುದಕ್ಕೆ ಕಾರಣವಾಗಿದೆ ಎಂದು ತಿಳಿಯಲಾಗಿದೆ. ಇಂತಹ ಪ್ರದೇಶದ ಅಭಿವೃದ್ಧಿಯನ್ನು ಕಾಣದ ಪಂಚಾಯಿತಿಗಳನ್ನು ಸರ್ಕಾರಿ ಅಧಿಕಾರಿಗಳಿಂದ ಅಂಕಿ-ಅಂಶಗಳನ್ನು ತೆಗೆದುಕೊಂಡು ವಿಶೇಷವಾದ ನೀತಿ-ಕಾರ್ಯಕ್ರಮ ಗಳನ್ನು ಮಾಡುವ ಮೂಲಕ ಅವುಗಳನ್ನು ತುರ್ತಾಗಿ ಅನುಷ್ಠಾನಗೊಳಿಸುವ ಅವಶ್ಯಕತೆ ಇದೆ ಎಂದು ಹೇಳಿಕೊಳ್ಳಲಾಗಿದೆ.

**ಕೋಷ್ಟಕ-೨೬: ಗ್ರಾಮ ಪಂಚಾಯ್ತಿಗಳ ಸಭೆಗಳ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| ನಿಮ್ಮ ಗ್ರಾಮದ ರಸ್ತೆಗಳಿಗೆ ಸಂಬಂಧಿಸಿದಂತೆ ಸಾಮಾನ್ಯ ಸಭೆ ವಾರ್ಡ್ ಸಭೆ ಮತ್ತು ವಿಶೇಷ ಸಭೆಯಲ್ಲಿ ಚರ್ಚಿಸಿದ್ದಾರೆಯೇ? | ವಿವರಗಳು | ಸಂಖ್ಯೆ | ಶೇ. | ಸಂಖ್ಯೆ | ಶೇ. | ಸಂಖ್ಯೆ | ಶೇ | ಸಂಖ್ಯೆ | ಶೇ. |
| | ಚರ್ಚಿಸಿದ್ದೇವೆ | ೧೮ | ೩೬ | ೩೪ | ೬೮ | ೩೬ | ೭೨ | ೩೮ | ೭೬ |
| | ಇಲ್ಲ | ೩೨ | ೬೪ | ೧೬ | ೩೨ | ೧೪ | ೨೮ | ೧೨ | ೨೪ |
| | ಒಟ್ಟು | ೫೦ | ೧೦೦ | ೫೦ | ೧೦೦ | ೫೦ | ೧೦೦ | ೫೦ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ತೋರಿಸಲಾದ ಅಂಕಿ-ಅಂಶಗಳನ್ನು ನೋಡಿದಾಗ ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳ ರಸ್ತೆಗಳ ಬಗ್ಗೆ ಇರುವ ಸಮಸ್ಯೆಯ ಕುರಿತ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ.೧೦೦ರಷ್ಟರಲ್ಲಿ ಶೇ.೩೬.೦೦ರಷ್ಟು ರಸ್ತೆಗಳ ವಿಷಯಗಳನ್ನು ಸಾಮಾನ್ಯ ಸಭೆ, ಗ್ರಾಮ ಸಭೆ ಮತ್ತು ವಿಶೇಷ ಸಭೆಯಲ್ಲಿ ಚರ್ಚಿಸಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ.೬೪.೦೦ರಷ್ಟು ರಸ್ತೆಗಳ ವಿಷಯಗಳನ್ನು ಸಾಮಾನ್ಯ ಸಭೆ, ಗ್ರಾಮ ಸಭೆ ಮತ್ತು ವಿಶೇಷ ಸಭೆಯಲ್ಲಿ ಚರ್ಚಿಸಿಯೇ ಇಲ್ಲ ಎಂದು ಹೇಳಿಕೊಂಡಿದ್ದಾರೆ. ಅಲ್ಲದೇ, ಬಡೇಲಡುಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೬೮.೦೦ರಷ್ಟು ರಸ್ತೆಗಳ ವಿಷಯಗಳನ್ನು ಸಾಮಾನ್ಯ ಸಭೆ, ಗ್ರಾಮ ಸಭೆ ಮತ್ತು ವಿಶೇಷ ಸಭೆಯಲ್ಲಿ ಚರ್ಚಿಸಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ. ೩೨.೦೦ರಷ್ಟು ರಸ್ತೆಗಳ ವಿಷಯಗಳನ್ನು ಸಾಮಾನ್ಯ ಸಭೆ, ಗ್ರಾಮ ಸಭೆ ಮತ್ತು ವಿಶೇಷ ಸಭೆಯಲ್ಲಿ ಚರ್ಚಿಸಿಯೇ ಇಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೭೨.೦೦ರಷ್ಟು ರಸ್ತೆಗಳ ವಿಷಯಗಳನ್ನು ಸಾಮಾನ್ಯ ಸಭೆ, ಗ್ರಾಮ ಸಭೆ ಮತ್ತು ವಿಶೇಷ ಸಭೆಯಲ್ಲಿ ಚರ್ಚಿಸಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ.೨೮.೦೦ರಷ್ಟು ರಸ್ತೆಗಳ ವಿಷಯಗಳನ್ನು ಸಾಮಾನ್ಯ ಸಭೆ, ಗ್ರಾಮ ಸಭೆ ಮತ್ತು ವಿಶೇಷ ಸಭೆಯಲ್ಲಿ ಚರ್ಚಿಸಿಯೇ ಇಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟರಲ್ಲಿ ಶೇ. ೭೬.೦೦ರಷ್ಟು ರಸ್ತೆಗಳ ವಿಷಯಗಳನ್ನು ಸಾಮಾನ್ಯ ಸಭೆ, ಗ್ರಾಮ ಸಭೆ ಮತ್ತು ವಿಶೇಷ ಸಭೆಯಲ್ಲಿ ಚರ್ಚಿಸಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ. ೨೪.೦೦ರಷ್ಟು ರಸ್ತೆಗಳ ವಿಷಯಗಳನ್ನು ಸಾಮಾನ್ಯ ಸಭೆ, ಗ್ರಾಮ ಸಭೆ ಮತ್ತು ವಿಶೇಷ ಸಭೆಯಲ್ಲಿ ಚರ್ಚಿಸಿಯೇ ಇಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಅಂಶಗಳನ್ನು ನೋಡಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು ತಮ್ಮತಮ್ಮ ಗ್ರಾಮ ಪಂಚಾಯಿತಿಯಲ್ಲಿ ನಡೆಯುವ ಸಾಮಾನ್ಯ ಸಭೆ, ಗ್ರಾಮ ಸಭೆ ಮತ್ತು ವಿಶೇಷ ಸಭೆಗಳಲ್ಲಿ ರಸ್ತೆಗಳ ನಿರ್ಮಾಣದ ಬಗ್ಗೆ ಕಡಿಮೆ ಪ್ರಮಾಣದಲ್ಲಿ ಚರ್ಚೆ ಮಾಡುವುದನ್ನು ಕೇಳಲಾಗಿದೆ. ಅದರಲ್ಲಿಯೂ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ತೀರಾ ಕಡಿಮೆ ಪ್ರಮಾಣದಲ್ಲಿ ಚರ್ಚೆ ಮಾಡುವುದನ್ನು ಕೇಳಲಾಗಿದೆ ಎಂದು ಸಂದರ್ಶಿತಗೊಂಡ ಜನರು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿರುವ ಜನರು ಮತ್ತು ಚುನಾಯಿತಗೊಂಡ ಸದಸ್ಯರು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿದ್ದು ಅಲ್ಲಿಯ

ಪಂಚಾಯಿತಿಗಳಿಗೆ ಮುಖ್ಯವಾಗಿ ಇವುಗಳ ಕೊರತೆ ಹೆಚ್ಚಿನ ಪ್ರಮಾಣದಲ್ಲಿ ಇರುವುದರಿಂದ ಅಭಿವೃದ್ಧಿಯೂ ಅಷ್ಟಕಷ್ಟ ಅಂತೆ ಆಗುತ್ತಿದೆ. ಇಂತಹ ಅಂಶಗಳನ್ನು ವಿಶೇಷವೆಂದು ಪರಿಗಣಿಸಿ ನುರಿತ, ಪ್ರಮಾಣಿಕ ಸರ್ಕಾರಿ ನೌಕರರನ್ನು ಹಾಕುವ ಮೂಲಕ ಗ್ರಾಮೀಣ ಜನರ ಶಿಕ್ಷಣ, ಆರೋಗ್ಯ ಮತ್ತು ವರಮಾನ ವೃದ್ಧಿ ಮಾಡುವ ಕೆಲಸ ಇಲ್ಲಿ ತುರ್ತಾಗಿ ನಡೆಯಬೇಕಾದ ಅನಿವಾರ್ಯತೆ ಇದೆ ಎಂದು ತಿಳಿಯಲಾಗಿದೆ.

**ಗ್ರಾಮ ಪಂಚಾಯಿತಿಗಳಲ್ಲಿರುವ ಜನರ ತಿಳುವಳಿಕೆ ಮತ್ತು ಭಾಗವಹಿಸುವಿಕೆ ತುಲನಾತ್ಮಕ ವಿವರಣೆ:**

೧೯೯೨ರಲ್ಲಿ ಜಾರಿಗೆ ಬಂದ ಸಂವಿಧಾನದ ೭೩ನೇ ತಿದ್ದುಪಡಿಯಿಂದಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಂತರ ಮೂರನೆ ಹಂತವಾಗಿ ಪಂಚಾಯತ್ ರಾಜ್ಯ ವ್ಯವಸ್ಥೆಯ ಮೂರು ಹಂತದ ಸಂಸ್ಥೆಗಳಾದ ಜಿಲ್ಲಾ ಪಂಚಾಯಿತಿ, ತಾಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳು ಮಹತ್ವ ಪಡೆದಿವೆ. ಅದರಲ್ಲಿ ನನ್ನ ಅಧ್ಯಯನಕ್ಕೆ ಗ್ರಾಮ ಪಂಚಾಯಿತಿಗಳ ಅಧ್ಯಯನವನ್ನು ತೆಗೆದುಕೊಳ್ಳಲಾಗಿದೆ. ಸಂವಿಧಾನದ ಹನ್ನೊಂದನೆಯ ಶೆಡ್ಯೂಲ್ ಪ್ರಕಾರ ಗ್ರಾಮೀಣಾಭಿವೃದ್ಧಿಯೂ ಸೇರಿದಂತೆ ಇಪ್ಪತ್ತೊಂಭತ್ತು ಪ್ರಮುಖ ಕಾರ್ಯಗಳನ್ನು ಸ್ಥಳೀಯ ಆಡಳಿತ ಸಂಸ್ಥೆಗಳಿಗೆ ವಹಿಸಿಕೊಡಲಾಗಿದೆ. ಆದರೆ ಕಳೆದ ಮೂರು ದಶಕಗಳಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯು ಕಾರ್ಯನಿರ್ವಹಣೆ ಮತ್ತು ಸಂಪನ್ಮೂಲ ಕ್ರೋಢಿಕರಣಕ್ಕೆ ಸಂಬಂಧಿಸಿದಂತೆ ನಿರೀಕ್ಷಿತ ಪ್ರಗತಿಯನ್ನು ಸಾಧಿಸದೆ ಇರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ತಳಮಟ್ಟದ ಆಡಳಿತದ ಘಟಕವಾಗಿ ಈ ಸಂಸ್ಥೆಗಳನ್ನು ಬಲಗೊಳಿಸಲಿಕ್ಕಾಗಿ ಅಧಿಕಾರ ಮತ್ತು ಸಂಪನ್ಮೂಲಗಳನ್ನು ವರ್ಗಾಯಿಸಲು ರಾಜ್ಯ ಸರ್ಕಾರಗಳು ಹಿಂದೇಟು ಹಾಕುತ್ತಿರುವುದು ಕೂಡ ಇದಕ್ಕೆ ಮುಖ್ಯ ಕಾರಣವೆಂದು ಹಲವು ಅಧ್ಯಯನಗಳಿಂದ ತಿಳಿಯಲಾಗಿದೆ. ಜನರ ಸಹಭಾಗಿತ್ವ ಮತ್ತು ಪ್ರಾತಿನಿಧ್ಯವನ್ನು ದೊರಕಿಸುವುದಿಲ್ಲವೊ ಅಲ್ಲಿಯ ತನಕ ಸ್ಥಳೀಯ ಸಂಸ್ಥೆಗಳು ದುರ್ಬಲವಾಗಿಯೇ ಮುಂದುವರಿಯುತ್ತವೆ. ಹೀಗೆ ಇದ್ದರೆ ಈ ಸ್ಥಳೀಯ ಸಂಸ್ಥೆಗಳಲ್ಲಿನ ಅಧಿಕಾರಿಗಳು ಮತ್ತು ಜನಪ್ರತಿನಿಧಿಗಳ ಸೇವಾ ವೈಫಲ್ಯಗಳು ಮುಂದುವರಿಯುತ್ತಲೆ ಹೋಗುತ್ತವೆ. ಅಲ್ಲದೇ, ಕೇಂದ್ರ ಸರ್ಕಾರ ಜಾರಿಗೆ ತಂದಿರುವ ಗ್ರಾಮೀಣಾಭಿವೃದ್ಧಿ ಯೋಜನೆಗಳಿಂದ ಹಣ ಪಡೆಯಲು ಉತ್ಸುಕವಾಗಿರುವ ರಾಜ್ಯ ಸರ್ಕಾರಗಳು ಆಡಳಿತ ಸುಧಾರಣಾ ಕ್ರಮಗಳ ಬಗ್ಗೆ ಆಸಕ್ತಿ ವಹಿಸುತ್ತಿಲ್ಲ. ಇದರಿಂದಾಗಿ ಯೋಜನೆಗಳು ಕಳಪೆ ಕಾಮಗಾರಿ ಮತ್ತು ಭ್ರಷ್ಟಾಚಾರಗಳಿಂದ ನಿರೀಕ್ಷಿತ ಫಲವನ್ನು ನೀಡಲು ಸೋಲುತ್ತಿವೆ.

ಒಟ್ಟಾರೆಯಾಗಿ ಮೇಲಿನ ವಿಶ್ಲೇಷಣೆಯಿಂದ ತಿಳಿದುಬರುವ ಅಂಶವೆಂದರೆ ಬಳ್ಳಾರಿ ತಾಲೂಕಿನ ಎರಡು ಗ್ರಾಮ ಪಂಚಾಯಿತಿಗಳು ಮತ್ತು ಕೂಡ್ಲಿಗಿ ತಾಲೂಕಿನ ಎರಡು ಗ್ರಾಮ ಪಂಚಾಯಿತಿಯಲ್ಲಿ ವಾರ್ಡಿನ ಜನರ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಯನ್ನು

ಗಮನಿಸಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಜನರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಜನರು ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರು, ಗ್ರಾಮದಲ್ಲಿ ಪರಿಶಿಷ್ಟ ಜಾತಿಯವರ ಪ್ರಮಾಣ ಹೆಚ್ಚಿದ್ದರೂ ತಮ್ಮಗೆ ಸಿಗಬೇಕಾದ ಸೌಲಭ್ಯಗಳನ್ನು ಪಡೆಯದೆ ವಂಚಿತಗೊಂಡಿರುವುದಲ್ಲದೆ, ಒಣಭೂಮಿಯಿಂದ ಕಡಿಮೆ ಆದಾಯವನ್ನು ಹೊಂದಿ ಜೀವನಾಧಾರಕ್ಕೆ ಕೂಲಿಯನ್ನು ಮಾಡುತ್ತಾ ಹೆಚ್ಚಿನ ವರಮಾನವನ್ನು ಹೊಂದದೆ ವೈಯಕ್ತಿಕ ಜೀವನವನ್ನು ಗುಣಮಟ್ಟ ಜೀವನದಿಂದ ನಡೆಸಿಕೊಂಡು ಹೋಗುವಲ್ಲಿ ವಿಫಲವಾಗಿದ್ದು ಗ್ರಾಮ ಪಂಚಾಯಿತಿಗಳ ಮೇಲೆ ಅವಲಂಬಿತವಾಗಿ ಅದರಿಂದ ನಿರೀಕ್ಷಿತ ಅನುಕೂಲತೆಗಳನ್ನು ಅಂಚಿನ ಜನರಿಗೆ ತಲುಪಿಸಲಾಗದೆ ಅಭಿವೃದ್ಧಿಯನ್ನು ಸಾಧಿಸದೆ ಹಿಂದುಳಿದಿದೆ ಎನ್ನಬಹುದು. ಈ ಹಿಂದುಳಿದಿರುವ ಗ್ರಾಮದಲ್ಲಿ ಹಲವು ಸಮಸ್ಯೆಗಳನ್ನು ನಿವಾರಿಸಲಿಕ್ಕೆ ಕೇಂದ್ರ ಸರ್ಕಾರವು ಯೋಜನೆಗಳಿಗೆ ಹಣ ಮಂಜೂರು ಮಾಡುವ ಮೊದಲು ರಾಜ್ಯ ಸರ್ಕಾರಗಳ ಜೊತೆ ಆಡಳಿತ ಸುಧಾರಣೆಯ ಬಗ್ಗೆ ಕಡ್ಡಾಯವಾಗಿ ಒಡಂಬಡಿಕೆಯನ್ನು ಮಾಡಿಕೊಂಡು ಸ್ಥಳೀಯ ಸಂಸ್ಥೆಗಳ ಬಗ್ಗೆ ಹೆಚ್ಚು ಹೆಚ್ಚು ಆಡಳಿತದಲ್ಲಿ ಪಾಲ್ಗೊಳ್ಳುತ್ತಾ ಹೋದಾಗ ಮಾತ್ರ ಅಭಿವೃದ್ಧಿಯನ್ನು ಕಾಣಲು ಸಾಧ್ಯವೆಂದು ಅಭಿಪ್ರಾಯ ಪಡಲಾಗಿದೆ.

**ಗ್ರಾಮ ಪಂಚಾಯತಿ ಪ್ರತಿನಿಧಿಗಳ ಕಾರ್ಯನಿರ್ವಹಣೆ**

ಬಳ್ಳಾರಿ ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳಲ್ಲಿನ ಜನರ ಭಾಗವಹಿಸುವಿಕೆಯನ್ನು ನೋಡುವ ಉದ್ದೇಶವನ್ನಿಟ್ಟುಕೊಂಡು ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಬರುವ ಜನರ ಸಾಮಾಜಿಕ, ಆರ್ಥಿಕ ಅಂಶಗಳ ಜೊತೆಗೆ ಸ್ಥಳೀಯ ರಾಜಕೀಯದಲ್ಲಿ ಕುಟುಂಬಗಳ ಭಾಗವಹಿಸುವಿಕೆ ಮತ್ತು ತಿಳುವಳಿಕೆಯ ಮೂಲಕ ಚುನಾಯಿತ ಸದಸ್ಯರ ಕಾರ್ಯ ನಿರ್ವಹಣೆಯನ್ನು ಚರ್ಚೆ ಮಾಡಲಾಗಿದೆ. ಹಾಗೆಯೇ ಪ್ರಸ್ತುತ ಅಧ್ಯಯನವು ಗ್ರಾಮ ಪಂಚಾಯಿತಿಗಳಲ್ಲಿ ಚುನಾಯಿತ ಸದಸ್ಯರ ಭಾಗವಹಿಸುವಿಕೆಯಿಂದ ಗ್ರಾಮೀಣ ಅಭಿವೃದ್ಧಿಯನ್ನು ಹೇಗೆ ಮಾಡಿದ್ದಾರೆ ಎಂಬುದನ್ನು ಅಧ್ಯಯನ ಮಾಡುವ ಆಶಯವನ್ನು ಹೊಂದಿದ್ದೇನೆ. ಗ್ರಾಮೀಣ ಆಡಳಿತ ವ್ಯವಸ್ಥೆ ಮತ್ತು ವಿಕೇಂದ್ರೀಕರಣದ ಪ್ರಮುಖ ಆಶಯ. ಆಡಳಿತ ಮತ್ತು ಅಭಿವೃದ್ಧಿ ಕಾರ್ಯಗಳು ಜನ ಕೇಂದ್ರಿತವಾಗಿರಬೇಕೆನ್ನುವುದು. ಅಂದರೆ ಜನರ ಬೇಡಿಕೆಗೆ ಹೆಚ್ಚಿನ ಮನ್ನಣೆ ಕೊಡಲಾಗುತ್ತದೆ. ಆದರೂ ಗ್ರಾಮ ಪಂಚಾಯಿತಿಗಳ ಅಭಿವೃದ್ಧಿ ಬಗ್ಗೆ ನಿರ್ಧಾರ ತೆಗೆದುಕೊಳ್ಳುವಾಗ ಜನತೆ ಆಶಯ ಪರಿಗಣಿಸಲಾಗುತ್ತದೆಯೇ? ಇಂತಹ ಸಂದರ್ಭದಲ್ಲಿ ಜನರ ಭಾಗವಹಿಸುವಿಕೆಯ ಬಗ್ಗೆ ಗಮನಹರಿಸಬೇಕಾಗುತ್ತದೆ. ಈ ರೀತಿ ಸ್ಥಳೀಯ ಜನರ ಭಾಗವಹಿಸುವಿಕೆಯನ್ನು ಗ್ರಾಮ ಸರ್ಕಾರಗಳಲ್ಲಿ ಅಳವಡಿಸಲಾಗಿದೆ. ಆಡಳಿತವು ವ್ಯವಸ್ಥಿತವಾಗಿ ನಡೆಯಬೇಕಾದರೆ ಸ್ಥಳೀಯ ಮಟ್ಟದ ಜನರ ಆಸೆ-ಆಕಾಂಕ್ಷೆಗಳು ಹಾಗೂ ಕ್ಷೇತ್ರ ಅಭಿವೃದ್ಧಿಗೆ ಒದಗಿಸಿರುವ ಜನರ ಉತ್ತಮ ಜೀವನ ಮಟ್ಟ, ಶಿಕ್ಷಣ,

ಆರೋಗ್ಯ, ಶುದ್ಧ ಕುಡಿಯುವ ನೀರು, ಶೌಚಾಲಯ, ನೈರ್ಮಲೀಕರಣ, ರಸ್ತೆ ಮತ್ತು ಬೀದಿ ದೀಪ ಮೇಲೆ ಆಧಾರವಾಗಿದೆ. ಉತ್ತಮ ಆಡಳಿತ ಹಾಗೂ ರಾಜಕೀಯ ವಿಕೇಂದ್ರೀಕರಣದಿಂದ ಮಾತ್ರ ಅಭಿವೃದ್ಧಿಯು ಪರಿಣಾಮಕಾರಿಯಾಗಿಯಾಗಲು ಸಾಧ್ಯ. ಪ್ರಬಲವಾಗಿ ನಿಂತಿರುವ ಅಧಿಕಾರಿಗಳ ಆಡಳಿತದ ನಡುವೆ ಹೊಸದಾಗಿ ಗ್ರಾಮ ಪಂಚಾಯಿತಿಗಳಲ್ಲಿ ವಿಕೇಂದ್ರೀಕರಣವು ಎಷ್ಟರಮಟ್ಟಿಗೆ ಕಾರ್ಯಗತವಾಗುತ್ತಿದೆ ಎಂದು ತಿಳಿದುಕೊಳ್ಳಲು ಚುನಾಯಿತ ಸದಸ್ಯರನ್ನು ಸಂದರ್ಶಿಸಲಾಗಿದೆ. ಗ್ರಾಮ ಪಂಚಾಯಿತಿಗಳ ಕಾರ್ಯಕಲಾಪಗಳಲ್ಲಿ ಚುನಾಯಿತ ಸದಸ್ಯರು ಎಷ್ಟರಮಟ್ಟಿಗೆ ಭಾಗವಹಿಸುತ್ತಾರೆ? ಅಭಿವೃದ್ಧಿ ಕಾರ್ಯಗಳಿಗೆ ಸಂಬಂಧಪಟ್ಟಂತೆ ಎಷ್ಟರಮಟ್ಟಿಗೆ ನಿರ್ಧಾರ ತೆಗೆದುಕೊಳ್ಳುತ್ತಾರೆ ಎಂದು ತಿಳಿದುಕೊಳ್ಳಲು ಪ್ರಶ್ನಾವಳಿಯನ್ನು ಉಪಯೋಗಿಸಿ ಚುನಾಯಿತ ಪ್ರತಿನಿಧಿಗಳನ್ನು ಸಂದರ್ಶಿಸಲಾಗಿದೆ. ಇದರ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಗ್ರಾಮ ಪಂಚಾಯಿತಿಗಳಲ್ಲಿನ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ-ಚಳ್ಳಗುರ್ಕಿ ಗ್ರಾಮ ಪಂಚಾತಿಗಳು ಮತ್ತು ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯ ಸದಸ್ಯರುಗಳನ್ನು ಹಾಗೂ ಅವರು ವಾಸಿಸುತ್ತಿರುವ ಸ್ಥಳದಲ್ಲಿಯೇ ಸಂದರ್ಶಿಸಲಾಗಿದೆ. ನಾವು ಚುನಾಯಿತ ಪ್ರತಿನಿಧಿಗಳನ್ನು ಭೇಟಿ ಮಾಡುವಾಗ ಅಧ್ಯಯನದ ವಿಷಯಕ್ಕೆ ತಕ್ಕಂತೆ ಆರಂಭಿಸಿದ ಸಂದರ್ಶನವು ಸದಸ್ಯರೊಂದಿಗೆ ಮಾತನ್ನು ಮುಂದುವರಿಸಿದಂತೆಲ್ಲಾ ಸಂದರ್ಶನವು ಮುಕ್ತ ಚರ್ಚೆಗೆ ಅನುವು ಮಾಡಿಕೊಟ್ಟಿತ್ತು. ಗ್ರಾಮ ಪಂಚಾಯಿತಿಗಳಿಗೆ ಸಂಬಂಧಪಟ್ಟ ಕೆಲಸ ಕಾರ್ಯಗಳ ಬಗ್ಗೆ, ಅಭಿವೃದ್ಧಿ ಕಾರ್ಯಗಳ ಬಗ್ಗೆ ಹೆಚ್ಚಿನ ವಿಷಯಗಳನ್ನು ತಿಳಿದುಕೊಳ್ಳಲಾಯಿತು. ಸಂಶೋಧನೆಗೆ ಬಳ್ಳಾರಿ ತಾಲೂಕಿನ ಎರಡು ಗ್ರಾಮ ಪಂಚಾಯಿತಿಗಳ ಸದಸ್ಯರನ್ನು ಸಂದರ್ಶಿಸಬೇಕೆಂದು ಕೊಂಡಿದ್ದಾದರೂ ಆದರೆ ಡಾ. ನಂಜುಂಡಪ್ಪ ವರದಿಯು ತಿಳಿಸಿದಂತೆ ಬಳ್ಳಾರಿ ಜಿಲ್ಲೆಯ ಅತ್ಯಂತ ಮುಂದುವರಿದ ತಾಲೂಕು ಬಳ್ಳಾರಿ ತಾಲೂಕಿನ ಎರಡು ಗ್ರಾಮ ಪಂಚಾಯಿತಿಗಳು ಮತ್ತು ಅತ್ಯಂತ ಹಿಂದುಳಿದ ತಾಲೂಕು ಕೂಡ್ಲಿಗಿಯ ಎರಡು ಗ್ರಾಮ ಪಂಚಾಯಿತಿಯ ಸದಸ್ಯರನ್ನು ಸಂದರ್ಶಿಸಿದರೆ ಅಧ್ಯಯನವನ್ನು ಇನ್ನು ಬಲಗೊಳಿಸಲು ಸಾಧ್ಯ ಎನ್ನುವ ಉದ್ದೇಶದಿಂದ ಕೂಡ್ಲಿಗಿ ಗ್ರಾಮ ಪಂಚಾಯಿತಿಯ ಸದಸ್ಯರನ್ನು ಬಳ್ಳಾರಿ ತಾಲೂಕಿನ ಎರಡು ಗ್ರಾಮ ಪಂಚಾಯಿತಿಗಳ ಸದಸ್ಯರಂತೆ ಸಂಶೋಧನೆಗೆ ಸಂಬಂಧಿಸಿದಂತಹ ಪ್ರಶ್ನೆಗಳನ್ನು ಕೇಳುವುದರ ಮೂಲಕ ಸಂದರ್ಶಿಸಲಾಯಿತು. ಸಂಶೋಧನ ಅಧ್ಯಯನದ ಬಗ್ಗೆ ಎಲ್ಲಾ ಸದಸ್ಯರು ಆಸಕ್ತಿ ತೋರಿಸಿದರು. ಎಲ್ಲಾ ಸದಸ್ಯರು ನನ್ನೊಂದಿಗೆ ಚೆನ್ನಾಗಿ ಸಹಕರಿಸಿದರು. ಈ ಜಿಲ್ಲೆಯ ಮುಂದುವರಿದ ತಾಲೂಕು ಬಳ್ಳಾರಿ ಸದಸ್ಯರ ಆರ್ಥಿಕ, ಸಾಮಾಜಿಕ ಮತ್ತು ಸ್ಥಳೀಯ ರಾಜಕೀಯದಲ್ಲಿ ಚುನಾಯಿತ ಸದಸ್ಯರ ಭಾಗವಹಿಸುವುದರ ಮೂಲಕ ಹೇಗೆ ಸ್ಥಳೀಯ ಅಭಿವೃದ್ಧಿಯನ್ನು ಕೈಗೊಂಡಿದ್ದಾರೆ ಎಂಬುದನ್ನು

ಹಿಂದುಳಿದ ಕೂಡ್ಲಿಗಿ ತಾಲೂಕ ಎರಡು ಗ್ರಾಮ ಪಂಚಾಯಿತಿಯೊಂದಿಗೆ ತುಲನಾತ್ಮಕವಾಗಿ ವಿಶ್ಲೇಷಿಸಲಾಗಿದೆ.

ಬಳ್ಳಾರಿ ಗ್ರಾಮ ಪಂಚಾಯಿತಗಳು ಮತ್ತು ಕೂಡ್ಲಿಗಿ ಗ್ರಾಮ ಪಂಚಾಯಿತಿ ಸದಸ್ಯರನ್ನು ಸಂದರ್ಶನದ ಆಧಾರದ ಮೇಲೆ ಸಂಗ್ರಹಿಸಿದ ಮಾಹಿತಿಯ ಹಿನ್ನೆಲೆಯಾಗಿ ರಾಜಕೀಯ ವಿಕೇಂದ್ರೀಕರಣ ಎಷ್ಟರಮಟ್ಟಿಗೆ ಆಚರಣೆಯಲ್ಲಿದೆ ಎಂದು ತಿಳಿದುಕೊಳ್ಳಲು ನಾವು ಕ್ಷೇತ್ರ ಭೇಟಿಯಿಂದ ಸಂಗ್ರಹಿಸಿದ ಮಾಹಿತಿಯು ಅನುಕೂಲಕರವಾಗಿದೆ. ಸ್ಥಳೀಯ ಅಭಿವೃದ್ಧಿಯಲ್ಲಿ ಸ್ಥಳೀಯ ಸದಸ್ಯರುಗಳಿಗೆ ಎಷ್ಟು ನಿರ್ಧಾರ ತೆಗೆದುಕೊಳ್ಳುವ ಅಧಿಕಾರವಿದೆ. ಗ್ರಾಮೀಣ ಸ್ಥಳೀಯ ಸಂಸ್ಥೆಗಳ ಬಗ್ಗೆ ಎಷ್ಟು ತಿಳಿದಿದೆ ಎಂಬ ಅಂಶಗಳನ್ನು ತಿಳಿದುಕೊಳ್ಳುವುದರ ಜೊತೆಗೆ ಶಿಕ್ಷಣ, ಆರೋಗ್ಯ, ಶುದ್ಧ ಕುಡಿಯುವ ನೀರು, ನೈರ್ಮಲ್ಯೀಕರಣ, ವಸತಿ ಮತ್ತು ರಸ್ತೆ ಮುಂತಾದ ಮೂಲಭೂತ ಅವಶ್ಯಕತೆಗಳ ಬಗ್ಗೆ ಸದಸ್ಯರೊಂದಿಗೆ ಚರ್ಚೆ ಮಾಡುವ ಮೂಲಕ ಈ ವಿಭಾಗಗಳಲ್ಲಿ ಎಷ್ಟರಮಟ್ಟಿಗೆ ಕೆಲಸಗಳು ನಡೆಯುತ್ತದೆ ಎನ್ನುವುದರ ಬಗ್ಗೆ ತಿಳಿಯುತ್ತಾ ಜನರ ಜೀವನವನ್ನು ಹೇಗೆ ಉತ್ತಮ ಜೀವನ ಮಟ್ಟದ ಕಡೆಗೆ ಒಯ್ಯುತ್ತಾರೆ ಎಂಬುದನ್ನು ತಿಳಿದುಕೊಳ್ಳಲು ಸಹಾಯಕರವಾಗುತ್ತದೆ. ಹಾಗಾಗಿ ಚುನಾಯಿತ ಸದಸ್ಯರ ತಿಳುವಳಿಕೆ ಮತ್ತು ಭಾಗವಹಿಸುವಿಕೆಯು ಅಭಿವೃದ್ಧಿಯ ಪರಿಕಲ್ಪನೆಯಾಗಿಟ್ಟುಕೊಂಡು ಈ ಹಿನ್ನೆಲೆಯಲ್ಲಿ ಬಳ್ಳಾರಿ ಮತ್ತು ಕೂಡ್ಲಿಗಿ ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳ ಚುನಾಯಿತ ಸದಸ್ಯರ ತಿಳುವಳಿಕೆ ಮತ್ತು ಭಾಗವಹಿಸುವಿಕೆಯ ಮೂಲಕ ಹೇಗೆ ಅಭಿವೃದ್ಧಿಯನ್ನು ಕೈಗೊಳ್ಳಲಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

### ೫.೨. ಗ್ರಾಮ ಪಂಚಾಯತಿ ಪ್ರತಿನಿಧಿಗಳ ಕ್ಷೇತ್ರ ಕಾರ್ಯದ ಮಾಹಿತಿ ೨೦೧೬-೧೭

**ಕೋಷ್ಟಕ-೨೭: ಜಾತಿವಾರು ವಿವರ**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚೆಳ್ಳಗುರ್ಕಿ | |
| | ವಿವರಗಳು | ಕುಟುಂಬಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| | ಪರಿಶಿಷ್ಟ ಜಾತಿ | ೫ | ೨೬.೩೧ | ೫ | ೨೦ | ೭ | ೨೫.೯೨ | ೫ | ೨೯.೪೧ |
| | ಪರಿಶಿಷ್ಟ ಪಂಗಡ | ೧೦ | ೫೨.೬೩ | ೬ | ೨೪ | ೪ | ೧೪.೮೧ | ೪ | ೨೩.೫೨ |
| | ಹಿಂದುಳಿದ ವರ್ಗ | – | – | ೬ | ೨೪ | – | – | – | – |
| ಜಾತಿ | ಸಾಮಾನ್ಯ ವರ್ಗ | ೪ | ೨೧.೦೫ | ೮ | ೩೨ | ೧೬ | ೫೯.೨೫ | ೮ | ೪೭.೦೫ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ತೋರಿಸಲಾದ ಬಳ್ಳಾರಿ ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರ ಜಾತಿಯ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೨೬.೩೧ರಷ್ಟು ಸದಸ್ಯರು ಪರಿಶಿಷ್ಟ ಜಾತಿ, ಶೇ. ೫೨.೬೩ರಷ್ಟು ಸದಸ್ಯರು ಪರಿಶಿಷ್ಟ ಪಂಗಡ ಹಾಗೂ ಉಳಿದ ಶೇ. ೨೧.೦೫ರಷ್ಟು ಸದಸ್ಯರು ಸಾಮಾನ್ಯ ಜಾತಿಗೆ ಸೇರಿದವರಾಗಿದ್ದಾರೆ. ಅವರೊಂದಿಗೆ ಮಹಿಳಾ ಸದಸ್ಯೆಯರು ಈ ಮೂರು ಜಾತಿಗೆ ಸೇರಿದವರು ಇವರಲ್ಲಿದ್ದಾರೆ. ಹಾಗೆಯೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೨೦.೦೦ರಷ್ಟು ಸದಸ್ಯರು ಪರಿಶಿಷ್ಟ ಜಾತಿ, ಶೇ. ೨೪.೦೦ರಷ್ಟು ಸದಸ್ಯರು ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗಕ್ಕೆ ಸೇರಿದ ಶೇ. ೨೪.೦೦ರಷ್ಟು ಹಾಗೂ ಉಳಿದ ಶೇ. ೩೨ರಷ್ಟು ಸದಸ್ಯರು ಸಾಮಾನ್ಯ ಜಾತಿಗೆ ಸೇರಿದವರಾಗಿದ್ದಾರೆ. ಅವರೊಂದಿಗೆ ಮಹಿಳಾ ಸದಸ್ಯೆಯರು ಈ ಮೂರು ಜಾತಿಗೆ ಸೇರಿದವರು ಪಂಚಾಯಿತಿಯಲ್ಲಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಶೇ. ೨೫.೯೨ರಷ್ಟು ಸದಸ್ಯರು ಪರಿಶಿಷ್ಟ ಜಾತಿ, ಶೇ. ೧೪.೮೧ರಷ್ಟು ಸದಸ್ಯರು ಪರಿಶಿಷ್ಟ ಪಂಗಡ ಹಾಗೂ ಉಳಿದ ಶೇ. ೫೯.೨೫ರಷ್ಟು ಸದಸ್ಯರು ಸಾಮಾನ್ಯ ಜಾತಿಗೆ ಸೇರಿದವರಾಗಿದ್ದಾರೆ. ಅವರೊಂದಿಗೆ ಮಹಿಳಾ ಸದಸ್ಯೆಯರು ಈ ಮೂರು ಜಾತಿಗೆ ಸೇರಿದವರು ಇವರಲ್ಲಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೨೯.೪೧ರಷ್ಟು ಸದಸ್ಯರು ಪರಿಶಿಷ್ಟ ಜಾತಿ, ಶೇ. ೨೩.೫೨ರಷ್ಟು ಸದಸ್ಯರು ಪರಿಶಿಷ್ಟ ಪಂಗಡ ಹಾಗೂ ಉಳಿದ ಶೇ. ೪೭.೦೫ರಷ್ಟು ಸದಸ್ಯರು ಸಾಮಾನ್ಯ ಜಾತಿಗೆ ಸೇರಿದವರಾಗಿದ್ದಾರೆ. ಇಲ್ಲಿಯೂ ಸಹ ಅವರೊಂದಿಗೆ ಮಹಿಳಾ ಸದಸ್ಯೆಯರು ಈ ಮೂರು ಜಾತಿಗೆ ಸೇರಿದವರು ಇವರಲ್ಲಿದ್ದಾರೆ.

ಒಟ್ಟಾರೆಯಾಗಿ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೆಳಜಾತಿಗೆ ಸೇರಿದವರು ಅದರಲ್ಲಿಯೂ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಚುನಾಯಿತರಾಗಿದ್ದುಕೊಂಡು ಅಜ್ಞಾನ, ರಾಜಕೀಯದಲ್ಲಿ ಭಾಗವಹಿಸದೆ ಇರುವುದು ಮತ್ತು ಸ್ಥಳೀಯ ರಾಜಕೀಯದ ಸಾಮಾನ್ಯ ಜ್ಞಾನ ಬಗ್ಗೆ ಅರಿವು ಹೊಂದದೆ ಅಭಿವೃದ್ಧಿಯಲ್ಲಿ ಭಾಗವಹಿಸದೆಯಿದ್ದರಿಂದ ಗ್ರಾಮ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ. ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮೇಲ್ಜಾತಿಗೆ ಸೇರಿದ ಚುನಾಯಿತ ಸದಸ್ಯರ ಪ್ರಮಾಣ ಹೆಚ್ಚಾಗಿದ್ದು ಅವರು ಶಿಕ್ಷಿತರಾಗಿ, ಉತ್ತಮ ರಾಜಕೀಯದ ಬಗ್ಗೆ ಅರಿವುನ್ನು ಪಡೆದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಅಭಿವೃದ್ಧಿಗಾಗಿ ಗ್ರಾಮ ಪಂಚಾಯಿತಿಯಲ್ಲಿ ಭಾಗವಹಿಸುವುದರೊಂದಿಗೆ ತಮ್ಮ ಗ್ರಾಮೀಣ ಪ್ರದೇಶಗಳನ್ನು ಅಭಿವೃದ್ಧಿ ಮಾಡಲಾಗಿದೆ ಎನ್ನಬಹುದಾಗಿದೆ. ಈ ಹಿನ್ನೆಲೆಯಲ್ಲಿ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗೆ ರಾಜಕೀಯ ಅರಿವು ಮೂಡಿಸುವಂತಹ

ಕಾರ್ಯಕ್ರಮಗಳನ್ನು ಸರ್ಕಾರದ ವತಿಯಿಂದ ಹೆಚ್ಚಿನ ರೀತಿಯಲ್ಲಿ ಹಾಕಿಕೊಂಡು ತರಬೇತಿಯನ್ನು ಕೊಡಿಸುವ ಅನಿವಾರ್ಯತೆಯಿದೆ ಎಂದು ತಿಳಿದು ಬಂದಿದೆ.

**ಕೋಷ್ಟಕ-೨೮ ಲಿಂಗವಾರು ವಿವರ**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಕುಟುಂಬಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. |
| | ಗಂಡು | ೧೦ | ೫೨.೬೩ | ೧೫ | ೬೦ | ೧೬ | ೫೯.೨೬ | ೮ | ೪೭.೦೬ |
| ಲಿಂಗ | ಹೆಣ್ಣು | ೯ | ೪೭.೩೭ | ೧೦ | ೪೦ | ೧೧ | ೪೦.೭೪ | ೯ | ೫೨.೯೪ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಬಳ್ಳಾರಿ ಜಿಲ್ಲೆಯಲ್ಲಿ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿ ಸದಸ್ಯರ ಲಿಂಗದ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಪ್ರತಿನಿಧಿಗಳಲ್ಲಿ ಶೇ. ೫೨.೬೩ ಪ್ರತಿನಿಧಿಗಳಲ್ಲಿ ಗಂಡಸರು ಉಳಿದ ಶೇ. ೪೭.೩೭ರಷ್ಟು ಪ್ರತಿನಿಧಿಗಳು ಮಹಿಳೆಯರಾಗಿರುತ್ತಾರೆ. ಹಾಗೂ ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಪ್ರತಿನಿಧಿಗಳಲ್ಲಿ ಶೇ. ೬೦.೦೦ ಪ್ರತಿನಿಧಿಗಳಲ್ಲಿ ಗಂಡಸರು ಉಳಿದ ಶೇ. ೪೦.೦೦ರಷ್ಟು ಪ್ರತಿನಿಧಿಗಳು ಹೆಂಗಸರಾಗಿರುತ್ತಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಪ್ರತಿನಿಧಿಗಳಲ್ಲಿ ಶೇ. ೫೯.೨೬ ಪ್ರತಿನಿಧಿಗಳಲ್ಲಿ ಗಂಡಸರು ಉಳಿದ ಶೇ. ೪೦.೭೪ರಷ್ಟು ಪ್ರತಿನಿಧಿಗಳು ಮಹಿಳೆಯರಾಗಿರುತ್ತಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಪ್ರತಿನಿಧಿಗಳಲ್ಲಿ ಶೇ. ೪೭.೦೦ರಷ್ಟು ಪ್ರತಿನಿಧಿಗಳಲ್ಲಿ ಗಂಡಸರು ಉಳಿದ ಶೇ. ೫೨.೯೪ರಷ್ಟು ಪ್ರತಿನಿಧಿಗಳು ಮಹಿಳೆಯರು ಇರುವುದನ್ನು ಕಾಣಲಾಗಿದೆ.

ಒಟ್ಟಾರೆಯಾಗಿ, ಈ ಲಿಂಗವಾರು ಪ್ರಾತಿನಿಧ್ಯವನ್ನು ನೋಡಿದಾಗ ಗ್ರಾಮ ಪಂಚಾಯಿತಿಗಳಲ್ಲಿ ಮಹಿಳೆಯರಿಗೆ ೫೦ರಷ್ಟು ಮೀಸಲಾತಿಯಿದ್ದು ಸ್ಥಳೀಯ ರಾಜಕೀಯದಲ್ಲಿ

ಭಾಗವಹಿಸುವ ಪ್ರಮಾಣ ಕಡಿಮೆಯಿರುವುದು ತಿಳಿದು ಬರುತ್ತದೆ. ಹಾಗಾಗಿ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಮತ್ತು ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ಮಹಿಳೆಯರ ಪ್ರಮಾಣ ಕಡಿಮೆಯಿರುವುದು ಅಧ್ಯಯಗಳಿಂದ ತಿಳಿದು ಬಂದಿದೆ. ಹಾಗಾಗಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ರಾಜಕೀಯದಲ್ಲಿ ಭಾಗವಹಿಸುವುದರ ಮೂಲಕ ಗಂಡಂದಿರ ಹಸ್ತಕ್ಷೇಪ, ಸಬಲರ ರಾಜಕೀಯ ಪ್ರವೇಶ, ಮೇಲ್ಜಾತಿ ವರ್ಗದ ರಾಜಕೀಯ ಪ್ರವೇಶವಾಗದೆ ಮತ್ತು ಮೀಸಲಾತಿಯ ಕಾರಣದಿಂದ ರಾಜಕೀಯ ಪ್ರವೇಶಿಸಿ ಗ್ರಾಮ ಪಂಚಾಯಿತಿಗಳ ಆಡಳಿತವನ್ನು ಕೆಲವು ವ್ಯಕ್ತಿಗಳ ಕೈಯಲ್ಲಿ ಕೊಡದೆ ಮಹಿಳೆಯರು ಹೆಚ್ಚಿನ ರೀತಿಯಲ್ಲಿ ಸ್ಥಳೀಯ ರಾಜಕೀಯದ ಬಗ್ಗೆ ಅರಿವು ಪಡೆಯುವುದರೊಂದಿಗೆ ನಿಯಮಿತವಾಗಿ ಆಡಳಿತದಲ್ಲಿ ಭಾಗವಹಿಸುವುದರ ಮೂಲಕ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯನ್ನು ಮಾಡುವುದರೊಂದಿಗೆ ಮಹಿಳಾ ಸಬಲೀಕರಣಗೊಳ್ಳುವ ಅವಶ್ಯಕತೆಯಿದೆ ಎಂದು ತಿಳಿಯಲಾಗಿದೆ.

**ಕೋಷ್ಟಕ-೨೯: ವಿದ್ಯಾಭ್ಯಾಸದ ಮಾಹಿತಿ**

| | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|
| | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. |
| ಅನಕ್ಷರಸ್ಥರು | ೧೧ | ೫೭.೮೯ | ೬ | ೨೪ | ೪ | ೧೪.೮೧ | ೨ | ೧೧.೭೬ |
| ಪ್ರಾಥ ಶಿಕ್ಷಣ | ೭ | ೩೬.೮೪ | ೧೭ | ೬೮ | ೧೩ | ೪೮.೧೪ | ೮ | ೪೭.೦೫ |
| ಪದವಿ ಪೂರ್ವ | ೧ | ೫.೨೬ | ೧ | ೪ | ೭ | ೨೫.೯೨ | ೫ | ೨೯.೪೧ |
| ಪದವಿ | – | – | ೧ | ೪ | ೩ | ೧೧.೧೧ | ೨ | ೧೧.೭೬ |
| ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಹೇಳಿಕೆಯಲ್ಲಿ ಚುನಾಯಿತಿ ಸದಸ್ಯರ ಶಿಕ್ಷಣದ ವಿವರವನ್ನು ತೋರಿಸಲಾಗಿದೆ. ಎರಡು ತಾಲೂಕಿನ ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರ ಶಿಕ್ಷಣದ ಪ್ರಮಾಣವನ್ನು ನೋಡುವಾಗ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ

ಒಟ್ಟು ೧೯ ಪ್ರತಿನಿಧಿಗಳಲ್ಲಿ ಶೇ. ೩೬.೮೪ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರೌಢ ಶಾಲೆಯವರೆಗೆ ಓದಿದ್ದರೆ, ಮತ್ತೆ ಕೆಲವು ಸದಸ್ಯರು ಶೇ. ೫.೨೬ರಷ್ಟು ಪದವಿ ಪೂರ್ವ ಶಿಕ್ಷಣವನ್ನು ಕಲಿತಿರುತ್ತಾರೆ. ಹಾಗೂ ಕೇವಲ ಶೇ. ೫೭.೮೯ರಷ್ಟು ಚುನಾಯಿತ ಪ್ರತಿನಿಧಿಗಳು ಅನಕ್ಷರಸ್ಥರಾಗಿರುತ್ತಾರೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಪ್ರತಿನಿಧಿಗಳಲ್ಲಿ ಶೇ. ೬೮.೦೦ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರೌಢ ಶಾಲೆಯವರೆಗೆ ಓದಿದ್ದರೆ, ಮತ್ತೆ ಕೆಲವು ಸದಸ್ಯರು ಶೇ. ೪.೦೦ರಷ್ಟು ಪದವಿ ಪೂರ್ವ ಶಿಕ್ಷಣವನ್ನು ಕಲಿತಿರುತ್ತಾರೆ. ಶೇ. ೪.೦೦ರಷ್ಟು ಪದವಿಯನ್ನು ಓದಿಕೊಂಡಿರುವುದನ್ನು ನೋಡಲಾಗಿದೆ. ಹಾಗೂ ಕೇವಲ ಶೇ. ೨೪.೦೦ರಷ್ಟು ಚುನಾಯಿತ ಪ್ರತಿನಿಧಿಗಳು ಅನಕ್ಷರಸ್ಥರಾಗಿರುತ್ತಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀದರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಪ್ರತಿನಿಧಿಗಳಲ್ಲಿ ಶೇ. ೪೮.೧೪.೦೦ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರೌಢ ಶಾಲೆಯವರೆಗೆ ಓದಿದ್ದರೆ, ಮತ್ತೆ ಕೆಲವು ಸದಸ್ಯರು ಶೇ. ೨೫.೯೨ರಷ್ಟು ಪದವಿ ಪೂರ್ವ ಶಿಕ್ಷಣವನ್ನು ಕಲಿತಿರುತ್ತಾರೆ. ಶೇ. ೧೧.೧೧ರಷ್ಟು ಪದವಿಯನ್ನು ಓದಿಕೊಂಡಿರುವುದನ್ನು ನೋಡಲಾಗಿದೆ. ಹಾಗೂ ಕೇವಲ ಶೇ. ೧೪.೮೧ರಷ್ಟು ಚುನಾಯಿತ ಪ್ರತಿನಿಧಿಗಳು ಅನಕ್ಷರಸ್ಥರಾಗಿರುತ್ತಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಪ್ರತಿನಿಧಿಗಳಲ್ಲಿ ಶೇ. ೪೭.೦೫.೦೦ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರೌಢ ಶಾಲೆಯವರೆಗೆ ಓದಿದ್ದರೆ, ಮತ್ತೆ ಕೆಲವು ಸದಸ್ಯರು ಶೇ. ೨೯.೪೧ರಷ್ಟು ಪದವಿ ಪೂರ್ವ ಶಿಕ್ಷಣವನ್ನು ಕಲಿತಿರುತ್ತಾರೆ. ಶೇ. ೧೧.೭೬ರಷ್ಟು ಪದವಿ ಶಿಕ್ಷಣವನ್ನು ಓದಿಕೊಂಡಿರುವುದನ್ನು ನೋಡಲಾಗಿದೆ. ಹಾಗೂ ಕೇವಲ ಶೇ. ೧೧.೭೬ರಷ್ಟು ಚುನಾಯಿತ ಪ್ರತಿನಿಧಿಗಳು ಅನಕ್ಷರಸ್ಥರಾಗಿರುತ್ತಾರೆ.

ಒಟ್ಟಾರೆಯಾಗಿ, ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳನ್ನು ನೋಡಿದಾಗ ಅಭಿವೃದ್ಧಿ ಹೊಂದಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಚುನಾಯಿತನ ಸದಸ್ಯರ ಅನಕ್ಷರಸ್ಥರ ಪ್ರಮಾಣಕ್ಕಿಂತ ಮತ್ತು ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ಅದರಲ್ಲೂ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಅನಕ್ಷರಸ್ಥರ ಪ್ರಮಾಣ ಹೆಚ್ಚಾಗಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಹಾಗಾಗಿ ಗ್ರಾಮೀಣ ಪ್ರದೇಶಗಳನ್ನು ಅಭಿವೃದ್ಧಿಗೊಳಿಸುವಲ್ಲಿ ಶಿಕ್ಷಣದ ಅಗತ್ಯತೆಯು ಹೆಚ್ಚಾಗಿರುವುದರಿಂದ ಅದರಲ್ಲಿ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಚುನಾಯಿತ ಸದಸ್ಯರು ಪಡೆಯುವಲ್ಲಿ ಹಿಂದುಳಿದಿದ್ದರಿಂದ ಆ ಗ್ರಾಮ ಪಂಚಾಯಿತಿಯು ಹಿಂದುಳಿಯಲು ಕಾರಣವಾಗಿದೆ ಎನ್ನಬಹುದಾಗಿದೆ. ಆದ್ದರಿಂದ ಚುನಾಯಿತ ಸದಸ್ಯರು ಶಿಕ್ಷಣದಿಂದ ವಂಚಿತ ಗೊಂಡಿರುವುದಲ್ಲದೆ ಅವರಿಗೆ ವಯಸ್ಕ ಶಿಕ್ಷಣವನ್ನು ಕೊಡಿಸುವ ಜೊತೆಗೆ ಗ್ರಾಮ ಅಭಿವೃದ್ಧಿಯನ್ನು ಮಾಡುವಂತಹ ಕೌಶಲ್ಯ ಬಗ್ಗೆ ಹೆಚ್ಚಿನ ಅರಿವು ಮೂಡಿಸುವ ಕೆಲಸವಾಗುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

**ಕೋಷ್ಟಕ-೩.೧: ವೃತ್ತಿ ಮಾಹಿತಿ**

| | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|
| | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| ಖಾಸಗಿ | ೫ | ೨೬.೩೧ | ೬ | ೨೪ | ೪ | ೧೪.೮೧ | ೨ | ೧೧.೭೬ |
| ಮನೆಗೆಲಸ | ೩ | ೧೫.೭೯ | ೭ | ೨೮ | ೮ | ೨೯.೬೨ | ೫ | ೨೯.೪೧ |
| ವ್ಯವಸಾಯ | ೧೧ | ೫೭.೮೯ | ೧೨ | ೪೮ | ೧೫ | ೫೫.೫೫ | ೧೦ | ೫೨.೮೨ |
| ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಹೇಳಿಕೆಯಲ್ಲಿ ಚುನಾಯಿತಿ ಸದಸ್ಯರ ವೃತ್ತಿಯ ವಿವರವನ್ನು ತೋರಿಸಲಾಗಿದೆ. ಎರಡು ತಾಲೂಕಿನ ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರ ವೃತ್ತಿಯ ಪ್ರಮಾಣವನ್ನು ನೋಡುವಾಗ ಕೂಡ್ಲಿಗಿ ತಾಲೂಕಿನ ಅಪ್ಪೆಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟ ೧೯ ಪ್ರತಿನಿಧಿಗಳಲ್ಲಿ ಶೇ. ೨೬.೩೧ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರತಿನಿಧಿಗಳು ಖಾಸಗಿ ಜೀವನ(ಮೆಕಾನಿಕ್, ಹಿಟ್ಟಿನಗಿರಣಿ, ಹೊಲಿಗೆ ಕಟ್ಟಡ, ನಿರ್ಮಾಣ)ವೃತ್ತಿಯಲ್ಲಿ ನಿರತರಾಗಿದ್ದಾರೆ ಶೇ. ೧೫.೭೯ರಷ್ಟು ಚುನಾಯಿತ ಪ್ರತಿನಿಧಿಗಳು ಮನೆಗೆಲಸವನ್ನು ಆಧಾರಿಸಿದ್ದಾರೆ. ಹಾಗೆಯೇ ಶೇ. ೫೭.೮೯ರಷ್ಟು ಜನಪ್ರತಿನಿಧಿಗಳು ಜೀವನ ವ್ಯವಸಾಯವನ್ನೇ ಆಧಾರಿತವಾಗಿದೆ. ಬಡಲಡಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟ ೨೫ ಪ್ರತಿನಿಧಿಗಳಲ್ಲಿ ಶೇ. ೨೪.೦೦ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರತಿನಿಧಿಗಳು ಖಾಸಗಿ ಜೀವನ (ಮೆಕಾನಿಕ್, ಹಿಟ್ಟಿನ ಗಿರಣಿ, ಹೊಲಿಗೆ ಕಟ್ಟಡ, ನಿರ್ಮಾಣ) ವೃತ್ತಿಯಲ್ಲಿ ನಿರತರಾಗಿದ್ದಾರೆ. ಶೇ. ೨೮.೦೦ರಷ್ಟು ಚುನಾಯಿತ ಪ್ರತಿನಿಧಿಗಳು ಮನೆಗೆಲಸವನ್ನು ಆಧಾರಿಸಿದ್ದಾರೆ. ಹಾಗೆಯೇ ಶೇ. ೪೮.೦೦ರಷ್ಟು ಜನಪ್ರತಿನಿಧಿಗಳು ಜೀವನ ವ್ಯವಸಾಯವನ್ನೇ ಆಧಾರಿತವಾಗಿದೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟ ೨೭ ಪ್ರತಿನಿಧಿಗಳಲ್ಲಿ ಶೇ. ೧೪.೮೧ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರತಿನಿಧಿಗಳು ಖಾಸಗಿ ಜೀವನ(ಮೆಕಾನಿಕ್, ಹಿಟ್ಟಿನ ಗಿರಣಿ, ಹೊಲಿಗೆ ಕಟ್ಟಡ, ನಿರ್ಮಾಣ) ವೃತ್ತಿಯಲ್ಲಿ ನಿರತರಾಗಿದ್ದಾರೆ. ಶೇ.

೨೯.೬೩ರಷ್ಟು ಚುನಾಯಿತ ಪ್ರತಿನಿಧಿಗಳು ಮನೆಗೆಲಸವನ್ನು ಆಧಾರಿಸಿದ್ದಾರೆ. ಹಾಗೆಯೇ ಶೇ. ೫೫.೫೫ರಷ್ಟು ಜನಪ್ರತಿನಿಧಿಗಳು ಜೀವನ ವ್ಯವಸಾಯವನ್ನೇ ಆಧಾರಿತವಾಗಿದೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಪ್ರತಿನಿಧಿಗಳಲ್ಲಿ ಶೇ. ೧೧.೭೬ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರತಿನಿಧಿಗಳು ಖಾಸಗಿ ಜೀವನ(ಮೆಕಾನಿಕ್, ಹಿಟ್ಟಿನ ಗಿರಣಿ, ಹೊಲಿಗೆ ಕಟ್ಟಡ, ನಿರ್ಮಾಣ) ವೃತ್ತಿಯಲ್ಲಿ ನಿರತರಾಗಿದ್ದಾರೆ. ಶೇ. ೨೯.೪೧ರಷ್ಟು ಚುನಾಯಿತ ಪ್ರತಿನಿಧಿಗಳು ಮನೆಗೆಲಸವನ್ನು ಆಧಾರಿಸಿದ್ದಾರೆ. ಹಾಗೆಯೇ ಶೇ. ೫೮.೮೨ರಷ್ಟು ಜನಪ್ರತಿನಿಧಿಗಳ ಜೀವನ ವ್ಯವಸಾಯವನ್ನೇ ಆಧಾರಿತವಾಗಿದೆ.

ಒಟ್ಟಾರೆಯಾಗಿ ಮೇಲಿನ ಅಂಶಗಳನ್ನು ನೋಡಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು ಮತ್ತು ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು ಸದಸ್ಯರ ಜೀವನ ಸ್ಥಿತಿಯನ್ನು ನೋಡಿದಾಗ ಹಿಂದುಳಿದ ಗ್ರಾಮ ಪಂಚಾಯಿತಿಯ ಸದಸ್ಯರಿಗಿಂತ ಮುಂದುವರಿದ ಗ್ರಾಮ ಪಂಚಾಯಿತಿ ಸದಸ್ಯರ ಜೀವನವು ಉತ್ತಮವಾಗಿದೆ ಎನ್ನಲಾಗುತ್ತದೆ. ಪಂಚಾತಿತಿಯಗಳ ಅಭೀವೃದ್ಧಿಯನ್ನು ಮಾಡಬೇಕಾದರೆ ಸ್ವಂತ ಜೀವನದ ಸುಧಾರಣೆಯು ಮುಖ್ಯ ಎಂದು ಹೇಳಲಾಗುತ್ತದೆ. ಈ ಹಿನ್ನಲೆಯಲ್ಲಿ ಹಿಂದುಳಿದ ಗ್ರಾಮ ಪಂಚಾಯಿತಿಗಳ ಸದಸ್ಯರ ಜೀವನವು ಸುಧಾರಿಸಬೇಕಾದ ಅಗತ್ಯವಿದೆ ಎನ್ನಬಹುದಾಗಿದೆ.

**ಕೋಷ್ಟಕ–೩೧: ಚುನಾಯಿತ ಪ್ರತಿನಿಧಿಗಳ ಆಯ್ಕೆ ವಿಧಾನ**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| ಚುನಾಯಿತ ಪ್ರತಿನಿಧಿಗಳ ಆಯ್ಕೆ ವಿಧಾನ | ಚುನಾವಣೆ | ೧೯ | ೧೦೦ | ೨೪ | ೯೬ | ೨೬ | ೯೬.೨೯ | ೧೭ | ೧೦೦ |
| | ಅವಿರೋಧ ಆಯ್ಕೆ | – | | ೧ | ೪ | ೧ | ೩.೭ | – | – |
| ಒಟ್ಟು | | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬–೧೭

ಈ ಮೇಲಿನ ಕೋಷ್ಟಕದಲ್ಲಿ ಚುನಾಯಿತಿ ಸದಸ್ಯರ ಆಯ್ಕೆಯ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯನ್ನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತ ಪ್ರತಿನಿಧಿಗಳಲ್ಲಿ ಶೇ. ೧೦೦ ಕ್ಕೆ ೧೦೦ರಷ್ಟು ಪ್ರತಿನಿಧಿಗಳು ಪ್ರತಿ ಸ್ಪರ್ಧಿಯನ್ನು ಸೋಲಿಸಿ ಆಯ್ಕೆಯಾಗಿದ್ದಾರೆ. ಹಾಗೆಯೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತ ಸದಸ್ಯರು ಇದ್ದು, ಅದರಲ್ಲಿ ಶೇ. ೯೬.೦೦ರಷ್ಟು ಚುನಾಯಿತಿ ಸದಸ್ಯರು ಪ್ರತಿಸ್ಪರ್ಧಿಗಳನ್ನು ಸೋಲಿಸಿ ಗ್ರಾಮ ಪಂಚಾಯಿತಿಗೆ ಆಯ್ಕೆಯಾಗಿದ್ದಾರೆ. ಹಾಗೆಯೇ ಉಳಿದ ಶೇ. ೪.೦೦ರಷ್ಟು ಪ್ರತಿನಿಧಿಯು ಚುನಾವಣೆ ಇಲ್ಲದೆ (ಅವಿರೋಧ ಆಯ್ಕೆ) ಆಯ್ಕೆಯಾಗಿರುತ್ತಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತ ಪ್ರತಿನಿಧಿಗಳಿದ್ದು, ಅದರಲ್ಲಿ ಶೇ.೯೬.೨೯ರಷ್ಟು ಸದಸ್ಯರು ಪ್ರತಿಸ್ಪರ್ಧಿಗಳನ್ನು ಸೋಲಿಸುವುದರ ಮೂಲಕ ಆಯ್ಕೆಯಾಗಿರುತ್ತಾರೆ. ಇಲ್ಲಿ ಮತ್ತೊಂದು ವಿಶೇಷವೆಂದರೆ ಇಲ್ಲಿ ಸತತವಾಗಿ ೧೫ ವರ್ಷಗಳಿಂದ ಗ್ರಾಮ ಪಂಚಾಯಿತಿಯಲ್ಲಿ ಶೆ. ೩.೭೦ರಷ್ಟು ಚುನಾಯಿತ ಸದಸ್ಯರು ಆವಿರೋಧ ಆಯ್ಕೆ ನಡೆಯುತ್ತದೆ. ಕೊನೆಯದಾಗಿ ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತ ಸದಸ್ಯರು ಇದ್ದು, ಅದರಲ್ಲಿ ಶೇ. ೧೦೦ರಷ್ಟು ಸದಸ್ಯರು ಚುನಾವಣೆಯನ್ನು ಎದರಿಸಿ ಆಯ್ಕೆಯಾಗಿರುವುದನ್ನು ಕಾಣಲಾಗಿದೆ. ಮುಂದುವರಿದು, ಆ ವಾರ್ಡಿನ ಹಿರಿಯರೊಬ್ಬರು ಈ ರೀತಿಯಾಗಿ ಹೇಳಿಕೊಂಡಿರುವುದು ಕಂಡು ಬಂದಿದೆ.. ಚುನಾವಣೆಯ ವೇಳೆಯಲ್ಲಿ ಚುನಾವಣೆ ನಡೆದರೆ ವಾರ್ಡಿನಲ್ಲಿ ಒಡಕು ಉಂಟಾಗುತ್ತದೆ. ಹಣ, ಹೆಂಡ, ಬಾಡೂಟ, ಸೀರೆಗಳನ್ನು ಹಂಚಲಾಗುತ್ತದೆ. ಇದರಿಂದ ವಾರ್ಡಿನ ಜನರನ್ನು ನಾವೇ ಭ್ರಷ್ಟರನ್ನಾಗಿಸಿದಂತೆ ಆಗುತ್ತದೆ. ಆದ್ದರಿಂದ ಆವಿರೋಧ ಆಯ್ಕೆಯೇ ಸರಿ ಅಲ್ಲವೇ? ಆವಿರೋಧ ಆಯ್ಕೆಯ ಬಗ್ಗೆ ಹಲವಾರು ಅಪಪ್ರಚಾರಗಳಿರುವುದು ಹಲವಾರು ಅಧ್ಯಯನಗಳಿಂದ ತಿಳಿದು ಬರುತ್ತದೆ. ಆದರೆ ಸೂಕ್ಷ್ಮವಾಗಿ ಗಮನಿಸಿದಾಗ ಅಂತಹ ಪ್ರಸಂಗಗಳ ಸುಳಿವು ನಾನು ಮಾಡಿದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಕೊಂಡಿದ್ದೇನೆ. ಹಾಗಾಗಿ ವಾರ್ಡಿನ ಸದಸ್ಯರೊಬ್ಬರನ್ನು ಚುನಾವಣೆ ನಡೆಸದೆ ಚುನಾಯಿಸುವ ಪ್ರಕ್ರಿಯೆಯಲ್ಲಿ ಹಿರಿಯರು ಪ್ರಮುಖ ಪಾತ್ರವನ್ನು ವಹಿಸಲಾಗಿದೆ. ಆದುದರಿಂದ ಸಾಂಪ್ರಾದಾಯಿಕ ಚುನಾವಣೆಯು ಅಭ್ಯರ್ಥಿಗಳ ಆಯ್ಕೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿತೆಂಬ ಅಂಶವು ನಮಗೆ ತಿಳಿದುಬಂದಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿದು ಬರುವ ಸಂಗತಿಯೆಂದರೆ, ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರು ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರಿಗಿಂತ ಆಯ್ಕೆ ಪ್ರಕ್ರಿಯೆಯಲ್ಲಿ ಉತ್ತಮ ಹೆಜ್ಜೆಗಳನ್ನು ಇಟ್ಟಿರುವುದು ತಿಳಿದು ಬಂದಿದೆ. ಹಾಗಾಗಿ ತೀರಾ ಹಿಂದುಳಿದ ಗ್ರಾಮ ಪಂಚಾಯಿತಿಯು ಅಭಿವೃದ್ಧಿಹೊಂದಬೇಕಾದರೆ ಪಂಚಾಯಿತಿಯ ಚುನಾಯಿತ ಸದಸ್ಯರಿಗೂ ಗುಣಮಟ್ಟದ ಶಿಕ್ಷಣ, ಮೌಲ್ಯಗಳನ್ನು ಉಳಿಸಬಲ್ಲ, ಬೆಳೆಸಬಲ್ಲಂತಹ ಸಾಮಾರ್ಥ್ಯಗಳನ್ನು ನೀಡುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

ಕೋಷ್ಟಕ-೩.೨: ಸದಸ್ಯರ ಮೀಸಲಾತಿ ವಿವರ:-

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚೆಳ್ಳಗುರ್ಕಿ | |
| | ವಿವರಗಳು | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| ಸದಸ್ಯರ ಪ್ರಕಾರ ಮೀಸಲಾತಿ ಅವಶ್ಯಕತೆ ಇದೆಯಾ? | ತುಂಬಾ ಅಗತ್ಯ ಇದೆ | ೧೩ | ೬೮.೪೨ | ೧೬ | ೬೪ | ೧೮ | ೬೬.೬೬ | ೧೨ | ೭೦.೫೮ |
| | ಅಗತ್ಯ ಇಲ್ಲ | ೬ | ೩೧.೫೮ | ೯ | ೩೬ | ೯ | ೩೩.೩೩ | ೫ | ೨೯.೪೧ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಕೋಷ್ಟಕದಲ್ಲಿ ಗ್ರಾಮೀಣ ಪ್ರದೇಶದಲ್ಲಿರುವ ಮೀಸಲಾತಿಯ ಬಗ್ಗೆ ಸದಸ್ಯರಿಗೆ ಇರುವ ಅಭಿಪ್ರಾಯಗಳ ಪ್ರಮಾಣವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತಿ ಸದಸ್ಯರಿದ್ದು ಅದರಲ್ಲಿ ಶೇ. ೬೮.೪೨ರಷ್ಟು ಚುನಾವಣೆಯಲ್ಲಿ ಭಾಗವಹಿಸುವುದಕ್ಕೆ ಮೀಸಲಾತಿಯ ಅವಶ್ಯಕತೆ ಇದೆ ಎಂದು ಹೇಳುತ್ತಾ ಮೀಸಲಾತಿಯ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ ಸದಸ್ಯರ ಪ್ರಕಾರ ಮೀಸಲಾತಿ ಇರುವುದರಿಂದ ಹಿಂದುಳಿದ ವರ್ಗಕ್ಕೆ ಸೇರಿದ ಜನ ಸ್ಥಳೀಯ ಸರ್ಕಾರದ ಆಡಳಿತದಲ್ಲಿ ಭಾಗವಹಿಸಿದಂತಾಗುತ್ತದೆ. ಅಲ್ಲದೆ ಹಿಂದುಳಿದ ವರ್ಗದ ಜನರ ಅಭಿವೃದ್ಧಿಗೆ ಹೆಚ್ಚಿನ ಗಮನ ಹರಿಸಿದಂತಾಗುತ್ತದೆ. ಮತ್ತೊಂದು ೬ ಸದಸ್ಯರ ಪ್ರಕಾರ ಮಹಿಳೆ ಮೀಸಲಾತಿ ಕೊಡುವುದರಿಂದ ಮಹಿಳೆಯರು ಗ್ರಾಮ ಪಂಚಾಯಿತಿ ಮಟ್ಟದಲ್ಲಿ ನಡೆಯುವ ಕೆಲಸ ಕಾರ್ಯಗಳಲ್ಲಿ ನಿರ್ಧಾರವನ್ನು ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಭಾಗವಹಿಸಿ ದಂತಾಗುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಹಾಗೆಯೇ, ಮುಂದುವರಿಯುತ್ತಾ ಶೇ. ೩೧.೫೮ರಷ್ಟು ಸದಸ್ಯರು ಮೀಸಲಾತಿಯು ಅವಶ್ಯಕತೆ ಇಲ್ಲ ಎಂದು ಹೇಳಿಕೊಂಡಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತಿ ಸದಸ್ಯರಿದ್ದು ಅದರಲ್ಲಿ ಶೇ. ೬೪.೦೦ರಷ್ಟು ಚುನಾವಣೆಯಲ್ಲಿ ಭಾಗವಹಿಸಲಿಕ್ಕೆ ಮೀಸಲಾತಿಯ ಅವಶ್ಯಕತೆ ಇದೆ ಎಂದು ಹೇಳುತ್ತಾ ಮೀಸಲಾತಿಯ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ

ಸದಸ್ಯರ ಪ್ರಕಾರ ಮೀಸಲಾತಿ ಇರುವುದರಿಂದ ಹಿಂದುಳಿದ ವರ್ಗಕ್ಕೆ ಸೇರಿದ ಜನ ಸ್ಥಳೀಯ ಸರ್ಕಾರದ ಆಡಳಿತದಲ್ಲಿ ಭಾಗವಹಿಸಿದಂತಾಗುತ್ತದೆ. ಅಲ್ಲದೆ ಹಿಂದುಳಿದ ವರ್ಗದ ಜನರ ಅಭಿವೃದ್ಧಿಗೆ ಹೆಚ್ಚಿನ ಗಮನ ಹರಿಸಿದಂತಾಗುತ್ತದೆ. ಮತ್ತೊಂದು ೬ ಸದಸ್ಯರ ಪ್ರಕಾರ ಮಹಿಳೆ ಮೀಸಲಾತಿ ಕೊಡುವುದರಿಂದ ಮಹಿಳೆಯರು ಗ್ರಾಮ ಪಂಚಾಯಿತಿ ಮಟ್ಟದಲ್ಲಿ ನಡೆಯುವ ಕೆಲಸ ಕಾರ್ಯಗಳಲ್ಲಿ ನಿರ್ಧಾರವನ್ನು ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಭಾಗವಹಿಸಿದಂತಾಗುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಹಾಗೆಯೇ, ಮುಂದುವರಿಯುತ್ತಾ ಶೇ. ೩೬.೦೦ರಷ್ಟು ಸದಸ್ಯರು ಮೀಸಲಾತಿಯು ಅವಶ್ಯಕತೆ ಇಲ್ಲ ಎಂದು ಹೇಳಿಕೊಂಡಿದ್ದಾರೆ.

ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತಿ ಸದಸ್ಯರಿದ್ದು ಅದರಲ್ಲಿ ಶೇ. ೬೬.೬೬ಷ್ಟು ಚುನಾವಣೆಯಲ್ಲಿ ಭಾಗವಹಿಸಲಿಕ್ಕೆ ಮೀಸಲಾತಿಯ ಅವಶ್ಯಕತೆ ಇದೆ ಎಂದು ಹೇಳುತ್ತಾ ಮೀಸಲಾತಿಯ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ ಸದಸ್ಯರ ಪ್ರಕಾರ ಮೀಸಲಾತಿ ಇರುವುದರಿಂದ ಹಿಂದುಳಿದ ವರ್ಗಕ್ಕೆ ಸೇರಿದ ಜನ ಸ್ಥಳೀಯ ಸರ್ಕಾರದ ಆಡಳಿತದಲ್ಲಿ ಭಾಗವಹಿಸಿದಂತಾಗುತ್ತದೆ. ಅಲ್ಲದೆ ಹಿಂದುಳಿದ ವರ್ಗದ ಜನರ ಅಭಿವೃದ್ಧಿಗೆ ಹೆಚ್ಚಿನ ಗಮನ ಹರಿಸಿದಂತಾಗುತ್ತದೆ. ಮತ್ತೊಂದು ೬ ಸದಸ್ಯರ ಪ್ರಕಾರ ಮಹಿಳೆ ಮೀಸಲಾತಿ ಕೊಡುವುದರಿಂದ ಮಹಿಳೆಯರು ಗ್ರಾಮ ಪಂಚಾಯಿತಿ ಮಟ್ಟದಲ್ಲಿ ನಡೆಯುವ ಕೆಲಸ ಕಾರ್ಯಗಳಲ್ಲಿ ನಿರ್ಧಾರವನ್ನು ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಭಾಗವಹಿಸಿದಂತಾಗುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಹಾಗೆಯೇ, ಮುಂದುವರಿಯುತ್ತಾ ಶೇ. ೩೩.೩೩ರಷ್ಟು ಸದಸ್ಯರು ಮೀಸಲಾತಿಯು ಅವಶ್ಯಕತೆ ಇಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತಿ ಸದಸ್ಯರಿದ್ದು ಅದರಲ್ಲಿ ಶೇ. ೭೦.೫೮ರಷ್ಟು ಚುನಾವಣೆಯಲ್ಲಿ ಭಾಗವಹಿಸಲಿಕ್ಕೆ ಮೀಸಲಾತಿಯ ಅವಶ್ಯಕತೆ ಇದೆ ಎಂದು ಹೇಳುತ್ತಾ ಮೀಸಲಾತಿಯ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ ಸದಸ್ಯರ ಪ್ರಕಾರ ಮೀಸಲಾತಿ ಇರುವುದರಿಂದ ಹಿಂದುಳಿದ ವರ್ಗಕ್ಕೆ ಸೇರಿದ ಜನ ಸ್ಥಳೀಯ ಸರ್ಕಾರದ ಆಡಳಿತದಲ್ಲಿ ಭಾಗವಹಿಸಿದಂತಾಗುತ್ತದೆ. ಅಲ್ಲದೆ ಹಿಂದುಳಿದ ವರ್ಗದ ಜನರ ಅಭಿವೃದ್ಧಿಗೆ ಹೆಚ್ಚಿನ ಗಮನ ಹರಿಸಿದಂತಾಗುತ್ತದೆ. ಮತ್ತೊಂದು ೬ ಸದಸ್ಯರ ಪ್ರಕಾರ ಮಹಿಳೆ ಮೀಸಲಾತಿ ಕೊಡುವುದರಿಂದ ಮಹಿಳೆಯರು ಗ್ರಾಮ ಪಂಚಾಯಿತಿ ಮಟ್ಟದಲ್ಲಿ ನಡೆಯುವ ಕೆಲಸ ಕಾರ್ಯಗಳಲ್ಲಿ ನಿರ್ಧಾರವನ್ನು ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಭಾಗವಹಿಸಿದಂತಾಗುತ್ತದೆ

ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಹಾಗೆಯೇ, ಮುಂದುವರಿಯುತ್ತಾ ಶೇ. ೨೯.೪೧ರಷ್ಟು ಸದಸ್ಯರು ಮೀಸಲಾತಿಯು ಅವಶ್ಯಕತೆ ಇಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಗ್ರಾಮ ಪಂಚಾಯಿತಿಯ ಸದಸ್ಯರು ಕೆಲವೊಮ್ಮೆ ಮೀಸಲಾತಿಯಿಂದ ಆಯ್ಕೆಯಾದ ಸದಸ್ಯರು ಸ್ಥಳೀಯ ಸಂಸ್ಥೆಗಳ ಆಡಳಿತದ ಸಮಸ್ಯೆಗಳ ಬಗ್ಗೆ ತಿಳಿದುಕೊಳ್ಳದೇ ತಮ್ಮ ಬೇಡಿಕೆಯನ್ನು ಸಂಸ್ಥೆಗಳು ಈಡೇರಿಸಬೇಕೆಂದು ಒತ್ತಾಯಿಸುತ್ತಾರೆ. ಹಾಗೆಯೇ, ಗ್ರಾಮೀಣ ಮಟ್ಟದಲ್ಲಿ ಮೀಸಲಾತಿಗೆ ಹೆಚ್ಚಿನ ಮಹತ್ವವನ್ನು ಕೊಡುವ ಅಗತ್ಯ ಇಲ್ಲ. ಏಕೆಂದರೆ ಹಿಂದುಳಿದ ಮತ್ತು ಕೆಳವರ್ಗದವರಿಗೆ ಸೇರಿದ ತೊಂದರೆಯನ್ನು ಎತ್ತಿ ಹಿಡಿಯಲು ಹಿಂದುಳಿದ ವರ್ಗಕ್ಕೆ ಸೇರಿದ ಸದಸ್ಯರೇ ಆಗಬೇಕು ಎಂದಿಲ್ಲ. ಇಲ್ಲಿ ಉಂಟಾಗುವ ತೊಂದರೆಗಳು ಪ್ರತಿಯೊಬ್ಬರಿಗೂ ಸಂಬಂಧಪಟ್ಟಿರುತ್ತದೆ ಎಂಬ ಅಭಿಪ್ರಾಯವನ್ನು ಮೀಸಲಾತಿ ವಿರೋಧಿ ಸದಸ್ಯರು ಮೀಸಲಾತಿಯನ್ನು ಸಮರ್ಥಿಸದೆಯಿರುವುದರಿಂದ ಕೆಲವು ಗ್ರಾಮ ಪಂಚಾಯಿತಿಗಳು ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ಅಧ್ಯಯನಗಳಿಂದ ತಿಳಿದುಬಂದಿದೆ.

ಒಟ್ಟಾರೆಯಾಗಿ, ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಹಿಂದುಳಿದ ಕೂಡ್ಲಿಗಿ ತಾಲೂಕಿ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಮುಂದುವರಿದ ಮುಂದುವರಿದ ಬಳ್ಳಾರಿ ತಾಲೂಕಿನ ಸದಸ್ಯರು ಮೀಸಲಾತಿಯಿಂದ ಆಯ್ಕೆಯಾಗಿ ಬಂದಿರುವ ಸಂಖ್ಯೆಯು ಹೆಚ್ಚಾಗಿದ್ದು ಅವಕಾಶವನ್ನು ಎತ್ತಿ ಹಿಡಿದಿದ್ದಾರೆ. ಅಲ್ಲದೇ, ಮೀಸಲಾತಿಯು ತಳಸಮುದಾಯವನ್ನು ಪರಿಗಣೆನೆಗೆ ತೆಗೆದುಕೊಂಡು ಅಭಿವೃದ್ಧಿಯ ಸಾಧನವಾಗಿ ಕೆಲಸ ನಿರ್ವಹಿಸುವುದನ್ನು ನಾವು ಮನಗಾಣಲಾಗಿದೆ. ಹಾಗ್ಾಗಿ ಹಿಂದುಳಿದ ಗ್ರಾಮ ಪಂಚಾಯಿತಿ ಚುನಾಯಿತ ಪುರುಷ ಮತ್ತು ಮಹಿಳಾ ಸದಸ್ಯರು ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸುವಂತಹ ಹಕ್ಕಿನ ಬಗ್ಗೆ ಅರಿವು ಮೂಡಿಸುವುದರ ಜೊತೆಗೆ ತಳಸಮುದಾದ ಅಭಿವೃದ್ಧಿಗೆ ರಾಜಕೀಯ ಭಾಗವಹಿಸುವಿಕೆ ಎಷ್ಟು ಮುಖ್ಯ ಎಂಬುದನ್ನು ಮನವರಿಕೆ ಮಾಡುವುದು ಹೆಚ್ಚು ಮುಖ್ಯವಾದದ್ದು ಇದರ ಭಾಗವಾಗಿ ಚುನಾಯಿತ ಪ್ರತಿನಿಧಿಗಳು ಮುಕ್ತವಾಗಿ ಮತ್ತು ಸ್ವಾತಂತ್ರವಾಗಿ ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸುವ ಮಹತ್ವವನ್ನು ವಾರ್ಡಿನ ಮುಖಂಡರಿಗೆ, ಸದಸ್ಯರಿಗೆ ಅವರ ಗಂಡಂದಿರಿಗೆ ಮತ್ತು ಅವರ ಪುರುಷ ಕುಟುಂಬ ಸದಸ್ಯರಿಗೆ ಚರ್ಚೆಯ ಮೂಲಕ ಮನವರಿಕೆ ಮಾಡಿಕೊಡುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ಕೋಷ್ಟಕ-೩೩: ಮಹಿಳಾ ಸದಸ್ಯರ ಭಾಗವಹಿಸುವಿಕೆ:-**

| ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|
| | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚೆಳ್ಳಗುರ್ಕಿ | |
| | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. |
| ಹಸ್ತಕ್ಷೇಪ ಇದೆ | ೫ | ೭೧.೪೨ | ೮ | ೭೨.೭೨ | ೧೦ | ೭೧.೪೨ | ೫ | ೭೧.೪೨ |
| ಇಲ್ಲ | ೨ | ೨೮.೫೭ | ೩ | ೨೭.೨೭ | ೪ | ೨೮.೫೭ | ೨ | ೨೮.೫೭ |
| | ೭ | ೧೦೦ | ೧೧ | ೧೦೦ | ೧೪ | ೧೦೦ | ೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಳಿನ ಕೋಷ್ಟಕದಲ್ಲಿ ಮಹಿಳಾ ಅಧಿಕಾರದಲ್ಲಿ ಪುರುಷರ ಹಸ್ತಕ್ಷೇಪದ ವಿವರವನ್ನು ನೀಡಲಾಗಿದೆ. ಅಂದರೆ ಮಹಿಳಾ ಮೀಸಲಾತಿ ಸ್ಪರ್ಧಾ ಕ್ಷೇತ್ರದಲ್ಲಿರುವ ಮಹಿಳೆಯರ ಸೀಟಿಗೆ ಅವರ ಗಂಡಂದಿರ ಹೆಸರುಗಳು ಚಲಾವಣೆಯಲ್ಲಿರುವುದಕ್ಕೆ ಕಾರಣಗಳು ಬಹಳಷ್ಟಿರಬಹುದು. ಆದಿಕಾಲದಿಂದಲೂ ಪುರುಷರು ಅಧಿಕಾರದ ಅವಕಾಶಗಳನ್ನು ಬಳಸಿಕೊಂಡಿರುವುದು ಎಲ್ಲಾ ಸಂಸ್ಥೆಗಳಲ್ಲಿ ಮಹಿಳೆಯರನ್ನು ಕಡೆಗಣಿಸಿರುವುದು ಮತ್ತು ಈಗಲೂ ಮಹಿಳೆಯನ್ನು ಎರಡನೇ ದರ್ಜೆ ಪ್ರಜೆಯನ್ನಾಗಿ ನೋಡುವುದು ಮುಂದುವರಿದಿದೆ. ಇದಕ್ಕೆ ಪೂರಕವೆಂಬಂತೆ ಮಹಿಳೆಯರಿಗೆ ಶಿಕ್ಷಣದ ಕೊರತೆ, ರಾಜಕೀಯ ಅನುಭವದ ಅಭಾವ, ಆಡಳಿತ ವ್ಯವಸ್ಥೆಯ ಅಜ್ಞಾನ, ಹೆಚ್ಚಿನ ಶಿಕ್ಷಣ ಮತ್ತು ತಿಳುವಳಿಕೆ ಇರುವ ಮಹಿಳೆಯರು ಚುನಾವಣೆಗೆ ಸ್ಪರ್ಧಿಸದಿರುವುದು ಮಂತಾದ ಕಾರಣಗಳು ಅಡ್ಡಿಯಾಗಿವೆ. ಪುರುಷರು ಮಾತ್ರ ಈ ಪರಿಸ್ಥಿತಿಯನ್ನು ತಮಗೆ ಉತ್ತಮ ಅವಕಾಶವಾಗಿ ಬಳಸಿಕೊಂಡು ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳಿಗೆ ಹೋದಂತಹ ಸಂದರ್ಭದಲ್ಲಿ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೭೧.೪೨ರಷ್ಟು ಚುನಾಯಿತ ಸದಸ್ಯರು ಗ್ರಾಮ ಪಂಚಾಯಿತಿಗೆ ಸಂಬಂಧಪಟ್ಟ ವಿಷಯಗಳಲ್ಲಿ ತಮ್ಮ ಪತಿ ಹಸ್ತಕ್ಷೇಪ ಮಾಡುತ್ತಾರೆ ಎಂದು ಒಪ್ಪಿಕೊಂಡಿರುವುದಾಗಿ. ಶೇ. ೨೮.೫೭ರಷ್ಟು ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರು ಹಸ್ತಕ್ಷೇಪ ಇಲ್ಲ ಮಾಡುವುದಿಲ್ಲ ಎಂದಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಶೇ. ೭೨.೭೨ರಷ್ಟು ಚುನಾಯಿತ ಸದಸ್ಯರು ಗ್ರಾಮ ಪಂಚಾಯಿತಿಗೆ ಸಂಬಂಧಪಟ್ಟ ವಿಷಯಗಳಲ್ಲಿ ತಮ್ಮ ಪತಿ ಹಸ್ತಕ್ಷೇಪ ಮಾಡುತ್ತಾರೆ ಎಂದು ಒಪ್ಪಿಕೊಂಡಿರುವುದಾಗಿ. ಶೇ. ೨೭.೨೭ರಷ್ಟು ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರು ಹಸ್ತಕ್ಷೇಪ ಇಲ್ಲ ಮಾಡುವುದಿಲ್ಲ ಎಂದಿದ್ದಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ

ಗ್ರಾಮ ಪಂಚಾಯಿತಿಯಲ್ಲಿ ಶೇ. ೭೧.೪೨ರಷ್ಟು ಚುನಾಯಿತ ಸದಸ್ಯರು ಗ್ರಾಮ ಪಂಚಾಯಿತಿಗೆ ಸಂಬಂಧಪಟ್ಟ ವಿಷಯಗಳಲ್ಲಿ ತಮ್ಮ ಪತಿ ಹಸ್ತಕ್ಷೇಪ ಮಾಡುತ್ತಾರೆ ಎಂದು ಒಪ್ಪಿಕೊಂಡಿರುವುದಾಗಿ. ಶೇ. ೨೮.೫೭ರಷ್ಟು ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರು ಹಸ್ತಕ್ಷೇಪ ಇಲ್ಲ ಮಾಡುವುದಿಲ್ಲ ಎಂದಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಶೇ. ೭೧.೪೨ರಷ್ಟು ಚುನಾಯಿತ ಸದಸ್ಯರು ಗ್ರಾಮ ಪಂಚಾಯಿತಿಗೆ ಸಂಬಂಧಪಟ್ಟ ವಿಷಯಗಳಲ್ಲಿ ತಮ್ಮ ಪತಿ ಹಸ್ತಕ್ಷೇಪ ಮಾಡುತ್ತಾರೆ ಎಂದು ಒಪ್ಪಿಕೊಂಡಿರುವುದಾಗಿ. ಶೇ. ೨೮.೫೭ರಷ್ಟು ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರು ಹಸ್ತಕ್ಷೇಪ ಮಾಡುವುದಿಲ್ಲ ಎಂದಿದ್ದಾರೆ.

ಅಲ್ಲದೇ, ತಮಗೆ ವಹಿಸಿದ ಕೆಲಸವನ್ನು ಸಮರ್ಥವಾಗಿ ಮಾಡಲು ತಮ್ಮ ಪತಿಯ ಅವಶ್ಯಕ ಎನ್ನುತ್ತಾ ಆದರೆ ಅವರಿಗೆ ನಮ್ಮ ಪರವಾಗಿ ಮಾತನಾಡಲು ಅನುಮತಿಕೊಟ್ಟಿಲ್ಲ ಇಂತಹ ಸಂದರ್ಭದಲ್ಲಿ ಸದಸ್ಯೆಯರ ಪತಿ ಮೀಟಿಂಗ್ ನಡೆಯುವ ಹಾಲ್‌ನಿಂದ ಹೊರಗಿದ್ದು ಮೀಟಿಂಗ್ ಮುಗಿದ ನಂತರ ಕರೆದುಕೊಂಡ ಹೋದ ಘಟನೆಗಳೂ ಇದೆ. ಕೆಲವು ಸಲ ಮಹಿಳಾ ಸದಸ್ಯೆಯರು ತಮ್ಮ ಪತಿಯೊಂದಿಗೆ ಅಥವಾ ಮಗನೊಂದಿಗೆ ಸಭೆಗೆ ಹಾಜರಾದ ಘಟನೆಗಳೂ ಇವೆ. ಇಂತಹ ಸಂದರ್ಭದಲ್ಲಿ ಅವರನ್ನು ಸಭಾಂಗಣಕ್ಕೆ ಸೇರಿಸಿಲ್ಲ ಮತ್ತು ತಮ್ಮ ಪತ್ನಿಯ ಪರವಾಗಿ ಮಾತನಾಡಲು ಅನುಮತಿ ಕೊಟ್ಟಿಲ್ಲ. ಅಲ್ಲದೇ ಸ್ಥಳೀಯ ಸಂಸ್ಥೆಗಳ ಮಟ್ಟದಲ್ಲಿ ಮಹಿಳಾ ಮೀಸಲಾತಿ ಕ್ಷೇತ್ರದಲ್ಲಿ ಮಹಿಳಾ ಸದಸ್ಯೆಯರ ಗಂಡಂದಿರು ತಮ್ಮ ಪತ್ನಿ ಮಾಡಬೇಕಿದ್ದ ಕೆಲಸಗಳಲ್ಲಿ ತಲೆ ಹಾಕುತ್ತಾರೆ. ಹಾಗೂ ಹೆಚ್ಚಿನ ಸಲ ಅವರೇ ನಿರ್ಧಾರ ತೆಗೆದುಕೊಳ್ಳುತ್ತಾರೆ. ಮಹಿಳಾ ಸದಸ್ಯೆ ವಿದ್ಯಾವಂತೆಯಾಗಿದ್ದರೆ ಗ್ರಾಮ ಪಂಚಾಯಿತಿಗಳ ಕೆಲಸ ಕಾರ್ಯಗಳಲ್ಲಿ ಪತಿಯ ಹಸ್ತಕ್ಷೇಪ ಹೆಚ್ಚಾಗಿರುವುದಿಲ್ಲ. ಮಹಿಳಾ ಸದಸ್ಯೆಯರೇ ತಮ್ಮ ಜವಾಬ್ದಾರಿಗಳನ್ನು ನಡೆಸಿಕೊಂಡು ಹೋಗುತ್ತಾರೆ. ಒಟ್ಟಾರೆಯಾಗಿ, ಮುಂದುವರಿದ ಬಳ್ಳಾರಿ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ಗ್ರಾಮ ಪಂಚಾಯಿತಿಯ ಸದಸ್ಯರಲ್ಲಿ ಗಂಡದಿರು ತಮ್ಮ ಪತ್ನಿಯ ಸ್ಥಳೀಯ ಅಧಿಕಾರದಲ್ಲಿ ಹೆಚ್ಚಿನ ರೀತಿಯಲ್ಲಿ ಹಸ್ತಕ್ಷೇಪ ಮಾಡುವುದನ್ನು ಅಧ್ಯಯನದಿಂದ ಕಂಡುಬಂದಿದೆ. ಗ್ರಾಮ ಪಂಚಾಯಿತಿಯಲ್ಲಿ ಮಹಿಳಾ ಪ್ರತಿನಿಧಿಗಳ ಸಂದರ್ಶನದ ಸಮಯದಲ್ಲಿ ಗೆದ್ದ ಮಹಿಳಾ ಅಭ್ಯರ್ಥಿಯನ್ನು ಸ್ವತಂತ್ರವಾಗಿ ಕೆಲಸ ನಿರ್ವಹಿಸಲು ಬಿಡದಿರುವುದು, ಸಭೆಗಳಿಗೆ ಹಿಂಬಾಲಿಸುವುದು, ಮಹಿಳೆಯನ್ನು ಬದಿಗೊತ್ತಿ ತಾನೇ ಸದಸ್ಯನಂತೆ ವ್ಯವಹರಿಸುವುದು, ಹಾಗೇ ಸಮುದಾಯ ಸಹ ಗಂಡಸರನ್ನೇ ಸದಸ್ಯರೆಂಬತೆ ಪರಿಗಣಿಸಿ ಎಲ್ಲಾ ಕಾರ್ಯಕ್ಕೂ ಅವರನ್ನೇ ಸಂಪರ್ಕಿಸುವಂತಹ ಕಾರಣಗಳಿಂದಾಗಿ ಮಹಿಳೆಯರು ಸಮರ್ಥ ನಾಯಕರಾಗಿ ಅಧಿಕಾರ

ನಡೆಸಲು ಸಾಧ್ಯವಾಗುತ್ತಿಲ್ಲ. ಮಹಿಳೆಯರಿಗೆ ಕನಿಷ್ಠ ಶಿಕ್ಷಣ ಮಟ್ಟವನ್ನು ನಿಗದಿಪಡಿಸದೆ ಗಂಡದಿರ ಹಸ್ತಕ್ಷೇಪ ಹೆಚ್ಚಾಗಿರುವುದರಿಂದ ಮಹಿಳೆಯರು ಸ್ಥಳೀಯ ರಾಜಕೀಯದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಅರಿವಿನ್ನು ಹೊಂದದೆ ಹಾಗೂ ಭಾಗವಹಿಸದೆ ಮಹಿಳೆಯರ ಸಬಲೀಕರಣಗೊಳದೆ ಇಂತಹ ಹಲವು ಕಾರಣದಿಂದ ಗ್ರಾಮವು ಹಿಂದುಳಿಯಿತು ಎಂದು ಹೇಳಬಹುದಾಗಿದೆ. ಹಾಗಾಗಿ ಸ್ಥಳೀಯ ಮಟ್ಟದಲ್ಲಿ ಚುನಾಯಿತ ಮಹಿಳೆಯರಿಗೆ ಕನಿಷ್ಠ ಶಿಕ್ಷಣ ಮಟ್ಟವನ್ನು ಹೊಂದಿದರೆ ಪಂಚಾಯಿತಿ ಅಧಿಕಾರಿಗಳಿಂದ ಗ್ರಾಮ ಪಂಚಾಯಿತಿಗಳಿಗೆ ಸಂಬಂಧಪಟ್ಟ ಕೆಲಸಗಳನ್ನು ತಮ್ಮಿಷ್ಟ ಬಂದಂತೆ ಮಾಡಿಕೊಂಡು ಹೋಗುವುದನ್ನು ತಪ್ಪಿಸಬಹುದು ಅಧ್ಯಕ್ಷರು ವಿಷಯಗಳನ್ನು ಓದಿ ಅರ್ಥ ಮಾಡಿಕೊಳ್ಳದೇ ಸಹಿ ಹಾಕುವುದನ್ನು ತಪ್ಪಿಸಬಹುದು. ಈ ಹಿನ್ನೆಲೆಯಲ್ಲಿ, ಮಹಿಳೆಯರ ಸಾಮರ್ಥ್ಯದ ಮೇಲೆ ನಂಬಿಕೆ ಹೊಂದದೆ, ಅವರು ಸಂಪೂರ್ಣ ಸ್ವಾತಂತ್ರ್ಯ ಹಾಗೂ ಅಧಿಕಾರವನ್ನು ಅನುಭವಿಸಲು ಬಿಡದಿರುವುದು ವಿಷಾದಕರ ಸಂಗತಿಯಾಗಿದೆ. ಈ ವಿಶ್ಲೇಷಣೆಯಿಂದ ತಿಳಿದುಬರುವ ಸಂಗತಿಯೆಂದರೆ ಮಹಿಳೆಯರಿಗೆ ಹೆಚ್ಚಿನ ಮಟ್ಟದಲ್ಲಿ ಶಿಕ್ಷಣ ಮತ್ತು ಪುರುಷರಿಗಿಂತ ನಾವು ಏನು ಕಡಿಮೆ ಇಲ್ಲ ಎನ್ನವಂತಹ ಭಾವನೆಗಳನ್ನು ಸಮಾಜದಲ್ಲಿ ಮೂಡಿಸುವಂತಹ ಆತ್ಮಸ್ಥೈರ್ಯವನ್ನು ನೀಡುವ ಮೂಲಕ ಅವರಿಗೆ ಸ್ಥಳೀಯ ರಾಜಕೀಯದ ಬಗ್ಗೆ ಹೆಚ್ಚಿನ ಅರಿವು ಮತ್ತು ಭಾಗವಹಿಸುವಂತಹ ತರಬೇತಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವ ತುರ್ತು ಅನಿವಾರ್ಯತೆ ಇದೆ ಎಂದು ಹೇಳಲಾಗಿದೆ.

**ಕೋಷ್ಟಕ-೩೪: ವಾರ್ಡ್ ಸಭೆಯಲ್ಲಿ ಅರ್ಹ ಫಲಾನುಭವಿಗಳ ವಿವರ : –**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. |
| ವಾರ್ಡ್ ಸಭೆಯಲ್ಲಿ ಅರ್ಹ ಫಲಾನುಭವಿಗಳನ್ನು ಗುರುತಿಸುವಾಗ ಅದರಲ್ಲಿ ನಿಮ್ಮ ಸಂಬಂಧಿಕರನ್ನು ಏನಾದರೂ ಗುರುತಿಸಿದ್ದೀರಾ ? | ಗುರುತಿಸಿದ್ದೀವಿ | ೯ | ೪೭.೩೭ | ೧೨ | ೪೮.೦೦ | ೨೧ | ೭೭.೭೭ | ೧೩ | ೭೬.೪೭ |
| | ಇಲ್ಲ | ೧೦ | ೫೨.೬೩ | ೧೩ | ೫೨ | ೬ | ೨೨.೨೨ | ೪ | ೨೩.೫೩ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ಹೇಳಲಾದ ಅಂಕೆ-ಅಂಶಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ವಾಸ ಮಾಡುವ ಜನರು ಇವತ್ತು ಹೆಚ್ಚಿನ ಸಂಖ್ಯೆಯಲ್ಲಿ ವಸತಿ ರಹಿತರಾಗಿದ್ದುಕೊಂಡು ಜೀವನ ಸಾಗಿಸುತ್ತಿದ್ದಾರೆ. ಇದಕ್ಕಾಗಿ ಸರ್ಕಾರ ಅವರಿಗಾಗಿ ಸಾಕಷ್ಟು ರೀತಿಯ ಪ್ರಯತ್ನಗಳನ್ನು ಅಳವಡಿಸಿದೆ. ಇದರ ಬಗ್ಗೆ ಹೆಚ್ಚಿನ ಜನಕ್ಕೆ ಸರಿಯಾದ ಮಾಹಿತಿಯಿಲ್ಲದೆ ಫಲಾನುಭವಿಗಳಿಗೆ ಅರ್ಹತೆ ಇದ್ದರೂ ಇವತ್ತು ಸಮರ್ಪಕವಾದ ವಸತಿಯನ್ನು ಕಲ್ಪಿಸಿಕೊಡಲು ಆಗುತ್ತಿಲ್ಲ. ಹಾಗಾಗಿ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳಲ್ಲಿ ವಸತಿ ಫಲಾನುಭವಿಗಳ ಆಯ್ಕೆ ವಿಧಾನದ ಪ್ರಮಾಣವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಸದಸ್ಯರಲ್ಲಿ ಶೇ. ೪೭.೩೬ರಷ್ಟು ಚುನಾಯಿತ ಸದಸ್ಯರು ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಸಂಬಂಧಿಕರನ್ನು ಪರಿಗಣಿಸುತ್ತೇವೆ ಎಂದು ಹೇಳಿಕೊಂಡಿದ್ದಾರೆ. ಅಂತೆಯೇ, ಶೇ. ೫೨.೬೩ರಷ್ಟು ಚುನಾಯಿತ ಸದಸ್ಯರು ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಸಂಬಂಧಿಕರನ್ನು ಪರಿಗಣಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಹಾಗೆಯೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಸದಸ್ಯರಲ್ಲಿ ಶೇ. ೪೮.೦೦ರಷ್ಟು ಚುನಾಯಿತ ಸದಸ್ಯರು ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಸಂಬಂಧಿಕರನ್ನು ಪರಿಗಣಿಸುತ್ತೇವೆ ಎಂದು ಹೇಳಿಕೊಂಡಿದ್ದಾರೆ. ಅಂತೆಯೇ, ಶೇ. ೫೨.೦೦ರಷ್ಟು ಚುನಾಯಿತ ಸದಸ್ಯರು ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಸಂಬಂಧಿಕರನ್ನು ಪರಿಗಣಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಸದಸ್ಯರಲ್ಲಿ ಶೇ.೭೭.೭೭ರಷ್ಟು ಚುನಾಯಿತ ಸದಸ್ಯರು ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಸಂಬಂಧಿಕರನ್ನು ಪರಿಗಣಿಸುತ್ತೇವೆ ಎಂದು ಹೇಳಿಕೊಂಡಿದ್ದಾರೆ. ಅಂತೆಯೇ, ಶೇ. ೨೨.೨೨ರಷ್ಟು ಚುನಾಯಿತ ಸದಸ್ಯರು ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಸಂಬಂಧಿಕರನ್ನು ಪರಿಗಣಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಸದಸ್ಯರಲ್ಲಿ ಶೇ. ೭೬.೪೭ರಷ್ಟು ಚುನಾಯಿತ ಸದಸ್ಯರು ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಸಂಬಂಧಿಕರನ್ನು ಪರಿಗಣಿಸುತ್ತೇವೆ ಎಂದು ಹೇಳಿಕೊಂಡಿದ್ದಾರೆ. ಅಂತೆಯೇ, ಶೇ. ೨೩.೫೨ರಷ್ಟು ಚುನಾಯಿತ ಸದಸ್ಯರು ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಸಂಬಂಧಿಕರನ್ನು ಪರಿಗಣಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ, ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ಅದರಲ್ಲೂ ಅಪ್ಪಯ್ಯನಹಳ್ಳಿ

ಗ್ರಾಮ ಪಂಚಾಯಿತಿಯಲ್ಲಿ ಯಾವ ಸಂಬಂಧಿಕರನ್ನು ಇವರು ನಮ್ಮವರು ಅವರು ನಮ್ಮವರು ಎಂದು ಭೇದ ಎಣಿಸದೆ ಸರ್ಕಾರದಿಂದ ಬಂದ ಸೌಲಭ್ಯಗಳನ್ನು ಹೆಚ್ಚಿನ ರೀತಿಯಲ್ಲಿ ಸಮನಾಗಿ ಹಂಚುವ ಕೆಲಸವನ್ನು ಮಾಡುತ್ತಿದ್ದಾರೆ ಎಂದು ತಿಳಿಯಲಾಗಿದೆ. ಇಲ್ಲಿ ಗಮನಿಸಬೇಕಾದ ಒಂದು ಅಂಶವೇನೆಂದರೆ, ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯೂ ಸರ್ಕಾರವು ನೀಡುವಂತಹ ಸೇವಾ ಸೌಲಭ್ಯಗಳ ಬಗ್ಗೆ ತಕ್ಕಮಟ್ಟಿನ ಪ್ರಮಾಣದಲ್ಲಿ ತಿಳಿವಳಿಕೆಯನ್ನು ಹೊಂದಿ ಅವುಗಳನ್ನು ಹಂಚಿಕೆ ಮಾಡುವಲ್ಲಿ ಯಶಸ್ವಿಯಾಗಿರುವುದು ತಿಳಿದುಬಂದಿದೆ. ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಸದಸ್ಯರು ಫಲಾನುಭವಿಗಳನ್ನು ಆಯ್ಕೆ ಮಾಡಿ ಯಾವ ತಾರತ್ಯಮ ಮಾಡದೆ ಇರುವಲ್ಲಿಯೇ ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರಲ್ಲಿ ಗರಿಷ್ಟ ಮಿತಿಯನ್ನು ಮುಟ್ಟುವಲ್ಲಿ ವಿಫಲವಾಗಿರುವುದರಿಂದ ಬಡೇಲಡಕು ಗ್ರಾಮ ಪಂಚಾಯಿತಿಯನ್ನು ಹೊರತುಪಡೆಸಿ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ಹಿಂದುಳಿಯಲಿಕ್ಕೆ ಕಾರಣವಾಗಿದೆ ಎನ್ನಬಹುದಾಗಿದೆ. ಗ್ರಾಮ ಪಂಚಾಯಿತಿಗಳನ್ನು ಯಶಸ್ವಿಯಾಗಿ ನಿರ್ವಹಿಸುವುದಕ್ಕೆ ಅವರಿಗೆ ಸಂಪನ್ಮೂಲ ಮತ್ತು ರಾಜಕೀಯ ಅಧಿಕಾರವೂ ಕಾರಣವಾಗಿದೆ. ಇದರ ಪರಿಣಾಮ ಮೂಲ ಅಗತ್ಯವಾದ ವಸತಿ ಸಮಸ್ಯೆ ಅವಗಣನೆಗೆ ತುತ್ತಾಗಿವೆ. ಆದ್ದರಿಂದ ಗ್ರಾಮಗಳು ಮಾನವ ಸಂಪನ್ಮೂಲ ಅಭಿವೃದ್ಧಿಯ ಕೇಂದ್ರಗಳಾಗುವ ಮುನ್ನೋಟ ಇಟ್ಟುಕೊಳ್ಳಬೇಕೇ ಹೊರತು ಅವು ಕೆಲವೇ ಕೆಲವರ ಸಂಪತ್ತಿನ ಕೋಶಗಳಂತೆ ಆಗಬಾರದು. ಈ ಹಿನ್ನೆಲೆಯಲ್ಲಿ ಗ್ರಾಮ ಪಂಚಾಯಿತಿಗಳ ವ್ಯವಸ್ಥಿತ ಯೋಜನೆಯು ಯಾವ ಸಂಬಂಧಿಕರನ್ನು ಪರಿಗಣಸದೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಜಾತಿಗಳನ್ನಾಗಿ ಪರಿಗಣಿಸಿ ಯಾರು ಯೋಜನೆಗೆಯಾರು ಅರ್ಹರಿದ್ದಾರೆ ಅಂತಹವರನ್ನು ಫಲಾನುಭವಿಗಳನ್ನಾಗಿ ಆರಿಸಿಕೊಂಡು, ಅವರ ಸಮಸ್ಯೆ ಮತ್ತು ಆತಂಕವನ್ನೂ ಗಮನದಲ್ಲಿಟ್ಟುಕೊಂಡು ರೂಪಗೊಳ್ಳುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

**ಕೋಷ್ಟಕ-೩.೫: ಮಹಿಳಾ ಫಲಾನುವಿಗಳ ವಿವರ :-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಿಳ್ಳಗುರ್ಕಿ | |
| ಮಹಿಳಾ ಫಲಾನುವಿಗಳಿಗೆ ಪ್ರಥಮ ಆದ್ಯತಾ ನೀಡಿದ್ದಾರೆಯೇ ? | ವಿವರಗಳು | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. | ಕುಟುಂಬ ಗಳು | ಶೇ. |
| | ನೀಡಿದ್ದೇವೆ | ೧೩ | ೬೮.೪೨ | ೨೦ | ೮೦ | ೨೧ | ೭೭.೭೭ | ೧೩ | ೭೬.೪೭ |
| | ಇಲ್ಲ | ೬ | ೩೧.೫೭ | ೫ | ೨೦ | ೬ | ೨೨.೨೨ | ೪ | ೨೩.೫೨ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ಕೊಡಲಾದ ಅಂಶಗಳಲ್ಲಿ ಗ್ರಾಮ ಪಂಚಾಯಿತಿಯಲ್ಲಿ ಫಲಾನುಭವಿಗಳ ಆಯ್ಕೆ ಮಾಡುವಲ್ಲಿ ಮಹಿಳೆಯರಿಗೆ ನೀಡಿರುವ ಆದ್ಯತೆಯ ವಿವರವನ್ನು ತೋರಿಸಲಾಗಿದೆ. ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳಲ್ಲಿ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತ ಸದಸ್ಯರಲ್ಲಿ ಶೇ. ೬೮.೪೨ರಷ್ಟು ಚುನಾಯಿತ ಸದಸ್ಯರು ನಾವು ಫಲಾನುಭವಿ ಆಯ್ಕೆ ಮಾಡುವಲ್ಲಿ ಪ್ರಥಮ ಆದ್ಯತೆಯನ್ನು ಮಹಿಳೆಯರಿಗೆ ನೀಡಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ. ೩೧.೫೭ರಷ್ಟು ಸದಸ್ಯರು ನಾವು ಆಯ್ಕೆ ಮಾಡುವಾಗ ಮಹಿಳೆಯರಿಗೆ ಆದ್ಯತೆಯನ್ನು ನೀಡುವುದಿಲ್ಲ ಎಂದಿದ್ದಾರೆ. ಅಂತೆಯೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತ ಸದಸ್ಯರಲ್ಲಿ ಶೇ. ೮೦.೦೦ ರಷ್ಟು ಚುನಾಯಿತ ಸದಸ್ಯರು ನಾವು ಫಲಾನುಭವಿ ಆಯ್ಕೆ ಮಾಡುವಲ್ಲಿ ಪ್ರಥಮ ಆದ್ಯತೆಯನ್ನು ಮಹಿಳೆಯರಿಗೆ ನೀಡಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ. ೨೦.೦೦ರಷ್ಟು ಸದಸ್ಯರು ನಾವು ಆಯ್ಕೆ ಮಾಡುವಾಗ ಮಹಿಳೆಗೆ ಆದ್ಯತೆಯನ್ನು ನೀಡುವುದಿಲ್ಲ ಎಂದಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತ ಸದಸ್ಯರಲ್ಲಿ ಶೇ. ೭೭.೭೭ರಷ್ಟು ಚುನಾಯಿತ ಸದಸ್ಯರು ನಾವು ಫಲಾನುಭವಿ ಆಯ್ಕೆ ಮಾಡುವಲ್ಲಿ

ಪ್ರಥಮ ಆದ್ಯತೆಯನ್ನು ಮಹಿಳೆಯರಿಗೆ ನೀಡಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ. ೨೨.೨೨ರಷ್ಟು ಸದಸ್ಯರು ನಾವು ಆಯ್ಕೆ ಮಾಡುವಾಗ ಮಹಿಳೆಗೆ ಆದ್ಯತೆಯನ್ನು ನೀಡುವುದಿಲ್ಲ ಎಂದಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತ ಸದಸ್ಯರಲ್ಲಿ ಶೇ. ೭೬.೪೭ರಷ್ಟು ಚುನಾಯಿತ ಸದಸ್ಯರು ನಾವು ಫಲಾನುಭವಿ ಆಯ್ಕೆ ಮಾಡುವಲ್ಲಿ ಪ್ರಥಮ ಆದ್ಯತೆಯನ್ನು ಮಹಿಳೆಯರಿಗೆ ನೀಡಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶೇ. ೨೩.೫೨ರಷ್ಟು ಸದಸ್ಯರು ನಾವು ಆಯ್ಕೆ ಮಾಡುವಾಗ ಮಹಿಳೆಗೆ ಆದ್ಯತೆಯನ್ನು ನೀಡುವುದಿಲ್ಲ ಎಂದಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಹೇಳಿಕೆಗಳನ್ನು ಪರಿಗಣಿಸಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರೆ ಹೆಚ್ಚಿನ ಪ್ರಮಾಣದಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡುವಲ್ಲಿ ಮಹಿಳೆಯನ್ನು ಪ್ರಥಮ ಆದ್ಯತೆಯನ್ನಾಗಿ ಮಾಡಿಕೊಂಡಿದ್ದಾರೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಮುಂದುವರಿದ ತಾಲೂಕಿನಲ್ಲಿ ಗ್ರಾಮ ಪಂಚಾಯಿತಿಯಲ್ಲಿ ಮಹಿಳೆಯು ತಮ್ಮ ಸಮಸ್ಯೆಗಳನ್ನು ಹೇಳುತ್ತಾ ರಾಜಕೀಯದಲ್ಲಿ ಭಾಗವಹಿಸದೆ ಸರ್ಕಾರ ನೀಡುವ ಸೌಲಭ್ಯಗಳನ್ನು ಪಡೆಯುವಲ್ಲಿ ಕಡಿಮೆ ಸಂಖ್ಯೆಯಲ್ಲಿ ಇರುವುದನ್ನು ಗಮನಿಸಲಾಗಿದೆ. ಅಂತೆಯೇ ಹಿಂದುಳಿದ ತಾಲೂಕಿನಲ್ಲಿ ಮಹಿಳೆಯು ತಮ್ಮ ವಸತಿ ಇಲ್ಲದೆಯಿರುವುದನ್ನು ಗ್ರಾಮಸಭೆಯಲ್ಲಿ, ಪಂಚಾಯಿತಿಗಳಿಗೆ ಹೋಗಿ ಸದಸ್ಯರಿಗೆ ಹತ್ತಿರ ಹೋಗಿ ಹತ್ತು ಹಲವು ಪ್ರಶ್ನೆಗಳನ್ನು ಕೇಳಿ ರಾಜಕೀಯದಲ್ಲಿ ಭಾಗವಹಿಸುತ್ತಾ ಸೌಲಭ್ಯಗಳನ್ನು ಪಡೆಯುವಲ್ಲಿ ಮಹಿಳೆಯರು ತಕ್ಕಮಟ್ಟಿಗೆ ಯಶಸ್ವಿಯನ್ನು ಕಂಡಿದ್ದಾರೆ ಎಂದು ಹೇಳಬಹುದಾಗಿದೆ. ಕೊನೆಯದಾಗಿ, ಇಲ್ಲಿ ಮುಂದುವರಿದ ಮತ್ತು ಹಿಂದುಳಿದ ತಾಲೂಕುಗಳಲ್ಲಿರುವ ಮಹಿಳೆರ ಸಮಸ್ಯೆಯು ಒಂದೇ ಆಗಿರುತ್ತದೆ ಹಾಗಾಗಿ ಪ್ರತಿಯೊಬ್ಬರೂ ಮಾತಾನಾಡಿದಾಗ ಮಾತ್ರ ತಮ್ಮ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವ ಮೂಲಕ ಮಹಿಳೆಯರನ್ನು ಸಬಲೀಕರಣನ್ನಾಗಿ ಮಾಡುವ ಅಗತ್ಯವಿದೆ ಎಂದು ತಿಳಿದುಬಂದಿದೆ.

**ಕೋಷ್ಟಕ-೩.೬: ಗ್ರಾಮಸಭೆಗಳಲ್ಲಿ ನಡೆದ ಚರ್ಚೆಗಳ ಮೇಲೆ ಪರ-ವಿರೋಧಗಳ ಮಾಹಿತಿಯ ವಿವರ:-**

| ಗ್ರಾಮಸಭೆಗಳಲ್ಲಿ ನಡೆದ ಚರ್ಚೆಗಳ ಮೇಲೆ ಪರ-ವಿರೋಧಗಳ ಮಾಹಿತಿಯನ್ನು ಸೂಚನಾ ಫಲಕದಲ್ಲಿ ಹಾಕಲಾಗುತ್ತದಯೇ? | ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| | ಹೌದು | ೧೭ | ೮೯.೪೭ | ೨೫ | ೧೦೦ | ೨೭ | ೧೦೦ | ೧೭ | ೧೦೦ |
| | ಇಲ್ಲ | ೨ | ೧೦.೫೨ | - | - | - | - | - | - |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಜಿಲ್ಲೆಯ ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ನಡೆಯುವ ಚರ್ಚೆಯ ವಿವರವನ್ನು ಈ ಕೆಳಗಿನಂತೆ ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತ ಸದಸ್ಯರನ್ನು ಸಂದರ್ಶಿಸಿದಾಗ ಅದರಲ್ಲಿ ಶೇ.೮೯.೪೭ರಷ್ಟು ಸದಸ್ಯರು ನಾವು ಪಂಚಾಯಿತಿಯ ಸಾಮಾನ್ಯ ಸಭೆ, ಗ್ರಾಮಸಭೆ ಮತ್ತು ವಿಶೇಷ ಸಭೆ ಇನ್ನಿತರ ಸಭೆಗಳಲ್ಲಿ ಮಾಡಿದ ಚರ್ಚೆಯಲ್ಲಿ ನಡೆದ ಪರ-ವಿರೋಧಗಳ ಮಾಹಿತಿಯನ್ನು ಸೂಚನ ಫಲಕದಲ್ಲಿ ಹಾಕಲಾಗುತ್ತದೆ ಎಂದು ಹೇಳಿಕೊಂಡಿದ್ದಾರೆ. ಉಳಿದ ಶೇ. ೧೦.೫೨ರಷ್ಟು ಸದಸ್ಯರು ಸಭೆಯಲ್ಲಿ ನಡೆದ ಚರ್ಚೆಗಳು, ಅಭಿವೃದ್ಧಿ ಕಾರ್ಯಗಳ ಬಗ್ಗೆ ತೀರ್ಮಾನಗಳು ಯಾವುದೇ ಮಾಹಿತಿ ಸಾರ್ವಜನಿಕವಾಗಿ ಸೂಚನಾಫಲಕದಲ್ಲಿ ಹಾಕಲಾಗುವುದಿಲ್ಲ ಎಂದು ಹೇಳಿರುವುದು ಅಧ್ಯಯನಗಳಿಂದ ತಿಳಿದುಬಂದಿದೆ. ಆದರೆ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತ ಸದಸ್ಯರನ್ನು ಸಂದರ್ಶಿಸಿದಾಗ ಅದರಲ್ಲಿ ಶೇ. ೧೦೦ಕ್ಕೆ ೧೦೦ರಷ್ಟು ಸದಸ್ಯರು ನಾವು ಪಂಚಾಯಿತಿಯ ಸಾಮಾನ್ಯ ಸಭೆ, ಗ್ರಾಮಸಭೆ ಮತ್ತು ವಿಶೇಷ ಸಭೆ ಇನ್ನಿತರ ಸಭೆಗಳಲ್ಲಿ ಮಾಡಿದ ಚರ್ಚೆಯಲ್ಲಿ ನಡೆದ ಪರ-ವಿರೋಧಗಳ ಮಾಹಿತಿಯನ್ನು ಸೂಚನ ಫಲಕದಲ್ಲಿ ಹಾಕಲಾಗುತ್ತದೆ

ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತ ಸದಸ್ಯರ ಇದ್ದು, ಅದರಲ್ಲಿ ಶೇ. ೧೦೦ಕ್ಕೆ ೧೦೦ರಷ್ಟು ಸದಸ್ಯರು ನಾವು ಪಂಚಾಯಿತಿಯ ಸಾಮಾನ್ಯ ಸಭೆ, ಗ್ರಾಮಸಭೆ ಮತ್ತು ವಿಶೇಷ ಸಭೆ ಇನ್ನಿತರ ಸಭೆಗಳಲ್ಲಿ ಮಾಡಿದ ಚರ್ಚೆಯಲ್ಲಿ ನಡೆದ ಪರ-ವಿರೋಧಗಳ ಮಾಹಿತಿಯನ್ನು ಸೂಚನ ಫಲಕದಲ್ಲಿ ಹಾಕಲಾಗುತ್ತದೆ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೧೦೦ಕ್ಕೆ ೧೦೦ರಷ್ಟು ಸದಸ್ಯರು ಅಲ್ಲಿಯೂ ಸಹ ನಾವು ಪಂಚಾಯಿತಿಯ ಸಾಮಾನ್ಯ ಸಭೆ, ಗ್ರಾಮಸಭೆ ಮತ್ತು ವಿಶೇಷ ಸಭೆ ಇನ್ನಿತರ ಸಭೆಗಳಲ್ಲಿ ಮಾಡಿದ ಚರ್ಚೆಯಲ್ಲಿ ನಡೆದ ಪರ-ವಿರೋಧಗಳ ಮಾಹಿತಿಯನ್ನು ಸೂಚನ ಫಲಕದಲ್ಲಿ ಹಾಕಲಾಗುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಹೇಳಿಕೆಗಳಿಂದ ತಿಳಿಯಬಹುದಾದ ಅಂಶವೆಂದರೆ, ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು ಮತ್ತು ಬಡೇಲಡಕು ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರಲ್ಲಿ ತಮ್ಮ ಗ್ರಾಮದ ಕುಡಿಯುವ ನೀರು, ಚರಂಡಿ ವ್ಯವಸ್ಥೆ, ಶೌಚಾಲಯ, ರಸ್ತೆ ಮತ್ತು ಆರೋಗ್ಯಕ್ಕೆ ಸಂಬಂಧಿದ ಸಮಸ್ಯೆಗಳ ಬಗ್ಗೆ ಹಿರಿಯ ಮುಖಂಡರ ಮತ್ತು ರಾಜಕೀಯ ನಾಯಕರ ಜೊತೆ ಮಾತಾನಾಡದೆ ಹೆಚ್ಚಿನ ಪ್ರಮಾಣದಲ್ಲಿ ರಾಜಕೀಯದಲ್ಲಿ ಭಾಗವಹಿಸದೆ ಸುಖಾಸುಮ್ಮನೆ ಪಂಚಾಯಿತಿ ಸದಸ್ಯರಾಗಿ ಇರುವುದನ್ನು ಕಾಣಲಾಗುತ್ತದೆ. ಅಂದರೆ ಆದ ಚರ್ಚೆಗಳನ್ನು ಸೂಚನ ಫಲಕದಲ್ಲಿ ಹಾಕುವ ವಿಷಯದ ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ನೀಡದೆ ತಮ್ಮ ಗ್ರಾಮ ಸರ್ಕಾರಗಳ ಪಾಲ್ಗೊಳ್ಳುವ ಪ್ರಕ್ರಿಯೆಯನ್ನು ಎಷ್ಟು ಎಂದು ತಿಳಿಯಬಹುದಾಗಿದೆ. ಇಂತಹ ಅಂಶಗಳಿಂದ ರಾಜಕೀಯ ಅರಿವು ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚಿನ ರೀತಿಯಲ್ಲಿ ಭಾಗವಹಿಸದೆ ಇರುವುದರಿಂದ ಸ್ಥಳೀಯವಾಗಿ ರಾಜಕೀಯ ಇಚ್ಛಾಶಕ್ತಿ ಕಾಡುವುದರಿಂದ ಆ ಪಂಚಾಯಿತಯು ಹಿಂದುಳಿಯಲಿಕ್ಕೆ ಕಾರಣವಾಯಿತು ಎನ್ನಬಹುದಾಗಿದೆ. ಇದರ ಪರಿಣಾಮವಾಗಿ ಹಿಂದುಳಿದ ಗ್ರಾಮ ಪಂಚಾಯಿತಿಯು

ಪ್ರಬಲ ರಾಜಕೀಯ ಇಚ್ಛಾಶಕ್ತಿಯ ತೋರಿಸುವ ಮೂಲಕ ಕನಿಷ್ಠ ಮೂಲಭೂತ ಸೌಲಭ್ಯಗಳು, ಆರೋಗ್ಯಕ್ಕೆ ಸಂಬಂಧಿಸಿದ, ಶಿಕ್ಷಣ, ಮತ್ತು ಆಧುನಿಕ ಸೌಲಭ್ಯಗಳನ್ನು ಜನರ ಮನೆ ಬಾಗಿಲಿಗೆ ತಲುಪಿಸುವಲ್ಲಿ ಚುನಾಯಿತ ಪ್ರತಿನಿಧಿಗಳು ಆಸಕ್ತಿಯನ್ನು ತೋರಿಸುತ್ತಾ ಹಿಂದುಳಿದ ಗ್ರಾಮವನ್ನು ಅಭಿವೃದ್ಧಿ ಗ್ರಾಮವನ್ನಾಗಿ ಮಾಡುವ ಅನಿವಾರ್ಯತೆ ಇದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ-೩೭: ನಿಮ್ಮ ಗ್ರಾಮ ಪಂಚಾಯಿತಿಗಳಲ್ಲಿ ವಸತಿ ಯೋಜನೆಗಳ ಬಗ್ಗೆ ಗ್ರಾಮಸ್ಥರ ಅಭಿಪ್ರಾಯ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| ನಿಮ್ಮ ಗ್ರಾಮ ಪಂಚಾಯಿತಿಯಲ್ಲಿ ವಸತಿ ಯೋಜನೆಗಳಿಗೆ ಒಳಪಟ್ಟಂತೆ ದೂರುಗಳನ್ನು ಗ್ರಾಮಸ್ಥರು ನೀಡುತ್ತಾರೆಯೇ | ವಿವರಗಳು | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| | ನೀಡುತ್ತಾರೆ | ೧೨ | ೬೩.೨ | ೨೧ | ೮೪ | ೨೪ | ೮೮.೮೮ | ೧೬ | ೯೪.೧೧ |
| | ಇಲ್ಲಾ | ೭ | ೩೬.೮ | ೪ | ೧೬ | ೩ | ೧೧.೧೧ | ೧ | ೫೮೮ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಅಂಶಗಳಲ್ಲಿ ಜಿಲ್ಲೆಯ ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ವಸತಿ ವಿಷಯಕ್ಕೆ ಸಂಬಂಧಿಸಿದ ದೂರುಗಳ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತಿ ಸದಸ್ಯರು ಇದ್ದು, ಅದರಲ್ಲಿ ಶೇ. ೬೩.೧೫ರಷ್ಟು ಚುನಾಯಿತ ಸದಸ್ಯರು ವಸತಿ ವಿಷಯಕ್ಕೆ ಸಂಬಂಧಿಸಿದಂತೆ ದೂರುಗಳು ಬರುತ್ತವೆ ಎಂದು ಹೇಳಿಕೊಂಡಿದ್ದಾರೆ. ಶೇ. ೩೬.೮೪ರಷ್ಟು ಚುನಾಯಿತ ಸದಸ್ಯರು ನಮಗೆ ಯಾವ ರೀತಿಯ ದೂರುಗಳು ಬರುವುದಿಲ್ಲ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತಿ ಸದಸ್ಯರು

ಇದ್ದು, ಅದರಲ್ಲಿ ಶೇ. ೮೪.೦೦ರಷ್ಟು ಚುನಾಯಿತ ಸದಸ್ಯರು ವಸತಿ ವಿಷಯಕ್ಕೆ ಸಂಬಂಧಿಸಿದಂತೆ ದೂರುಗಳು ಬರುತ್ತವೆ ಎಂದು ಹೇಳಿಕೊಂಡಿದ್ದಾರೆ. ಶೇ. ೧೬.೦೦ರಷ್ಟು ಚುನಾಯಿತ ಸದಸ್ಯರು ನಮಗೆ ಯಾವ ರೀತಿಯ ದೂರುಗಳು ಬರುವುದಿಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತಿ ಸದಸ್ಯರು ಇದ್ದು, ಅದರಲ್ಲಿ ಶೇ. ೮೮.೮೮ರಷ್ಟು ಚುನಾಯಿತ ಸದಸ್ಯರು ವಸತಿ ವಿಷಯಕ್ಕೆ ಸಂಬಂಧಿಸಿದಂತೆ ದೂರುಗಳು ಬರುತ್ತವೆ ಎಂದು ಹೇಳಿಕೊಂಡಿದ್ದಾರೆ. ಶೇ. ೧೧.೧೧ರಷ್ಟು ಚುನಾಯಿತ ಸದಸ್ಯರು ನಮಗೆ ಯಾವ ರೀತಿಯ ದೂರುಗಳು ಬರುವುದಿಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತಿ ಸದಸ್ಯರು ಇದ್ದು, ಅದರಲ್ಲಿ ಶೇ. ೯೪.೧೧ರಷ್ಟು ಚುನಾಯಿತ ಸದಸ್ಯರು ವಸತಿ ವಿಷಯಕ್ಕೆ ಸಂಬಂಧಿಸಿದಂತೆ ದೂರುಗಳು ಬರುತ್ತವೆ ಎಂದು ಹೇಳಿಕೊಂಡಿದ್ದಾರೆ. ಶೇ. ೫.೮೮ರಷ್ಟು ಚುನಾಯಿತ ಸದಸ್ಯರು ನಮಗೆ ಯಾವ ರೀತಿಯ ದೂರುಗಳು ಬರುವುದಿಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಅಂಶಗಳನ್ನು ಗಣನೆಗೆ ತೆಗೆದುಕೊಂಡಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗೆ ಅದರಲ್ಲಿ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ವಸತಿಯ ಬಗ್ಗೆ ಬರುವ ದೂರುಗಳು ಕಡಿಮೆ ಸಂಖ್ಯೆಯಲ್ಲಿರುವುದನ್ನು ಗಮನಿಸಲಾಗಿದೆ. ಇಲ್ಲಿ ಗಮನಿಸಬೇಕಾದ ಒಂದು ಸಂಗತಿಯೆಂದರೆ, ಗ್ರಾಮದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ದೂರುಗಳನ್ನು ನೀಡುತ್ತಿರುತ್ತಾರೆಂದರೆ ಆ ಪಂಚಾಯಿತಿಯ ಸಾಮಾನ್ಯ ಜನರು ತಮ್ಮ ಗ್ರಾಮದ ಅಭಿವೃದ್ಧಿಯ ಬಗ್ಗೆ ಹೆಚ್ಚಿನ ಕಾಳಜಿಯನ್ನು ವಹಿಸಿಕೊಂಡಿರುತ್ತಾರೆಂದು ಅರ್ಥ ಈ ಹಿನ್ನೆಲೆಯಲ್ಲಿ ಅವರು ಹೆಚ್ಚು-ಹೆಚ್ಚು ರಾಜಕೀಯದಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಾ ಚುನಾಯಿತ ಸದಸ್ಯರಿಗೆ ಅಭಿವೃದ್ಧಿಯ ವಿಫಲತೆಯ ಬಗ್ಗೆ ಪ್ರಶ್ನೆಗಳನ್ನು ಹಾಕುತ್ತಾ ತಮ್ಮ ಪಂಚಾಯಿತಿಗಳಲ್ಲಿ ಜನರು ತಮ್ಮ ಗ್ರಾಮದ ವಸತಿ ರಹಿತರಿಗೆ ಮನೆಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಆದರೆ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ಇದರಿಂದ ಹೊರತಾಗಿದೆ ಎನ್ನಲಾಗಿದೆ. ಹಾಗಾಗಿ ಈ ಅಂಶಗಳನ್ನು ಪರಿಗಣಿಸಿದಾಗ ಹಿಂದುಳಿಯಲಿಕ್ಕೆ ಕಾರಣ ಎನ್ನಬಹುದಾಗಿದೆ. ಕೊನೆಯದಾಗಿ, ಈ ಭಾಗದ ಜನರಿಗೆ ತಮ್ಮಗೆ ವಸತಿ ಇಲ್ಲ ಎಂದಾದರೆ ಅವರಿಗೆ ಅದೊಂದು ಸಮಸ್ಯೆ ಅದನ್ನು ತಿಳಿದು ವಸತಿಯನ್ನು ಪಡೆಯುವುದಕ್ಕೆ ಅಲ್ಲಿನ ಜನರು ಪ್ರಶ್ನೆಗಳ ಮಾಡಿದಾಗ ಮಾತ್ರ ಪ್ರತಿಯೊಬ್ಬ ಪ್ರಜೆ ರಾಜಕೀಯದಲ್ಲಿ ಭಾಗವಹಿಸಿದಂತಾಗುತ್ತದೆ ಆಗ ಜನರು ಆರೋಗ್ಯಕರವಾದ ಜೀವನ ಮಾಡುಬಹುದು ಎಂಬ ಹೇಳಿಕೆಯನ್ನು ಪರಿಗಣಿಸಲಾಗಿದೆ.

**ಕೋಷ್ಟಕ-೩೮: ವಿವಿಧ ವಸತಿ ಯೋಜನೆಗಳಡಿಯಲ್ಲಿ ಫಲಾನುಭವಿಗಳ ವಿವರ-**

| ವಸತಿ ರಹಿತರಾದ ವಿಧವೆ, ದೇವದಾಸಿ, ಅಂಗವಿಕಲ ಮತ್ತು ಹೆಚ್ ಐ ವಿ ಸೋಂಕಿತ ಫಲಾನುಭವಿಗಳಿಗೆ ವಸತಿ ಕಲ್ಪಿಸಿದ್ದೀರಾ? (ಎಷ್ಟು ಮನೆಗಳನ್ನು ಮೀಸಲು ಇರಿಸಿದ್ದಾರೆ?) | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚೆಳ್ಳಗುರ್ಕಿ | |
| | ವಿವರಗಳು | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| | ಕಲ್ಪಿಸಿದ್ದೇವೆ | ೧೨ | ೬೩.೨ | ೨೨ | ೮೮ | ೨೫ | ೯೨.೫೯ | ೧೩ | ೭೬.೪೭ |
| | ಇಲ್ಲ | ೭ | ೩೬.೮ | ೩ | ೧೨ | ೨ | ೭.೪೧ | ೪ | ೨೩.೫೩ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಅಂಕಿ-ಸಂಖ್ಯೆಗಳನ್ನು ನೋಡಿದಾಗ ಯಾವ ವರ್ಗದ ಫಲಾನುಭವಿಗಳಗೆ ವಸತಿಯನ್ನು ಕಲ್ಪಿಸುತ್ತಾರೆ ಎಂಬುದರ ವಿವರವನ್ನು ತೋರಿಸಲಾಗಿದೆ. ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತ ಸದಸ್ಯರು ಇದ್ದು, ಅದರಲ್ಲಿ ಶೇ. ೬೩.೧೫ರಷ್ಟು ಚುನಾಯಿತ ಸದಸ್ಯರು ನಾವು ಸರ್ಕಾರದಿಂದ ಬಂದ ವಸತಿಯನ್ನು ನೀಡುವಾಗ ವಿಧವೆ, ದೇವದಾಸಿ, ಅಂಗವಿಕಲ ಮತ್ತು ಹೆಚ್.ಐ.ವಿ. ಪೀಡಿತರಿಗೆ ಹೆಚ್ಚಿನ ರೀತಿಯಲ್ಲಿ ಆದ್ಯತೆಯನ್ನು ನೀಡಿ ಮನೆಗಳನ್ನು ಕಲ್ಪಿಸಿ ಕೊಡುತ್ತೇವೆ ಎಂದು ಹೇಳಿಕೊಂಡಿದ್ದಾರೆ. ಶೇ. ೩೬.೮೪ರಷ್ಟು ಸದಸ್ಯರು ನಾವು ಅಂಶವನ್ನು ಪರಿಗಣಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಹಾಗೂ ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತ ಸದಸ್ಯರು ಇದ್ದು, ಅದರಲ್ಲಿ ಶೇ. ೮೮.೦೦ರಷ್ಟು ಚುನಾಯಿತ ಸದಸ್ಯರು ನಾವು ಸರ್ಕಾರದಿಂದ ಬಂದ ವಸತಿಯನ್ನು ನೀಡುವಾಗ ವಿಧವೆ, ದೇವದಾಸಿ, ಅಂಗವಿಕಲ ಮತ್ತು ಹೆಚ್.ಐ.ವಿ. ಪೀಡಿತರಿಗೆ ಹೆಚ್ಚಿನ ರೀತಿಯಲ್ಲಿ ಆದ್ಯತೆಯನ್ನು ನೀಡಿ ಮನೆಗಳನ್ನು ಕಲ್ಪಿಸಿ ಕೊಡುತ್ತೇವೆ ಎಂದು ಹೇಳಿಕೊಂಡಿದ್ದಾರೆ. ಶೇ. ೧೨.೦೦ರಷ್ಟು ಸದಸ್ಯರು ನಾವು ಅಂಶವನ್ನು ಪರಿಗಣಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತ ಸದಸ್ಯರು ಇದ್ದು, ಅದರಲ್ಲಿ ಶೇ. ೯೨.೫೯ರಷ್ಟು ಚುನಾಯಿತ ಸದಸ್ಯರು ನಾವು ಸರ್ಕಾರದಿಂದ ಬಂದ ವಸತಿಯನ್ನು ನೀಡುವಾಗ ವಿಧವೆ, ದೇವದಾಸಿ, ಅಂಗವಿಕಲ ಮತ್ತು ಹೆಚ್.ಐ.ವಿ. ಪೀಡಿತರಿಗೆ ಹೆಚ್ಚಿನ ರೀತಿಯಲ್ಲಿ ಆದ್ಯತೆಯನ್ನು ನೀಡಿ ಮನೆಗಳನ್ನು ಕಲ್ಪಿಸಿ ಕೊಡುತ್ತೇವೆ ಎಂದು ಹೇಳಿಕೊಂಡಿದ್ದಾರೆ. ಶೇ. ೭.೪೦ರಷ್ಟು ಸದಸ್ಯರು

ನಾವು ಅಂಶವನ್ನು ಪರಿಗಣಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತ ಸದಸ್ಯರು ಇದ್ದು, ಅದರಲ್ಲಿ ಶೇ. ೭೬.೪೭ರಷ್ಟು ಚುನಾಯಿತ ಸದಸ್ಯರು ನಾವು ಸರ್ಕಾರದಿಂದ ಬಂದ ವಸತಿಯನ್ನು ನೀಡುವಾಗ ವಿಧವೆ, ದೇವದಾಸಿ, ಅಂಗವಿಕಲ ಮತ್ತು ಹೆಚ್.ಐ.ವಿ. ಪೀಡಿತರಿಗೆ ಹೆಚ್ಚಿನ ರೀತಿಯಲ್ಲಿ ಆದ್ಯತೆಯನ್ನು ನೀಡಿ ಮನೆಗಳನ್ನು ಕಲ್ಪಿಸಿ ಕೊಡುತ್ತೀವೆ ಎಂದು ಹೇಳಿಕೊಂಡಿದ್ದಾರೆ. ಶೇ. ೨೩.೫೨ರಷ್ಟು ಸದಸ್ಯರು ನಾವು ಅಂಶವನ್ನು ಪರಿಗಣಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಇಲ್ಲಿ ಹಲವು ಅಭಿಪ್ರಾಯಗಳನ್ನು ಗಮನಿಸಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು ಮತ್ತು ಕೂಡ್ಲಿಗಿ ತಾಲೂಕಿನ ಬಡೇಲಡಕು ಗ್ರಾಮ ಪಂಚಾಯಿತಿಗಳು ವಿಧವೆ, ದೇವದಾಸಿ, ಅಂಗವಿಕಲ ಮತ್ತು ಹೆಚ್.ಐ.ವಿ. ಸೋಂಕಿತರನ್ನು ಪರಿಗಣಿಸಿ ವಸತಿಗಳನ್ನು ನೀಡುವಲ್ಲಿ ಹೆಚ್ಚಿನ ಪ್ರಮಾಣವನ್ನು ಹೊಂದಿದೆ. ಆದರೆ ಹಿಂದುಳಿದ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಮನೆ ನೀಡುವಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿಫಲಗೊಂಡಿದೆ ಎನ್ನಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಈ ಮೂರು ಪಂಚಾಯಿತಿಯಲ್ಲಿರುವ ಚುನಾಯಿತ ಸದಸ್ಯರು ಈ ವರ್ಗದವರನ್ನು ಸಮಾಜ ನೋಡುವ ದೃಷ್ಟಿಕೋನ ತುಂಬಾ ಭಿನ್ನವಾಗಿರುವುದರಿಂದ ಹಾಗಾಗಿ ಇವರ ಸಮಸ್ಯೆಯನ್ನು ಅರ್ಥ ಮಾಡಿಕೊಳ್ಳುವಂತಹ ಜ್ಞಾನ ಇವರಿಗಿದೆ ಅಲ್ಲದೆ, ಅಕ್ಷರ ಬಲ್ಲವರು ಮತ್ತು ರಾಜಕೀಯ ನಾಯಕರ ಜೊತೆ ಹೆಚ್ಚಿನ ಸಂಪರ್ಕದಲ್ಲಿರುವವರು ಆಗಿದ್ದರಿಂದ ಇವರ ಬದುಕುನ್ನು ಅಭಿವೃದ್ಧಿಯಲ್ಲಿಯೂ ಸಹ ದೇಶದ ಅಭಿವೃದ್ಧಿ ಅಡಗಿದೆ ಎಂದು ತಿಳಿದು ಅವರನ್ನು ಹೆಚ್ಚಿನ ಸಂಖ್ಯೆಯಲ್ಲಿ ಪರಿಗಣಿಸುತ್ತಾರೆ. ಆದರೆ ಈ ಎಲ್ಲಾ ಅಂಶಗಳಿಂದ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯ ಸದಸ್ಯರು ವಿರುದ್ಧವಾಗಿದ್ದು ಆ ಸಂಸ್ಥೆಯು ಹಿಂದುಳಿಯುವುದಕ್ಕೆ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಗ್ರಾಮದ ಅಭಿವೃದ್ದಿಯಲ್ಲಿ ಯಾವ ಒಂದು ಅಂಶವನ್ನು ಪರಿಗಣಿಸದೆ ಇದ್ದಾಗ ಅದು ಹಿಂದುಳಿಯಲಿಕ್ಕೆ ಕಾರಣವಾಗುತ್ತದೆ ಎಂಬ ಅಂಶವನ್ನು ತಿಳಿಯಬೇಕಾದ ಅಗತ್ಯವಿದೆ.

**ಕೋಷ್ಟಕ-೩೯: ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳ ವಿವರ:-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳನ್ನು (ನೀರು, ವಿದ್ಯುತ್, ಶೌಚಾಲಯ ಮತ್ತು ಆವರಣ ಗೋಡೆ ಇತರೆ) ಕಲ್ಪಿಸಲಾಗಿದೆಯಾ ? | ವಿವರಗಳು | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| | ಕಲ್ಪಿಸಲಾಗಿದೆ | ೧೪ | ೭೩.೬೮ | ೨೧ | ೮೪ | ೨೧ | ೭೭೭೭ | ೧೨ | ೭೦.೫೮ |
| | ಇಲ್ಲ | ೫ | ೨೬.೩೧ | ೪ | ೧೬ | ೬ | ೨೨೨೨ | ೫ | ೨೯.೪೧ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ಹೇಳಲಾದ ದತ್ತಾಂಶಗಳನ್ನು ಪರಿಗಣಿಸಿದಾಗ ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಬರುವ ಶಾಲೆಗಳಿಗೆ ಮೂಲಭೂತ ಸೌಲಭ್ಯಗಳ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೭೩.೬೮ರಷ್ಟು ಸದಸ್ಯರು ಶಾಲೆಗಳಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿದೆ ಎಂದು ಹೇಳಿದ್ದಾರೆ. ಹಾಗೂ ಶೇ. ೨೬.೩೧ರಷ್ಟು ಚುನಾಯಿತ ಸದಸ್ಯರು ಶಾಲೆಗಳಿಗೆ ಮೂಲಭೂತ ಸೌಲಭ್ಯವನ್ನು ಒದಗಿಸಿಲ್ಲ ಎಂದು ಹೇಳಿಕೊಂಡಿದ್ದಾರೆ. ಅಂತೆಯೇ, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೮೪.೦೦ರಷ್ಟು ಸದಸ್ಯರು ಶಾಲೆಗಳಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿದೆ ಎಂದು ಹೇಳಿದ್ದಾರೆ. ಹಾಗೂ ಶೇ. ೧೬.೦೦ರಷ್ಟು ಚುನಾಯಿತ ಸದಸ್ಯರು ಶಾಲೆಗಳಿಗೆ ಮೂಲಭೂತ ಸೌಲಭ್ಯವನ್ನು ಒದಗಿಸಿಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೭೭.೭೭ರಷ್ಟು ಸದಸ್ಯರು ಶಾಲೆಗಳಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿದೆ ಎಂದು ಹೇಳಿದ್ದಾರೆ. ಹಾಗೂ ಶೇ. ೨೨.೨೨ರಷ್ಟು ಚುನಾಯಿತ ಸದಸ್ಯರು ಶಾಲೆಗಳಿಗೆ ಮೂಲಭೂತ ಸೌಲಭ್ಯವನ್ನು ಒದಗಿಸಿಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೭೦.೫೮ರಷ್ಟು ಸದಸ್ಯರು ಶಾಲೆಗಳಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿದೆ ಎಂದು ಹೇಳಿದ್ದಾರೆ. ಹಾಗೂ ಶೇ. ೨೯.೪೧ರಷ್ಟು

ಚುನಾಯಿತ ಸದಸ್ಯರು ಶಾಲೆಗಳಿಗೆ ಮೂಲಭೂತ ಸೌಲಭ್ಯವನ್ನು ಒದಗಿಸಿಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಹೇಳಿಕೆಗಳನ್ನು ನೋಡಿದಾಗ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಯ ಚುನಾಯಿತ ಸದಸ್ಯರು ಕಡಿಮೆ ಪ್ರಮಾಣದಲ್ಲಿ ತಮ್ಮ ಗ್ರಾಮದ ಶಾಲೆಗಳಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಡುವಲ್ಲಿ ವಿಫಲವಾಗಿದ್ದಾರೆ. ಅಂದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಮುಂದುವರಿದ ತಾಲೂಕಿನಲ್ಲಿ ಗ್ರಾಮೀಣ ಪ್ರದೇಶಗಳ ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಡುವಲ್ಲಿ ಮುಂದೆ ಇದ್ದು ಆದರೆ ಶಾಲೆಗಳಲ್ಲಿರುವ ಮಕ್ಕಳಿಗೆ ಬೇಕಾದ ಕುಡಿಯುವ ನೀರು, ವಿದ್ಯುತ್, ಶೌಚಾಲಯ ಮತ್ತು ಸುಸ್ಥಿರವಾದ ಕಟ್ಟಡಗಳನ್ನು ನಿರ್ಮಿಸಿಕೊಡುವಲ್ಲಿ ವಿಫಲವಾಗಿದೆ ಎಂದು ತಿಳಿಯಲಾಗಿದೆ. ಸರಿಸುಮಾರು ಮುಂದುವರಿದ ಮತ್ತು ಹಿಂದುಳಿದ ತಾಲೂಕಿನಲ್ಲಿಯೂ ಸಹ ಮೂಲಭುತ ಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿ ಹಿಂದೆ ಬಿದ್ದಿದ್ದಾವೆ. ಇಂತಹ ಅಂಶಗಳನ್ನು ಪರಿಗಣಿಸಿ ಹೇಗೆ ಗ್ರಾಮಗಳ ಅಭಿವೃದ್ಧಿಗಾಗಿ ಗ್ರಾಮೀಣಮಟ್ಟದಲ್ಲಿ ಗ್ರಾಮಸಭೆಗಳನ್ನು ನಡೆಸಲಾಗುತ್ತದೆಯೋ ಹಾಗೆಯೇ ಶಾಲೆಗಳಲ್ಲಿ ಮಕ್ಕಳ ಸಭೆಯನ್ನು ನಡೆಸುವ ಮೂಲಕ ಮಕ್ಕಳು ತಮ್ಮಗೆ ಇರುವ ಸಮಸ್ಯೆಗಳನ್ನು ಹೇಳಿಕೊಳ್ಳುವ ಮೂಲಕ ಅವರು ಗ್ರಾಮ ರಾಜಕೀಯದಲ್ಲಿ ಭಾಗವಹಿಸುವಂತೆ ಮಾಡಿದಾಗ ಸಮರ್ಪಕವಾದ ಸೌಲಭ್ಯಗಳು ದೊರೆಯುತ್ತವೆ ಎಂದು ಹೇಳಲಾಗುತ್ತದೆ.

**ಕೋಷ್ಟಕ–೪೦: ಕುಡಿಯುವ ನೀರಿನ ಕುರಿತು ದೂರುಗಳ ವಿವರ–**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಬೆಳಗಲ್ | |
| | ವಿವರಗಳು | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| ನೀವು ಸದಸ್ಯರಾದ ನಂತರ ನೀರಿಗೆ ಸಂಬಂಧಿಸಿದ ದೂರುಗಳು ಬಂದಿವೆಯಾ? | ಬಂದಿವೆ | ೭ | ೩೮.೮೯ | ೧೧ | ೪೪ | ೭ | ೨೫.೯೩ | ೬ | ೩೫.೨೯ |
| | ಬಂದಿಲ್ಲ | ೧೧ | ೬೧.೧೧ | ೧೪ | ೫೬ | ೨೦ | ೭೪.೦೭ | ೧೧ | ೬೪.೭೧ |
| | ಒಟ್ಟು | ೧೮ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬–೧೭

ಈ ಮೇಲಿನ ಅಂಶಗಳಲ್ಲಿ ಜಿಲ್ಲೆಯ ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಕುಡಿಯುವ ನೀರಿನ ವಿಷಯಕ್ಕೆ ಸಂಬಂಧಿಸಿದ ದೂರುಗಳ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತಿ ಸದಸ್ಯರು ಇದ್ದು, ಅದರಲ್ಲಿ ಶೇ. ೩೬.೮೪ರಷ್ಟು ಚುನಾಯಿತ ಸದಸ್ಯರು ನೀರಿನ ವಿಷಯಕ್ಕೆ ಸಂಬಂಧಿಸಿದಂತೆ ದೂರುಗಳು ಬರುತ್ತವೆ ಎಂದು ಹೇಳಿಕೊಂಡಿದ್ದಾರೆ. ಶೇ. ೬೩.೧೫ರಷ್ಟು ಚುನಾಯಿತ ಸದಸ್ಯರು ನಮಗೆ ಯಾವ ರೀತಿಯ ದೂರುಗಳು ಬಂದಿಲ್ಲ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಬಡಲಡಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತಿ ಸದಸ್ಯರು ಇದ್ದು, ಅದರಲ್ಲಿ ಶೇ. ೪೪.೦೦ರಷ್ಟು ಚುನಾಯಿತ ಸದಸ್ಯರು ಕುಡಿಯುವ ನೀರಿನ ವಿಷಯಕ್ಕೆ ಸಂಬಂಧಿಸಿದಂತೆ ದೂರುಗಳು ಬರುತ್ತವೆ ಎಂದು ಹೇಳಿಕೊಂಡಿದ್ದಾರೆ. ಶೇ. ೫೬.೦೦ರಷ್ಟು ಚುನಾಯಿತ ಸದಸ್ಯರು ನಮಗೆ ಯಾವ ರೀತಿಯ ದೂರುಗಳು ಬಂದಿಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತಿ ಸದಸ್ಯರು ಇದ್ದು, ಅದರಲ್ಲಿ ಶೇ. ೨೫.೯೨ರಷ್ಟು ಚುನಾಯಿತ ಸದಸ್ಯರು ನೀರಿನ ವಿಷಯಕ್ಕೆ ಸಂಬಂಧಿಸಿದಂತೆ ದೂರುಗಳು ಬರುತ್ತವೆ ಎಂದು ಹೇಳಿಕೊಂಡಿದ್ದಾರೆ. ಶೇ. ೭೪.೦೭ರಷ್ಟು ಚುನಾಯಿತ ಸದಸ್ಯರು ನಮಗೆ ಯಾವ ರೀತಿಯ ದೂರುಗಳು ಬಂದಿಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತಿ ಸದಸ್ಯರು ಇದ್ದು, ಅದರಲ್ಲಿ ಶೇ. ೩೫.೨೯ರಷ್ಟು ಚುನಾಯಿತ ಸದಸ್ಯರು ನೀರಿನ ವಿಷಯಕ್ಕೆ ಸಂಬಂಧಿಸಿದಂತೆ ದೂರುಗಳು ಬರುತ್ತವೆ ಎಂದು ಹೇಳಿಕೊಂಡಿದ್ದಾರೆ. ಶೇ. ೬೪.೭೦ರಷ್ಟು ಚುನಾಯಿತ ಸದಸ್ಯರು ನಮಗೆ ಯಾವ ರೀತಿಯ ದೂರುಗಳು ಇದುವರೆಗೂ ಬಂದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಅಂಶಗಳನ್ನು ಗಣನೆಗೆ ತೆಗೆದುಕೊಂಡಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗೆ ಕುಡಿಯುವ ನೀರಿಗೆ ಇರುವ ಸಮಸ್ಯೆಯನ್ನು ಇಟ್ಟುಕೊಂಡು ಗ್ರಾಮ ಪಂಚಾಯಿತಿಗೆ ಹೆಚ್ಚಿನ ಸಂಖ್ಯೆಯಲ್ಲಿ ದೂರುಗಳನ್ನು ನೀಡಿರುವುದನ್ನು ಗಮನಿಸಲಾಗಿದೆ. ಇಲ್ಲಿ ಗಮನಿಸಬೇಕಾದ ಒಂದು ಸಂಗತಿಯೆಂದರೆ, ಹಿಂದುಳಿದ ಗ್ರಾಮ ಪಂಚಾಯಿತಿಯಲ್ಲಿ ಹಲವಾರು ಕಾರಣಗಳಲ್ಲಿ ವಿಫಲತೆಯನ್ನು ಹೊಂದಿದ್ದರೂ ಅವುಗಳ ಬಗ್ಗೆ ಹೆಚ್ಚಾಗಿ ಯಾವ ಪ್ರಶ್ನೆಯನ್ನು ಮಾಡದೆ ಇರುವುದನ್ನು ನಾವು ನೋಡಲಾಗಿದೆ. ಆದರೆ ಈ ಕುಡಿಯುವ ನೀರು ಜೀವನಕ್ಕೆ ಪ್ರಮುಖ ಆದ್ಯತೆಯಾಗಿದ್ದರಿಂದ ಜನರು ಇಂತಹ ಸಮಸ್ಯೆಗಳಿಗೆ ತಾಳ್ಮೆಯನ್ನು ಬಿಟ್ಟುಹಾಕಿ ಗ್ರಾಮ ಪಂಚಾಯಿತಿಯ ಎದುರು ಹೋಗಿ ಸದಸ್ಯರನ್ನು ಪ್ರಶ್ನೆ ಮಾಡುವ ಮೂಲಕ ರಾಜಕೀಯದಲ್ಲಿ ಭಾಗವಹಿಸಿ ತಮ್ಮ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡಿದ್ದಾರೆ. ಹಾಗೆಯೇ ಇದೆ ರೀತಿ ಉಳಿದ ಮೂಲಭುತ ಸೌಲಭ್ಯಗಳನ್ನು ಪಡೆಯುವಲ್ಲಿಯೂ ಸಹ ಗ್ರಾಮೀಣ ಸಮಸ್ಯೆಯಲ್ಲಿ ಪಾಲ್ಗೊಂಡು ಗ್ರಾಮಗಳ ಅಭಿವೃದ್ಧಿಯನ್ನು ಮಾಡಬೇಕಾದ ಅನಿವಾರ್ಯತೆ ಇದೆ ಎಂದು ತಿಳಿಯಲಾಗಿದೆ.

ಕೋಷ್ಟಕ-೪೧: ರಸ್ತೆ ಯೋಜನೆಗಳ ವಿವರ :-

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಬೆಳಗುರ್ಕಿ | |
| | ವಿವರಗಳು | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| ರಸ್ತೆ ನಿರ್ಮಾಣಕ್ಕಾಗಿ ಇರುವ ಯೋಜನೆಗಳಾವುವು? (ಟೆಂಡರ ಕರೆದಿರುವುದರ ಬಗ್ಗೆ ಹೇಳಿ) | ಬಳ್ಳಾರಿ ವಿಶೇಷ ಪ್ಯಾಕೇಜ್ | ೧೧ | ೫೭.೮೯ | ೧೩ | ೫೨ | ೧೯ | ೭೦.೩೭ | ೧೧ | ೬೪.೭ |
| | ಪ್ರಧಾನ ಮಂತ್ರಿ ಸಡಕ್ ಯೋಜನೆ | ೦ | ೦ | ೦ | ೦ | ೦ | ೦ | ೦ | ೦ |
| | ಹೆಚ್.ಕೆ.ಡಿ.ಬಿ., | ೦ | ೦ | ೦ | ೦ | ೦ | ೦ | ೦ | ೦ |
| | ಎಂ.ಎಲ್.ಎ., /ಎಂ.ಪಿ./ | ೦ | ೦ | ೦ | ೦ | ೦ | ೦ | ೦ | ೦ |
| | ಜಿ.ಪಿ.ಡಿ.ಬಿ. | ೦ | ೦ | ೦ | ೦ | ೦ | ೦ | ೦ | ೦ |
| | ಇಲ್ಲ | ೮ | ೪೨.೧ | ೧೨ | ೪೮ | ೮ | ೨೯.೬೩ | ೬ | ೩೫.೨೯ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಕೋಷ್ಟಕದಲ್ಲಿ ನೀಡಿರುವ ಮಾಹಿತಿಯನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ. ಜಿಲ್ಲೆಯ ಎರಡು ತಾಲೂಕಿನ ನಾಲ್ಕು ಗ್ರಾಮ ಪಂಚಾಯಿತಿಗಳಲ್ಲಿ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಸದಸ್ಯರು ಇದ್ದು ಅದರಲ್ಲಿ ಶೇ. ೫೭.೮೯ರಷ್ಟು ಸದಸ್ಯರು ನಮ್ಮ ವ್ಯಾಪ್ತಿಯಲ್ಲಿ ರಸ್ತೆ ನಿರ್ಮಾಣಕ್ಕಾಗಿ ಬಳ್ಳಾರಿ ವಿಶೇಷ ಪ್ಯಾಕೇಜ್ ವ್ಯವಸ್ಥೆ ಇದೆ ಇದನ್ನು ಮೇಲಿನ ಸಂಸ್ಥೆಯು ಟೆಂಡರ್ ಕರೆಯುವ ಮೂಲಕ ನಮಗೆ ರಸ್ತೆ ನಿರ್ಮಾಣ ಮಾಡಲು ಕೊಡುತ್ತಾರೆ. ಅಂತೆಯೇ, ಶೇ. ೪೨.೧೦ರಷ್ಟು ಸದಸ್ಯರು ನಮಗೆ ರಸ್ತೆ ನಿರ್ಮಾಣಕ್ಕೆ ಯಾವ ಯೋಜನೆಯು ಇಲ್ಲ ಎಂದು ಹೇಳಿಕೊಂಡಿದ್ದಾರೆ. ಮುಂದುವರಿದು, ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಸದಸ್ಯರು ಇದ್ದು ಅದರಲ್ಲಿ ಶೇ. ೫೨.೦೦ರಷ್ಟು ಸದಸ್ಯರು ನಮ್ಮ ವ್ಯಾಪ್ತಿಯಲ್ಲಿ ರಸ್ತೆ ನಿರ್ಮಾಣಕ್ಕಾಗಿ ಬಳ್ಳಾರಿ ವಿಶೇಷ ಪ್ಯಾಕೇಜ್ ವ್ಯವಸ್ಥೆ ಇದೆ ಇದನ್ನು ಮೇಲಿನ ಸಂಸ್ಥೆಯು ಟೆಂಡರ್ ಕರೆಯುವ ಮೂಲಕ ನಮಗೆ ರಸ್ತೆ ನಿರ್ಮಾಣ ಮಾಡಲು ಕೊಡುತ್ತಾರೆ. ಅಂತೆಯೇ, ಶೇ. ೪೮.೦೦ರಷ್ಟು ಸದಸ್ಯರು ನಮಗೆ ರಸ್ತೆ ನಿರ್ಮಾಣಕ್ಕೆ ಯಾವ ಯೋಜನೆಯು ಇಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಸದಸ್ಯರು ಇದ್ದು ಅದರಲ್ಲಿ ಶೇ. ೭೦.೩೭ರಷ್ಟು ಸದಸ್ಯರು ನಮ್ಮ ವ್ಯಾಪ್ತಿಯಲ್ಲಿ ರಸ್ತೆ ನಿರ್ಮಾಣಕ್ಕಾಗಿ ಬಳ್ಳಾರಿ ವಿಶೇಷ ಪ್ಯಾಕೇಜ್ ವ್ಯವಸ್ಥೆ ಇದೆ ಇದನ್ನು ಮೇಲಿನ ಸಂಸ್ಥೆಯು ಟೆಂಡರ್ ಕರೆಯುವ ಮೂಲಕ ನಮಗೆ ರಸ್ತೆ ನಿರ್ಮಾಣ ಮಾಡಲು ಕೊಡುತ್ತಾರೆ. ಅಂತೆಯೇ, ಶೇ. ೨೯.೬೩ರಷ್ಟು ಸದಸ್ಯರು ನಮಗೆ ರಸ್ತೆ ನಿರ್ಮಾಣಕ್ಕೆ

ಯಾವ ಯೋಜನೆಯು ಇಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಸದಸ್ಯರು ಇದ್ದು ಅದರಲ್ಲಿ ಶೇ. ೬೪.೭೦ರಷ್ಟು ಸದಸ್ಯರು ನಮ್ಮ ವ್ಯಾಪ್ತಿಯಲ್ಲಿ ರಸ್ತೆ ನಿರ್ಮಾಣಕ್ಕಾಗಿ ಬಳ್ಳಾರಿ ವಿಶೇಷ ಪ್ಯಾಕೇಜ್ ವ್ಯವಸ್ಥೆ ಇದೆ ಇದನ್ನು ಮೇಲಿನ ಸಂಸ್ಥೆಯು ಟೆಂಡರ್ ಕರೆಯುವ ಮೂಲಕ ನಮಗೆ ರಸ್ತೆ ನಿರ್ಮಾಣ ಮಾಡಲು ಕೊಡುತ್ತಾರೆ. ಅಂತೆಯೇ, ಶೇ. ೩೫.೨೯ರಷ್ಟು ಸದಸ್ಯರು ನಮಗೆ ರಸ್ತೆ ನಿರ್ಮಾಣಕ್ಕೆ ಯಾವ ಯೋಜನೆಯು ಇಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಮೇಲಿನ ಹೇಳೀಕೆಗಳನ್ನು ನೋಡಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಸದಸ್ಯರು ಮತ್ತು ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಸದಸ್ಯರುಗಳಿಗೆ ಸರಿಸುಮಾರು ಒಂದೇ ಸಂಸ್ಥೆಯಿಂದ ರಸ್ತೆ ನೀರ್ಮಾಣದ ಕಾಮಗಾರಿಗಳು ಸಿಕ್ಕಿರುವುದನ್ನು ಗಮನಿಸಲಾಗಿದೆ. ಆದರೆ ಇಲ್ಲಿ ಮುಂದುವರಿದ ತಾಲೂಕಿನ ಸದಸ್ಯರಿಗಿಂತ ಹಿಂದುಳಿದ ತಾಲೂಕಿನ ಸದಸ್ಯರಿಗೆ ಕಡಿಮೆ ಸಂಖ್ಯೆಯಲ್ಲಿ ರಸ್ತೆ ನೀರ್ಮಾಣಕ್ಕಾಗಿ ಟೆಂಡರ್‌ಗಳ ಮೂಲಕ ಕಾಮಗಾರಿಗಳು ಸಿಕ್ಕಿರುವುದನ್ನು ಕಾಣಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಮುಂದುವರಿದ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗೆ ತಮ್ಮ ಗ್ರಾಮದಲ್ಲಿ ಜನರು ರಸ್ತೆ ವ್ಯವಸ್ಥೆ, ಕುಡಿಯುವ ನೀರು, ಬೀದಿ ದೀಪ, ಆರೋಗ್ಯ ಮತ್ತು ಚರಂಡಿ ವ್ಯವಸ್ಥೆಯ ಬಗ್ಗೆ ಸದಸ್ಯರನ್ನು ಪ್ರಶ್ನೆ ಮಾಡುವ ಮೂಲಕ ತಮ್ಮ ಸದಸ್ಯತ್ವದ ಇರುವಿಕೆಯನ್ನು ಮನವರಿಕೆ ಮಾಡಿ ತಾವು ರಾಜಕೀಯದಲ್ಲಿ ಪಾಲ್ಗೊಗೊಂಡು ಗ್ರಾಮದಲ್ಲಿರುವ ಸಮಸ್ಯೆಗಳಿಗೆ ಸ್ಪಂದಿಸುವಂತೆ ಮಾಡುವ ಮೂಲಕ ಅಭಿವೃದ್ಧಿಗೆ ನಾಂದಿಯನ್ನು ಹಾಡುತ್ತಾರೆ. ಈ ಹಿನ್ನೆಲೆಯಲ್ಲಿ ಸದಸ್ಯರು ಮೇಲಿನ ಸಂಸ್ಥೆಗಳಿಗೆ ಹೆಚ್ಚಿನ ಒತ್ತಡವನ್ನು ಹೇರುವ ಮೂಲಕ ಹೆಚ್ಚು-ಹೆಚ್ಚು ಕಾಮಗಾರಿಗಳನ್ನು ಮಾಡಿಸುವಂತಹ ಒಂದು ವ್ಯವಸ್ಥೆಯನ್ನು ಕಾಣಲಾಗಿದೆ. ಇಂತಹ ಅಂಶಗಳಿಂದ ಹಿಂದುಳಿದ ತಾಲೂಕಿನಲ್ಲಿ ಅದರಲ್ಲೂ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ವಿರುದ್ಧವಾಗಿದ್ದರಿಂದ ಅಂದರೆ ಜನರು ಸದಸ್ಯರನ್ನು ಯಾವ ಪ್ರಶ್ನೆಯನ್ನು ಕೇಳದೆ ತಮ್ಮ ಗ್ರಾಮದ ಬಗ್ಗೆ ಸದಸ್ಯರು ಕಾಳಜಿಯನ್ನು ವಹಿಸಿದೆ ಈ ಗ್ರಾಮ ಪಂಚಾಯಿತಿಯು ಹಿಂದುಳಿಯಲಿಕ್ಕೆ ಕಾರಣವಾಗಿದೆ ಎನ್ನಲಾಗಿದೆ. ಕೊನೆಯದಾಗಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಗ್ರಾಮದ ಜನರು ಮತ್ತು ಚುನಾಯಿತ ಸದಸ್ಯರ ನಡುವೆ ಉತ್ತಮ ಸಂಬಂಧ ಇಟ್ಟುಕೊಂಡು ಸರ್ವ ಗ್ರಾಮದ ಅಭಿವೃದ್ಧಿಯನ್ನು ಮಾಡಬೇಕಾದ ಕರ್ತವ್ಯ ಇಬ್ಬರ ಮೇಲೆ ಇದೆ ಎಂದು ತಿಳಿಯಲಾಗಿದೆ.

ಕೋಷ್ಟಕ-೪೨: ಸಾಮಾನ್ಯ ಸಭೆ ನಡೆಸುವ ವಿವರ :-

| ಸಾಮಾನ್ಯ ಸಭೆ ವರ್ಷದಲ್ಲಿ ಎಷ್ಟು ಸಲ ನಡೆದಿದೆ? | ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| | ೨ ಸಲ | ೪ | ೨೧.೦೫ | ೮ | ೩೨ | ೯ | ೩೩.೩೩ | ೩ | ೧೭.೬೪ |
| | ಪ್ರತಿ ತಿಂಗಳು | ೮ | ೪೨.೧೧ | ೧೨ | ೪೮ | ೧೩ | ೪೮.೧೪ | ೯ | ೫೨.೯೪ |
| | ಗೊತ್ತಿಲ್ಲ | ೭ | ೩೬.೮೪ | ೫ | ೨೦ | ೫ | ೧೮.೫೧ | ೫ | ೨೯.೪೧ |
| ಒಟ್ಟು | | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಕೋಷ್ಟಕದಲ್ಲಿರುವ ಹೇಳಿಕೆಗಳನ್ನು ಪರಿಗಣಿಸಿ ಸಾಮಾನ್ಯಸಭೆ ನಡೆದಿರುವುದರ ಪ್ರಮಾಣವನ್ನು ತೋರಿಸಲಾಗಿದೆ. ಜಿಲ್ಲೆಯ ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತ ಸದಸ್ಯರಿದ್ದು ಅದರಲ್ಲಿ ಶೇ. ೨೫.೦೫ರಷ್ಟು ಸದಸ್ಯರು ಸಾಮಾನ್ಯಸಭೆಯು ವರ್ಷದಲ್ಲಿ ಎರಡು ಸಲ ನಡೆಯುತ್ತದೆ ಎಂದಿದ್ದಾರೆ. ಶೇ. ೪೨.೧೧ರಷ್ಟು ಚುನಾಯಿತ ಸದಸ್ಯರು ವರ್ಷದಲ್ಲಿ ಪ್ರತಿ ತಿಂಗಳು ಸಾಮಾನ್ಯ ಸಭೆ ನಡೆಯುತ್ತದೆ ಎಂದಿದ್ದಾರೆ. ಶೇ. ೩೬.೮೪ರಷ್ಟು ಸದಸ್ಯರು ಸಾಮಾನ್ಯ ಸಭೆಯು ನಡೆಯುವುದು ನಮಗೆ ಗೊತ್ತಿಲ್ಲ ಎಂದು ಹೇಳಿಕೊಂಡಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತ ಸದಸ್ಯರಿದ್ದು ಅದರಲ್ಲಿ ಶೇ.೩೨.೦೦ರಷ್ಟು ಸದಸ್ಯರು ಸಾಮಾನ್ಯಸಭೆಯು ವರ್ಷದಲ್ಲಿ ಎರಡು ಸಲ ನಡೆಯುತ್ತದೆ ಎಂದಿದ್ದಾರೆ. ಶೇ. ೪೮.೦೦ರಷ್ಟು ಚುನಾಯಿತ ಸದಸ್ಯರು ವರ್ಷದಲ್ಲಿ ಪ್ರತಿ ತಿಂಗಳು ಸಾಮಾನ್ಯ ಸಭೆ ನಡೆಯುತ್ತದೆ ಎಂದಿದ್ದಾರೆ. ಶೇ. ೨೦.೦೦ರಷ್ಟು ಸದಸ್ಯರು ಸಾಮಾನ್ಯ ಸಭೆಯು ನಡೆಯುವುದು ನಮಗೆ ಗೊತ್ತಿಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತ ಸದಸ್ಯರಿದ್ದು ಅದರಲ್ಲಿ ಶೇ. ೩೩.೩೩ರಷ್ಟು ಸದಸ್ಯರು ಸಾಮಾನ್ಯಸಭೆಯು ವರ್ಷದಲ್ಲಿ ಎರಡು ಸಲ ನಡೆಯುತ್ತದೆ ಎಂದಿದ್ದಾರೆ. ಶೇ. ೪೮.೧೪ರಷ್ಟು ಚುನಾಯಿತ ಸದಸ್ಯರು ವರ್ಷದಲ್ಲಿ ಪ್ರತಿ ತಿಂಗಳು ಸಾಮಾನ್ಯ ಸಭೆ ನಡೆಯುತ್ತದೆ ಎಂದಿದ್ದಾರೆ. ಶೇ. ೧೮.೫೧ರಷ್ಟು ಸದಸ್ಯರು ಸಾಮಾನ್ಯ ಸಭೆಯು ನಡೆಯುವುದು ನಮಗೆ ಗೊತ್ತಿಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತ ಸದಸ್ಯರಿದ್ದು ಅದರಲ್ಲಿ ಶೇ. ೧೭.೬೪ರಷ್ಟು ಸದಸ್ಯರು ಸಾಮಾನ್ಯಸಭೆಯು

ವರ್ಷದಲ್ಲಿ ಎರಡು ಸಲ ನಡೆಯುತ್ತದೆ ಎಂದಿದ್ದಾರೆ. ಶೇ. ೫೯.೯೪ರಷ್ಟು ಚುನಾಯಿತ ಸದಸ್ಯರು ವರ್ಷದಲ್ಲಿ ಪ್ರತಿ ತಿಂಗಳು ಸಾಮಾನ್ಯ ಸಭೆ ನಡೆಯುತ್ತದೆ ಎಂದಿದ್ದಾರೆ. ಶೇ. ೨೯.೪೧ರಷ್ಟು ಸದಸ್ಯರು ಸಾಮಾನ್ಯ ಸಭೆಯು ನಡೆಯುವುದು ನಮಗೆ ಗೊತ್ತಿಲ್ಲ ಎಂದು ಹೇಳಿಕೊಂಡಿದ್ದಾರೆ. ಮುಂದುವರಿದು ಅಕ್ಷರಸ್ಥರು ಮತ್ತು ಆಡಳಿತದ ಬಗ್ಗೆ ಅನುಭವ ಹೊಂದಿದ್ದರಿಂದ ನಿಯಮದ ಪ್ರಕಾರ ಇರುವುದನ್ನು ಸಮರ್ಥವಾದಂತಹ ಉತ್ತರವನ್ನು ಕೊಟ್ಟರು. ಸಾಮಾನ್ಯಸಭೆಯು ವರ್ಷದಲ್ಲಿ ಎರಡು ಸಲ ನಡೆಸಲಾಗುತ್ತದೆ ಎಂದು ತಿಳಿದುಬಂದಿತು. ಕೆಲವು ಚುನಾಯಿತ ಸದಸ್ಯರು ಸ್ಥಳೀಯ ಸಂಸ್ಥೆಗಳಲ್ಲಿ ಜವಾಬ್ದಾರಿಯನ್ನು ವಹಿಸಿಕೊಂಡು, ಅವರಿಗೆ ತಿಳಿಯದ ವಿಷಯಗಳನ್ನು ಅಂದರೆ ಸ್ಥಳೀಯ ಸಂಸ್ಥೆಗಳ ಆಡಳಿತಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ತಮ್ಮ ಗಂಡಂದಿರು ಹಸ್ತಕ್ಷೇಪ ಮಾಡುತ್ತಿದ್ದರು ಹಾಗೂ ಕೆಲವು ಸದಸ್ಯೆಯರಿಗೆ ತಮ್ಮ ಗಂಡಂದಿರು ಇಲ್ಲದಿದ್ದರಿಂದ ಅವರ ಹಿರಿಯ ಮಗನು ಆಡಳಿತ ವಿಷಯಗಳನ್ನು ಸಮರ್ಥವಾಗಿ ನಿಭಾಯಿಸುತ್ತಿರುವ ಅಂಶ ತಿಳಿದುಬಂದಿತು. ಆದ್ದರಿಂದ ಇವರಿಗೆ ಆಡಳಿತದ ವಿಷಯಗಳನ್ನು ಕೇಳಿದಾಗ ಗೊತ್ತಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದನ್ನು ಅಧ್ಯಯನಗಳಿಂದ ತಿಳಿದುಬಂದಿದೆ.

ಒಟ್ಟಾರೆಯಾಗಿ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಜನಪ್ರತಿನಿಧಿಗಳಿಗಿಂತ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಚುನಾಯಿತ ಸದಸ್ಯರಿಗೆ ಅಭಿವೃದ್ಧಿ ಯೋಜನೆಗಳ ಬಗ್ಗೆ ಅರಿವಿನೊಂದಿಗೆ ಅವುಗಳನ್ನು ಅನುಷ್ಠಾನ ಗೊಳಿಸುವ ತಿಳುವಳಿಕೆಯು ಇರುವುದು ಗ್ರಾಮದ ಜನರ ಸಮಸ್ಯೆಗಳಿಗೆ ಸ್ಪಂದಿಸುವಂತಹ ಅಂಶಗಳಿಂದ ಕಂಡು ಬಂದಿದೆ ಎಂದು ಹೇಳಲಾಗಿದೆ. ಹಿಂದುಳಿದ ಗ್ರಾಮ ಪಂಚಾಯಿತಿಯಲ್ಲಿ ಚುನಾಯಿತ ಸದಸ್ಯರಿಗೆ ಅಭಿವೃದ್ಧ ಯೋಜನೆಗಳ ಬಗ್ಗೆ ಅರಿವು ಇದ್ದರೂ ಅವುಗಳಲ್ಲಿ ಭಾಗವಹಿಸಿ ಹೇಗೆ ಅನುಷ್ಠಾನಗೊಳಿಸುವ ತಿಳುವಳಕೆಯ ಕೊರತೆಯಿಂದ ಹಿಂದುಳಿಯಿತು ಎಂದು ಹೇಳಬಹುದಾಗಿದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಹಿಂದುಳಿದ ಗ್ರಾಮ ಪಂಚಾಯಿತ ಸದಸ್ಯರಿಗೆ ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸಿ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸುವ ರಾಜಕೀಯ ಇಚ್ಛಾಶಕ್ತಿಯನ್ನು ಬೆಳೆಸಲಿಕ್ಕೆ ಗಮನ ಕೊಡಬೇಕಾಗಿದೆ.

**ಕೋಷ್ಟಕ-೪೩: ನಿರ್ದಿಷ್ಟ ಕೋರಂ ವಿವರ :-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | ವಿವರಗಳು | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| ನಿರ್ದಿಷ್ಟ ಕೋರಂ ಇಲ್ಲವೆಂದಾಗ ಸಭೆಯನ್ನು ಮುಂದೂಡಲಾಗದಯೇ ? | ಹೌದು | ೧೬ | ೮೪.೨೧ | ೨೪ | ೯೬ | ೨೫ | ೯೨.೫೯ | ೧೬ | ೯೪.೧೧ |
| | ಇಲ್ಲ | ೩ | ೧೫೭೯ | ೧ | ೪ | ೨ | ೭೪ | ೧ | ೫.೮೮ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಅಂಕಿ-ಅಂಶಗಳನ್ನು ನೋಡಿದಾಗ ಗ್ರಾಮ ಪಂಚಾಯಿತಿಯಲ್ಲಿ ಸಭೆಗಳು ನಡೆಯಬೇಕಾದರೆ ಕೋರಂನ ಅವಶ್ಯಕತೆ ಇರುತ್ತದೆ ಅದರ ವಿವರವನ್ನು ತೋರಿಸಲಾಗಿದೆ. ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯು ಒಟ್ಟು ೧೯ ಸದಸ್ಯರಲ್ಲಿ ಶೇ. ೮೪.೨೧ರಷ್ಟು ಸದಸ್ಯರು ಸಭೆಯಲ್ಲಿ ನಿರ್ದಿಷ್ಟ ಕೋರಂ ಇಲ್ಲ ಅಂದಾಗ ಸಭೆಯನ್ನು ಮುಂದೂಡಲಾಗುತ್ತದೆ ಎಂದು ಹೇಳಿದ್ದಾರೆ. ಅಂತೆಯೇ, ಶೇ. ೧೫.೭೯ರಷ್ಟು ಸದಸ್ಯರು ನಿರ್ದಿಷ್ಟ ಕೋರಂ ಇಲ್ಲ ಅಂದಾಗ ಸಭೆಯನ್ನು ಮುಂದೂಡಲ್ಲ ಎಂದು ಹೇಳಿಕೊಂಡಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಯು ಒಟ್ಟು ೨೫ ಸದಸ್ಯರಲ್ಲಿ ಶೇ. ೯೬.೦೦ರಷ್ಟು ಸದಸ್ಯರು ಸಭೆಯಲ್ಲಿ ನಿರ್ದಿಷ್ಟ ಕೋರಂ ಇಲ್ಲ ಅಂದಾಗ ಸಭೆಯನ್ನು ಮುಂದೂಡಲಾಗುತ್ತದೆ ಎಂದು ಹೇಳಿದ್ದಾರೆ. ಅಂತೆಯೇ, ಶೇ. ೪.೦೦ರಷ್ಟು ಸದಸ್ಯರು ನಿರ್ದಿಷ್ಟ ಕೋರಂ ಇಲ್ಲ ಅಂದಾಗ ಸಭೆಯನ್ನು ಮುಂದೂಡಲ್ಲ ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ, ಶ್ರೀಧರಗಡ್ಡೆಗ್ರಾಮ ಪಂಚಾಯಿತಿಯು ಒಟ್ಟು ೨೭ ಸದಸ್ಯರಲ್ಲಿ ಶೇ. ೯೨.೫೯ರಷ್ಟು ಸದಸ್ಯರು ಸಭೆಯಲ್ಲಿ ನಿರ್ದಿಷ್ಟ ಕೋರಂ ಇಲ್ಲ ಅಂದಾಗ ಸಭೆಯನ್ನು ಮುಂದೂಡಲಾಗುತ್ತದೆ ಎಂದು ಹೇಳಿದ್ದಾರೆ. ಅಂತೆಯೇ, ಶೇ. ೭.೪೦ರಷ್ಟು ಸದಸ್ಯರು ನಿರ್ದಿಷ್ಟ ಕೋರಂ ಇಲ್ಲ ಅಂದಾಗ ಸಭೆಯನ್ನು ಮುಂದೂಡಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯು ಒಟ್ಟು ೧೭ ಸದಸ್ಯರಲ್ಲಿ ಶೇ. ೯೪.೧೧ರಷ್ಟು ಸದಸ್ಯರು ಸಭೆಯಲ್ಲಿ ನಿರ್ದಿಷ್ಟ ಕೋರಂ ಇಲ್ಲ ಅಂದಾಗ ಸಭೆಯನ್ನು ಮುಂದೂಡಲಾಗುತ್ತದೆ ಎಂದು ಹೇಳಿದ್ದಾರೆ. ಅಂತೆಯೇ, ಶೇ. ೫.೮೮ರಷ್ಟು ಸದಸ್ಯರು ನಿರ್ದಿಷ್ಟ ಕೋರಂ ಇಲ್ಲ ಅಂದಾಗ ಸಭೆಯನ್ನು ಮುಂದೂಡಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಮುಂದುವರೆದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು ಮತ್ತು ತೀರಾ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರು ಈ ಸಭೆಯನ್ನು ಯಾವ ದಿನ ನಡೆಸಲಾಗುವುದು ಹಾಗೂ ಯಾವ ವಿಷಯಗಳನ್ನು ಚರ್ಚಿಸಲಾಗುತ್ತದೆ ಎನ್ನುವುದರ ಕಾರ್ಯಸೂಚಿಯನ್ನು ಮೊದಲೇ ಎಲ್ಲಾ ಸದಸ್ಯರಿಗೆ ಸುತ್ತೋಲೆಯನ್ನು ಕಳುಹಿಸುತ್ತಾರೆ ಎಂಬ ಅಂಶವನ್ನು ಹೇಳಿಕೊಂಡಿರುವುದು ಕಂಡುಬಂದಿದೆ. ಅಂದರೆ ಹಿಂದುಳಿದ ಗ್ರಾಮ ಪಂಚಾಯಿತಿಗಳ ಸದಸ್ಯರಿಗಿಂತ ಮತ್ತು ಮುಂದುವರಿದ ಗ್ರಾಮ ಪಂಚಾಯಿತಿಗಳ ಸದಸ್ಯರು ಸಹ ಕಡಿಮೆ ಸಂಖ್ಯೆಯಲ್ಲಿ ಕೋರಂ ಇಲ್ಲ ಅಂದಾಗ ಮುಂದೂಡುವ ವಿಷಯವನ್ನು ಹೇಳಿಕೊಂಡಿದ್ದಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಸರ್ವ ಸಾಮಾನ್ಯವಾಗಿ ಕೋರಂ ಇಲ್ಲ ಅಂದಾಗ ಗ್ರಾಮ ಪಂಚಾಯಿತಿಯನ್ನು ಮುಂದೂಡುವುದು ವಾಡಿಕೆಯಾಗಿದೆ. ಆದರೆ ಪಂಚಾಯಿತಿ ಕೋರಂ ಇಲ್ಲದಿದ್ದರೂ ಮುಂದೂಡಲ್ಲ ಎಂದು ಹೇಳಿರುವುದು ನೋಡಿದರೆ ಕೆಲವು ಚುನಾಯಿತ ಸದಸ್ಯರಲ್ಲಿ ಸಮರ್ಥ ಪುರುಷ ಮತ್ತು ಮಹಿಳೆಯರು ಚುನಾಯಿತ ಸದಸ್ಯರಾಗಿಲ್ಲ ಎಂದು ತಿಳಿಯಲಾಗುತ್ತದೆ. ಈ ಹಿನ್ನೆಲೆಯಲ್ಲಿ ಸರಿಯಾದ ರೀತಿಯಲ್ಲಿ ಸಭೆಗಳಿಗೆ ಹಾಜರಾಗದೆ ತಮ್ಮ ಆಡಳಿತವನ್ನು ಶಿಕ್ಷಿತರ, ಧನಿಕರ ಕೈಯಲ್ಲಿ ಕೊಟ್ಟು ದೀರ್ಘಕಾಲದ ಅಭಿವೃದ್ಧಿಯ ದೃಷ್ಟಿಕೋನವನ್ನು ಬದಲಾಯಿಸಿಕೊಳ್ಳುತ್ತಿರುವುದು ಅಭಿವೃದ್ಧಿಗೆ ಮಾರಕ ಎನ್ನಲಾಗುತ್ತದೆ. ಅಂದರೆ, ಚುನಾವಣಾ ಪ್ರಕ್ರಿಯೆಗಳು ಅವ್ಯವಹಾರ ಹಾಗೂ ಹಣ ಚೆಲ್ಲುವಿಕೆಯಿಂದ ಹೊರತಾಗಿ, ಆಮಿಷಗಳಿಗೆ ಮಾರು ಹೋಗದೇ, ಸ್ವಚ್ಛವಾಗಿ ನಡೆದಲ್ಲಿ ಉತ್ತಮ ಸದಸ್ಯರು ಆಯ್ಕೆಯಾಗುತ್ತಾರೆ. ಇದರಿಂದ ಉತ್ತಮ ಆಡಳಿತ ಸಾಧ್ಯವಾಗಿ, ಒಳ್ಳೆಯ ಕೆಲಸ-ಕಾರ್ಯಗಳು ನಡೆದು ಗ್ರಾಮೀಣ ಅಭಿವೃದ್ಧಿಯು ಸಾಕಾರಗೊಳ್ಳುತ್ತದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ-೪೪: ವಾರ್ಡ್‌ಸಭೆಯಲ್ಲಿ ವಾರ್ಡಿನ ಮತದಾರರ ಭಾಗವಹಿಸುವಿಕೆಯ ವಿವರ-**

| | | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚೆಳ್ಳಗುರ್ಕಿ | |
| ವಾರ್ಡ್‌ಸಭೆಯಲ್ಲಿ ವಾರ್ಡಿನ ಎಲ್ಲಾ ಮತದಾರರು ಮತ್ತು ಇತರ ವಾರ್ಡಿನ ಸದಸ್ಯರು ಭಾಗವಹಿಸುತ್ತಾರೆಯೇ ? | ವಿವರಗಳು | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| | ಭಾಗವಹಿಸುತ್ತಾರೆ | ೧೨ | ೬೩.೧೫ | ೨೨ | ೮೮ | ೨೫ | ೯೨.೫೯ | ೧೫ | ೮೮.೨೪ |
| | ಇಲ್ಲ | ೭ | ೩೬.೮೪ | ೩ | ೧೨ | ೨ | ೭.೪೧ | ೨ | ೧೧.೭೬ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ದತ್ತಾಂಶಗಳಲ್ಲಿ ವಾರ್ಡ್‌ಸಭೆಯಲ್ಲಿ ಇತರ ಸದಸ್ಯರು ಭಾಗವಹಿಸುವುದರ ಕುರಿತ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೬೩.೧೫ರಷ್ಟು ಚುನಾಯಿತ ಸದಸ್ಯರು ವಾರ್ಡಿನ ಸಭೆಯಲ್ಲಿ ವಾರ್ಡಿನ ಮತದಾರರು ಮತ್ತು ಇತರ ವಾರ್ಡಿನ ಸದಸ್ಯರು-ಮತದಾರರು ಭಾಗವಹಿಸುತ್ತಾರೆ ಎಂದು ಹೇಳಿಕೊಂಡಿದ್ದಾರೆ. ಅಂತೆಯೇ, ಶೇ. ೩೬.೮೪ರಷ್ಟು ಸದಸ್ಯರು ವಾರ್ಡಿನ ಸಭೆಯಲ್ಲಿ ಯಾರು ಭಾಗವಹಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೮೮.೦೦ರಷ್ಟು ಚುನಾಯಿತ ಸದಸ್ಯರು ವಾರ್ಡಿನ ಸಭೆಯಲ್ಲಿ ವಾರ್ಡಿನ ಮತದಾರರು ಮತ್ತು ಇತರ ವಾರ್ಡಿನ ಸದಸ್ಯರು-ಮತದಾರರು ಭಾಗವಹಿಸುತ್ತಾರೆ ಎಂದು ಹೇಳಿಕೊಂಡಿದ್ದಾರೆ. ಅಂತೆಯೇ, ಶೇ. ೧೨.೦೦ರಷ್ಟು ಸದಸ್ಯರು ವಾರ್ಡಿನ ಸಭೆಯಲ್ಲಿ ಯಾರು ಭಾಗವಹಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೯೨.೫೯ರಷ್ಟು ಚುನಾಯಿತ ಸದಸ್ಯರು ವಾರ್ಡಿನ ಸಭೆಯಲ್ಲಿ ವಾರ್ಡಿನ ಮತದಾರರು ಮತ್ತು ಇತರ ವಾರ್ಡಿನ ಸದಸ್ಯರು-ಮತದಾರರು ಭಾಗವಹಿಸುತ್ತಾರೆ ಎಂದು ಹೇಳಿಕೊಂಡಿದ್ದಾರೆ. ಅಂತೆಯೇ. ಶೇ. ೭.೪೦ರಷ್ಟು ಸದಸ್ಯರು ವಾರ್ಡಿನ ಸಭೆಯಲ್ಲಿ ಯಾರು ಭಾಗವಹಿಸುವುದಿಲ್ಲ

ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೮೮.೨೩ರಷ್ಟು ಚುನಾಯಿತ ಸದಸ್ಯರು ವಾರ್ಡಿನ ಸಭೆಯಲ್ಲಿ ವಾರ್ಡಿನ ಮತದಾರರು ಮತ್ತು ಇತರ ವಾರ್ಡಿನ ಸದಸ್ಯರು–ಮತದಾರರು ಭಾಗವಹಿಸುತ್ತಾರೆ ಎಂದು ಹೇಳಿಕೊಂಡಿದ್ದಾರೆ. ಅಂತೆಯೇ, ಶೇ. ೧೧.೭೬ರಷ್ಟು ಸದಸ್ಯರು ವಾರ್ಡಿನ ಸಭೆಯಲ್ಲಿ ಯಾರು ಭಾಗವಹಿಸುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಅಂಶಗಳನ್ನು ಪರಿಗಣಿಸಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರು ಕಡಿಮೆ ಸಂಖ್ಯೆಯಲ್ಲಿ ವಾರ್ಡಿನ ಸಭೆಗೆ ಇತರ ವಾರ್ಡಿನ ಸದಸ್ಯರು ಮತ್ತು ಮತದಾರರು ಬಂದು ಸಭೆಗೆ ಭಾಗವಹಿಸುತ್ತಾರೆ ಎಂದು ಹೇಳಿದ್ದಾರೆ. ಹಿಂದುಳಿದ ಗ್ರಾಮ ಪಂಚಾಯಿತಿಯಲ್ಲಿ ಸಭೆಗಳೇ ನಡೆಯುವುದು ದುಃಸ್ಥರವಾದಾಗ ಅದರಲ್ಲಿ ವಾರ್ಡಿನ ಸಭೆಗಳು ನಡೆಯುವುದು ಬಹಳ ಹಿಂದಿನ ಮಾತಾಗಿದೆ ಎಂದು ತಿಳಿಯಲಾಗಿದೆ. ಬಳ್ಳಾರಿ ತಾಲೂಕಿನ ಪಂಚಾಯಿತಿಗಳಲ್ಲಿ ಜನರ ಸಮಸ್ಯೆಗಳಿಗೆ ಸ್ಪಂಧಿಸುವಂತಹ ಸದಸ್ಯರು ಕಡಿಮೆ ಆದರೂ ಅಲ್ಲಿಯ ಜನರು ತಮ್ಮ ಗ್ರಾಮದ ಆಗು–ಹೋಗುಗಳ ಬಗ್ಗೆ ಕೇಳುವುದು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಆದರೆ ಇದರ ಪ್ರಮಾಣ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಇರದೆಯಿರುವುದರಿಂದ ಚುನಾಯಿತ ಪ್ರತಿನಿಧಿಗಳು ನಾಮಾಕಾವಸ್ಥೆ ಆಯ್ಕೆಗೊಂಡು ಐದು ವರ್ಷದ ಅವಧಿಯನ್ನು ಪೂರ್ಣಗೊಳಿಸಿ ಪುನಃ ಚುನಾವಣೆಗಳಿಗೆ ಸ್ಪರ್ದೆ ಮಾಡುವಂತಹ ಕೆಲಸವನ್ನು ಮಾಡುತ್ತಾ ಬರುತ್ತಿರುವುದನ್ನು ನಾವು ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ತಿಳಿದುಕೊಂಡ ಸಂಗತಿಯಾಗಿದೆ. ಕೊನೆಯದಾಗಿ, ಎರಡು ಗ್ರಾಮ ಪಂಚಾಯಿತಿಗಳ ಹೋಲಿಕೆಯನ್ನು ನೋಡಿದಾಗ ಮುಂದುವರಿದ ಗ್ರಾಮ ಪಂಚಾಯಿತಿಗಳ ತಮ್ಮ ಗ್ರಾಮದ ಬಗ್ಗೆ ಅಂದರೆ ಕನಿಷ್ಠ ಮೂಲಭೂತ ಸೌಲಭ್ಯಗಳ ಬಗ್ಗೆ ಕಾಳಜಿವಹಿಸಿದರೆ ಅದನ್ನು ಹಿಂದುಳಿದ ಪ್ರದೇಶದಲ್ಲಿ ಅದಕ್ಕೆ ವಿರುದ್ಧವಾಗಿ ಇರುವ ಸಂಗತಿಯನ್ನು ಕಾಣುತ್ತೇವೆ. ಇಲ್ಲಿ ಚುನಾಯಿತ ಸದಸ್ಯರು ಜನಗಳ ಪರ ಆಲೋಚನೆಯನ್ನು ಮಾಡುತ್ತಾ ಜನರು ಸಹ ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುವ ಅನಿವಾರ್ಯತೆ ಇದೆ ಎಂದು ತಿಳಿಯಲಾಗಿದೆ.

**ಕೋಷ್ಟಕ-೪೫ಗ್ರಾಮ ಸಭೆಗಳಲ್ಲಿ ತೆಗೆದುಕೊಳುವ ನಿರ್ಧಾರಗಳು, ಸಲಹೆ, ಶಿಫಾರಸ್ಸುಗಳ ವಿವರ:-**

| ಗ್ರಾಮ ಸಭೆಯಲ್ಲಿ ತೆಗೆದುಕೊಂಡ ನಿರ್ಧಾರಗಳು ಸಲಹೆ, ಶಿಫಾರಸ್ಸುಗಳ ಬಗ್ಗೆ ತಕ್ಷಣ ಕ್ರಮ ಕೈಗೊಳ್ಳುತ್ತಿರಾ ? | ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚೆಳ್ಳಗುರ್ಕಿ | |
| | | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| | ಹೌದು | ೧೨ | ೬೩.೧೫ | ೨೧ | ೮೪ | ೨೨ | ೮೧.೪೮ | ೧೫ | ೮೮.೨೩ |
| | ಇಲ್ಲ | ೭ | ೩೬.೮೪ | ೪ | ೧೬ | ೫ | ೧೮.೫೧ | ೨ | ೧೧.೭೬ |
| | ಒಟ್ಟು | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲೆ ಹೇಳಲಾದ ಅಂಕಿ-ಅಂಶಗಳಲ್ಲಿ ಗ್ರಾಮಸಭೆಯಲ್ಲಿ ತೆಗೆದುಕೊಂಡ ಕ್ರಮಗಳ ವಿವರವನ್ನು ತೋರಿಸಲಾಗಿದೆ. ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೬೩.೧೫ರಷ್ಟು ಸದಸ್ಯರು ಗ್ರಾಮಸಭೆಯಲ್ಲಿ ತೆಗೆದುಕೊಂಡ ನಿರ್ಧಾರಗಳು, ಸಲಹೆಗಳು, ಶಿಫಾರಸ್ಸುಗಳ ಬಗ್ಗೆ ತಕ್ಷಣ ಕ್ರಮವನ್ನು ತೆಗೆದುಕೊಳ್ಳಲಾಗುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ. ೩೬.೮೪ರಷ್ಟು ಸದಸ್ಯರು ಗ್ರಾಮ ಸಭೆಯಲ್ಲಿ ಆದ ನಿರ್ಧಾರಗಳ ಬಗ್ಗೆ ಬೇಗ ಯಾವುದೇ ಕ್ರಮವನ್ನು ತೆಗೆದುಕೊಳ್ಳುವುದಿಲ್ಲ ಎಂದು ಇನ್ನು ಕೆಲ ಸದಸ್ಯರು ತಮ್ಮ ಹೇಳಿಕೆಯನ್ನು ನೀಡಿದ್ದಾರೆ. ಅಂತೆಯೇ, ಬಡಲಡಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೮೪.೦೦ರಷ್ಟು ಸದಸ್ಯರು ಗ್ರಾಮಸಭೆಯಲ್ಲಿ ತೆಗೆದುಕೊಂಡ ನಿರ್ಧಾರಗಳು, ಸಲಹೆಗಳು, ಶಿಫಾರಸ್ಸುಗಳ ಬಗ್ಗೆ ತಕ್ಷಣ ಕ್ರಮವನ್ನು ತೆಗೆದುಕೊಳ್ಳಲಾಗುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ. ೧೬.೦೦ರಷ್ಟು ಸದಸ್ಯರು ಗ್ರಾಮ ಸಭೆಯಲ್ಲಿ ಆದ ನಿರ್ಧಾರಗಳ ಬಗ್ಗೆ ಬೇಗ ಯಾವುದೇ ಕ್ರಮವನ್ನು ತೆಗೆದುಕೊಳ್ಳುವುದಿಲ್ಲ ಎಂದು ಇನ್ನು ಕೆಲ ಸದಸ್ಯರು ತಮ್ಮ ಹೇಳಿಕೆಯನ್ನು ನೀಡಿದ್ದಾರೆ. ಅದರಂತೆ, ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೮೧.೪೮ರಷ್ಟು ಸದಸ್ಯರು ಗ್ರಾಮಸಭೆಯಲ್ಲಿ ತೆಗೆದುಕೊಂಡ ನಿರ್ಧಾರಗಳು, ಸಲಹೆಗಳು, ಶಿಫಾರಸ್ಸುಗಳ ಬಗ್ಗೆ ತಕ್ಷಣ ಕ್ರಮವನ್ನು ತೆಗೆದುಕೊಳ್ಳಲಾಗುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ. ೧೮.೫೧ರಷ್ಟು ಸದಸ್ಯರು ಗ್ರಾಮ ಸಭೆಯಲ್ಲಿ ಆದ ನಿರ್ಧಾರಗಳ

ಬಗ್ಗೆ ಬೇಗ ಯಾವುದೇ ಕ್ರಮವನ್ನು ತೆಗೆದುಕೊಳ್ಳುವುದಿಲ್ಲ ಎಂದು ಇನ್ನು ಕೆಲ ಸದಸ್ಯರು ತಮ್ಮ ಹೇಳಿಕೆಯನ್ನು ನೀಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೮೮.೨೩ರಷ್ಟು ಸದಸ್ಯರು ಗ್ರಾಮಸಭೆಯಲ್ಲಿ ತೆಗೆದುಕೊಂಡ ನಿರ್ಧಾರಗಳು, ಸಲಹೆಗಳು, ಶಿಫಾರಸ್ಸುಗಳ ಬಗ್ಗೆ ತಕ್ಷಣ ಕ್ರಮವನ್ನು ತೆಗೆದುಕೊಳ್ಳಲಾಗುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ. ೧೧.೭೬ರಷ್ಟು ಸದಸ್ಯರು ಗ್ರಾಮ ಸಭೆಯಲ್ಲಿ ಆದ ನಿರ್ಧಾರಗಳ ಬಗ್ಗೆ ಬೇಗ ಯಾವುದೇ ಕ್ರಮವನ್ನು ತೆಗೆದುಕೊಳ್ಳುವುದಿಲ್ಲ ಎಂದು ಇನ್ನು ಕೆಲ ಸದಸ್ಯರು ತಮ್ಮ ಹೇಳಿಕೆಯನ್ನು ನೀಡಿದ್ದಾರೆ.

ಒಟ್ಟಾರೆಯಾಗಿ ಈ ಮೇಲಿನ ಅಂಶಗಳನ್ನು ಪರಿಗಣಿಸಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಅದರಲ್ಲೂ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಸಾಮಾನ್ಯ ಸಭೆ, ಗ್ರಾಮಸಭೆಗಳು ನಡೆಯುತ್ತವೆ ಆದರೆ ನಡೆದ ಸಭೆಯಲ್ಲಿ ಗ್ರಾಮದ ಅಭಿವೃದ್ಧಿಗಾಗಿ ಹಲವಾರು ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರು, ಬೀದಿ ದೀಪ, ಚರಂಡಿ ವ್ಯವಸ್ಥೆ, ರಸ್ತೆಗಳು ಮತ್ತು ಶಿಕ್ಷಣಕ್ಕೆ ಬೇಕಾದ ಅನುದಾಗಳ ಬಗ್ಗೆ, ಕಾಮಗಾರಿಗಳಿಗೆ ಟೆಂಡರ್ ಕರೆಯುವ ಬಗ್ಗೆ ಇನ್ನಿತರ ಹಲವು ಅಭಿವೃದ್ಧಿ ಚಟುವಟಿಕೆಗಳ ಬಗ್ಗೆ ಚರ್ಚೆ ಮಾಡಿ ಅದಕ್ಕೆ ಸಂಬಂಧಪಟ್ಟ ನಿರ್ಧಾರಗಳನ್ನು ತೆಗೆದುಕೊಂಡು ಅದರ ಮೇಲೆ ಸಲಹೆ ಸೂಚನೆಗಳನ್ನು ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಹಾಗೂ ಬಡೇಲಡಕು ಗ್ರಾಮ ಪಂಚಾಯಿತಿಗಳು ತುರ್ತಾಗಿ ಕ್ರಮವಹಿಸುತ್ತಾರೆ. ಆದರೆ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ತುರ್ತಾಗಿ ಕ್ರಮವನ್ನು ತೆಗೆದುಕೊಳ್ಳದೆ ಯಾವ ಚಟುವಟಿಕೆಗಳನ್ನು ಅನುಷ್ಠಾನಗೊಳಿಸದೆ ಹಿಂದುಳಿಯುವುದಕ್ಕೆ ಕಾರಣವಾಗಿದೆ ಎಂದು ತಿಳಿಯಲಾಗಿದೆ. ಕೊನೆಯದಾಗಿ ಇಲ್ಲಿ ಗ್ರಾಮಸಭೆಯು ಗ್ರಾಮದ ಅಭಿವೃದ್ಧಿಯ ಒಂದು ಸಭೆ ಇಲ್ಲಿ ಎಲ್ಲಾ ಸರ್ಕಾರಿ ಅಧಿಕಾರಿಗಳು, ತಾಲೂಕು ಪಂಚಾಯಿತಿ ಸದಸ್ಯರು, ಜಿಲ್ಲಾ ಪಂಚಾಯಿತಿ ಸದಸ್ಯರು, ಎಂ.ಎಲ್.ಎ ಮತ್ತು ಲೋಕಸಭೆಯ ಸದಸ್ಯರು ಭಾಗವಹಿಸಿ ಗ್ರಾಮದ ಅಭಿವೃದ್ಧಿ ಕಾರ್ಯಕ್ರಮಗಳ ಮೇಲೆ ತುರ್ತು ಕ್ರಮವನ್ನು ತೆಗೆದುಕೊಳ್ಳಲು ಸಹಕಾರವಿರುತ್ತದೆ. ಇಂತಹ ಒಂದು ವೇದಿಕೆಗೆ ಸದಸ್ಯರು ಮತ್ತು ಗ್ರಾಮದ ಜನರು ಕೈ ಜೋಡಿಸುವಂತಹ ಅವಶ್ಯಕತೆ ಇರುತ್ತದೆ ಎಂದು ಪರಿಗಣಿಸಲಾಗಿದೆ.

ಕೋಷ್ಟಕ-೪೬: ಗ್ರಾಮಸಭೆಯಲ್ಲಿ ಗ್ರಾಮಸ್ಥರು ಸದಸ್ಯರು, ಅಧಿಕಾರಿಗಳು, ಭಾಗವಹಿಸುವಿಕೆಯ ವಿವರ:-

| ಗ್ರಾಮಸಭೆಯಲ್ಲಿ ಗ್ರಾಮಸ್ಥರ ಜೊತೆಗೆ ಸದಸ್ಯರು, ಇನ್ನಿತರ ಅಧಿಕಾರಿಗಳು ಪಾಲ್ಗೊಳ್ಳುತ್ತಾರೆಯೇ? | ವಿವರಗಳು | ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | | ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳು | | | |
|---|---|---|---|---|---|---|---|---|---|
| | | ಅಪ್ಪಯ್ಯನಹಳ್ಳಿ | | ಬಡೇಲಡಕು | | ಶ್ರೀಧರಗಡ್ಡೆ | | ಚಳ್ಳಗುರ್ಕಿ | |
| | | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. | ಕುಟುಂಬಗಳು | ಶೇ. |
| | ಪಾಲ್ಗೊಳ್ಳುತ್ತಾರೆ | ೧೦ | ೫೨.೬೩ | ೧೯ | ೭೬ | ೨೧ | ೭೭.೭೭ | ೧೪ | ೮೨.೩೫ |
| | ಯಾವಾಗಲೂ ದೂ | ೬ | ೩೧.೫೮ | ೪ | ೧೬ | ೩ | ೧೧.೧೧ | ೨ | ೧೧.೭೬ |
| | ಇಲ್ಲ | ೩ | ೧೫.೭೮ | ೨ | ೮ | ೩ | ೧೧.೧೧ | ೧ | ೫.೮೮ |
| ಒಟ್ಟು | | ೧೯ | ೧೦೦ | ೨೫ | ೧೦೦ | ೨೭ | ೧೦೦ | ೧೭ | ೧೦೦ |

ಮೂಲ: ಕ್ಷೇತ್ರ ಕಾರ್ಯ ೨೦೧೬-೧೭

ಈ ಮೇಲಿನ ಅಂಶಗಳಲ್ಲಿ ಗ್ರಾಮ ಪಂಚಾಯಿತಿ ಅಭಿವೃದ್ಧಿಯಲ್ಲಿ ಗ್ರಾಮಸಭೆ ಬಹಳ ಮುಖ್ಯ ಅದರ ಒಂದು ಸಭೆಗೆ ಯಾವ-ಯಾವ ಅಧಿಕಾರಿಗಳು ಪಾಲ್ಗೊಳ್ಳುತ್ತಾರೆ ಎಂಬ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ತಾಲೂಕಿನ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೯ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೫೨.೬೩ರಷ್ಟು ಸದಸ್ಯರು ಗ್ರಾಮಸಭೆಯಲ್ಲಿ ಗ್ರಾಮಸ್ಥರ ಜೊತೆಗೆ ಗ್ರಾಮದ ಮತದಾರರು, ಗ್ರಾಮ ಪಂಚಾಯಿತಿಯ ಚುನಾಯಿತ ಸದಸ್ಯರು, ತಾಲೂಕು ಪಂಚಾಯಿತಿಯ ಚುನಾಯಿತ ಸದಸ್ಯರು, ಜಿಲ್ಲಾ ಪಂಚಾಯಿತಿಯ ಸದಸ್ಯರು, ಎಂ.ಎಲ್.ಎ., ಎಂ.ಪಿ., ಗ್ರಾಮದ ಮುಖಂಡರು, ಶಾಲಾ ಶಿಕ್ಷಕರು, ಎಸ್.ಡಿ.ಎಂ.ಸಿ. ಅಧ್ಯಕ್ಷರು, ಕೃಷಿ ಇಲಾಖೆಯ ಅಧಿಕಾರಿಗಳು, ಅರಣ್ಯ ಇಲಾಖೆಯ ಅಧಿಕಾರಿಗಳು, ನೀರಾವರಿ ಇಲಾಖೆಯ ಅಧಿಕಾರಿಗಳು, ಕಂದಾಯ ಅಧಿಕಾರಿ, ಗ್ರಾಮದ ಲೆಕ್ಕಾಧಿಕಾರಿಗಳು, ತಾಲೂಕು ದಂಡಾಧಿಕಾರಿಗಳು, ಡಿ.ಸಿ. ಮತ್ತು ಎಂ.ಎಲ್.ಸಿ ಇನ್ನಿತರ ಸದಸ್ಯರು ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ ಎಂದು ಕೆಲ ಸದಸ್ಯರು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ. ೩೧.೫೮ರಷ್ಟು ಸದಸ್ಯರು ಗ್ರಾಮ ಸಭೆಗೆ ಎಲ್ಲಾ ಅಧಿಕಾರಿಗಳು ಯಾವಾಗ ಬೇಕ ಆವಾಗ ಬಂದು ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ. ೧೫.೭೮ರಷ್ಟು ಸದಸ್ಯರು ಗ್ರಾಮಸಭೆ ನಡೆಯುವ ಸಂದರ್ಭದಲ್ಲಿ ಗ್ರಾಮಸಭೆಗೆ ಯಾರು ಸೇರುವುದಿಲ್ಲ ಎಂದು ಹೇಳಿಕೊಂಡಿದ್ದಾರೆ. ಬಡೇಲಡಕು ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೫ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೭೬.೦೦ರಷ್ಟು ಸದಸ್ಯರು ಗ್ರಾಮಸಭೆಯಲ್ಲಿ ಗ್ರಾಮಸ್ಥರ ಜೊತೆಗೆ ಗ್ರಾಮದ ಮತದಾರರು, ಗ್ರಾಮ ಪಂಚಾಯಿತಿಯ ಚುನಾಯಿತ ಸದಸ್ಯರು,

ತಾಲೂಕು ಪಂಚಾಯಿತಿಯ ಚುನಾಯಿತ ಸದಸ್ಯರು, ಜಿಲ್ಲಾ ಪಂಚಾಯಿತಿಯ ಸದಸ್ಯರು, ಎಂ.ಎಲ್.ಎ., ಎಂ.ಪಿ., ಗ್ರಾಮದ ಮುಖಂಡರು, ಶಾಲಾ ಶಿಕ್ಷಕರು, ಎಸ್.ಡಿ.ಎಂ.ಸಿ. ಅಧ್ಯಕ್ಷರು, ಕೃಷಿ ಇಲಾಖೆಯ ಅಧಿಕಾರಿಗಳು, ಅರಣ್ಯ ಇಲಾಖೆಯ ಅಧಿಕಾರಿಗಳು, ನೀರಾವರಿ ಇಲಾಖೆಯ ಅಧಿಕಾರಿಗಳು, ಕಂದಾಯ ಅಧಿಕಾರಿ, ಗ್ರಾಮದ ಲೆಕ್ಕಾಧಿಕಾರಿಗಳು, ತಾಲೂಕು ದಂಡಾಧಿಕಾರಿಗಳು, ಡಿ.ಸಿ. ಮತ್ತು ಎಂ.ಎಲ್.ಸಿ ಇನ್ನಿತರ ಸದಸ್ಯರು ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ ಎಂದು ಕೆಲ ಸದಸ್ಯರು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ.೧೬.೦೦ರಷ್ಟು ಸದಸ್ಯರು ಗ್ರಾಮ ಸಭೆಗೆ ಎಲ್ಲಾ ಅಧಿಕಾರಿಗಳು ತಮಗೆ ಅನುಕೂಲವಾದ ಸಮಯದಲ್ಲಿ ಬಂದು ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ.೮.೦೦ರಷ್ಟು ಸದಸ್ಯರು ಗ್ರಾಮಸಭೆ ನಡೆಯುವ ಸಂದರ್ಭದಲ್ಲಿ ಗ್ರಾಮಸಭೆಗೆ ಯಾರು ಸೇರುವುದಿಲ್ಲ ಎಂದು ಹೇಳಿಕೊಂಡಿದ್ದಾರೆ. ಅದರಂತೆ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೨೭ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೭೭.೭೭ರಷ್ಟು ಸದಸ್ಯರು ಗ್ರಾಮಸಭೆಯಲ್ಲಿ ಗ್ರಾಮಸ್ಥರ ಜೊತೆಗೆ ಗ್ರಾಮದ ಮತದಾರರು, ಗ್ರಾಮ ಪಂಚಾಯಿತಿಯ ಚುನಾಯಿತ ಸದಸ್ಯರು, ತಾಲೂಕು ಪಂಚಾಯಿತಿಯ ಚುನಾಯಿತ ಸದಸ್ಯರು, ಜಿಲ್ಲಾ ಪಂಚಾಯಿತಿಯ ಸದಸ್ಯರು, ಎಂ.ಎಲ್.ಎ., ಎಂ.ಪಿ., ಗ್ರಾಮದ ಮುಖಂಡರು, ಶಾಲಾ ಶಿಕ್ಷಕರು, ಎಸ್.ಡಿ.ಎಂ.ಸಿ. ಅಧ್ಯಕ್ಷರು, ಕೃಷಿ ಇಲಾಖೆಯ ಅಧಿಕಾರಿಗಳು, ಅರಣ್ಯ ಇಲಾಖೆಯ ಅಧಿಕಾರಿಗಳು, ನೀರಾವರಿ ಇಲಾಖೆಯ ಅಧಿಕಾರಿಗಳು, ಕಂದಾಯ ಅಧಿಕಾರಿ, ಗ್ರಾಮದ ಲೆಕ್ಕಾಧಿಕಾರಿಗಳು, ತಾಲೂಕು ದಂಡಾಧಿಕಾರಿಗಳು, ಡಿ.ಸಿ. ಮತ್ತು ಎಂ.ಎಲ್.ಸಿ ಇನ್ನಿತರ ಸದಸ್ಯರು ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ ಎಂದು ಕೆಲ ಸದಸ್ಯರು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ. ೧೧.೧೧ರಷ್ಟು ಸದಸ್ಯರು ಗ್ರಾಮ ಸಭೆಗೆ ಎಲ್ಲಾ ಅಧಿಕಾರಿಗಳು ತಮಗೆ ಅನುಕೂಲವಾದ ಸಮಯದಲ್ಲಿ ಬಂದು ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ. ೧೧.೧೧ರಷ್ಟು ಸದಸ್ಯರು ಗ್ರಾಮಸಭೆ ನಡೆಯುವ ಸಂದರ್ಭದಲ್ಲಿ ಗ್ರಾಮಸಭೆಗೆ ಯಾರು ಸೇರುವುದಿಲ್ಲ ಎಂದು ಹೇಳಿಕೊಂಡಿದ್ದಾರೆ. ಕೊನೆಯದಾಗಿ, ಚಳ್ಳಗುರ್ಕಿ ಗ್ರಾಮ ಪಂಚಾಯಿತಿಯಲ್ಲಿ ಒಟ್ಟು ೧೭ ಚುನಾಯಿತ ಸದಸ್ಯರು ಇದ್ದು ಅದರಲ್ಲಿ ಶೇ. ೮೨.೩೫ರಷ್ಟು ಸದಸ್ಯರು ಗ್ರಾಮಸಭೆಯಲ್ಲಿ ಗ್ರಾಮಸ್ಥರ ಜೊತೆಗೆ ಗ್ರಾಮದ ಮತದಾರರು, ಗ್ರಾಮ ಪಂಚಾಯಿತಿಯ ಚುನಾಯಿತ ಸದಸ್ಯರು, ತಾಲೂಕು ಪಂಚಾಯಿತಿಯ ಚುನಾಯಿತ ಸದಸ್ಯರು, ಜಿಲ್ಲಾ ಪಂಚಾಯಿತಿಯ ಸದಸ್ಯರು, ಎಂ.ಎಲ್.ಎ., ಎಂ.ಪಿ., ಗ್ರಾಮದ ಮುಖಂಡರು, ಶಾಲಾ ಶಿಕ್ಷಕರು, ಎಸ್.ಡಿ.ಎಂ.ಸಿ. ಅಧ್ಯಕ್ಷರು, ಕೃಷಿ ಇಲಾಖೆಯ ಅಧಿಕಾರಿಗಳು, ಅರಣ್ಯ ಇಲಾಖೆಯ ಅಧಿಕಾರಿಗಳು, ನೀರಾವರಿ ಇಲಾಖೆಯ ಅಧಿಕಾರಿಗಳು, ಕಂದಾಯ

ಅಧಿಕಾರಿ, ಗ್ರಾಮದ ಲೆಕ್ಕಾಧಿಕಾರಿಗಳು, ತಾಲೂಕು ದಂಡಾಧಿಕಾರಿಗಳು, ಡಿ.ಸಿ. ಮತ್ತು ಎಂ.ಎಲ್.ಸಿ ಇನ್ನಿತರ ಸದಸ್ಯರು ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ ಎಂದು ಕೆಲ ಸದಸ್ಯರು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ.೧೧.೭೬ರಷ್ಟು ಸದಸ್ಯರು ಗ್ರಾಮ ಸಭೆಗೆ ಎಲ್ಲಾ ಅಧಿಕಾರಿಗಳು ಯಾವಾಗ ಬೇಕು ಆವಾಗ ಬಂದು ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ ಎಂದು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. ಶೇ.೫.೮೮ರಷ್ಟು ಸದಸ್ಯರು ಗ್ರಾಮಸಭೆ ನಡೆಯುವ ಸಂದರ್ಭದಲ್ಲಿ ಗ್ರಾಮಸಭೆಗೆ ಯಾರು ಸೇರುವುದಿಲ್ಲ ಎಂದು ಹೇಳಿಕೊಂಡಿದ್ದಾರೆ.

ಒಟ್ಟಾರೆಯಾಗಿ ಮೇಲಿನ ಹೇಳಿಕೆಯನ್ನು ಗಮನಿಸಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಅದರಲ್ಲಿ ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ನಡೆಯುವ ಗ್ರಾಮಸಭೆಗೆ ಕಡಿಮೆ ಸಂಖ್ಯೆಯಲ್ಲಿ ಗ್ರಾಮದ ಜನರು, ಗ್ರಾಮದ ಮುಖಂಡರು, ಅಧಿಕಾರಿಗಳು ಮತ್ತು ಚುನಾಯಿತ ಸದಸ್ಯರು ಪಾಲ್ಗೊಳ್ಳುತ್ತಾರೆ ಎಂದು ಗಮನಿಸಲಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿ ಸದಸ್ಯರಲ್ಲಿ ರಾಜಕೀಯ ಭಾಗವಹಿಸುವಿಕೆಯ ಕೊರತೆ, ಜನರನ್ನು ಸಂಪರ್ಕಕ್ಕೆ ತೆಗೆದುಕೊಂಡು ಗ್ರಾಮದ ಅಭಿವೃದ್ಧಿಯನ್ನು ಮಾಡುವಲ್ಲಿ ವಿಫಲತೆಯನ್ನು ಕಂಡಿದ್ದಾರೆ. ಆದರೆ, ಗ್ರಾಮಸಭೆಯು ಗ್ರಾಮದ ಅಭಿವೃದ್ಧಿಯ ಒಂದು ಸಭೆ ಇಲ್ಲಿ ಎಲ್ಲಾ ಸರ್ಕಾರಿ ಅಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರು ಇರುವದರಿಂದ ತಮ್ಮ ಗ್ರಾಮದ ಅಭಿವೃದ್ಧಿಗೆ ಹಲವು ಅಭಿವೃದ್ಧಿ ಮಾದರಿಗಳನ್ನು ನೀಡುವಲ್ಲಿ ಯಶಸ್ವಿಯಾಗುತ್ತಾರೆ. ಹಾಗಾಗಿ ಇಂತಹ ಸಭೆಗೆ ಗ್ರಾಮದ ಮತದಾರರು ಮತ್ತು ಇತರ ವಾರ್ಡಿನ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಮಾಡಿ, ಜನರು ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಹೆಚ್ಚಿನ ಪ್ರಮಾಣದಲ್ಲಿ ಪ್ರಶ್ನೆ ಮಾಡುತ್ತಾ ಸ್ಥಳೀಯ ರಾಜಕೀಯದಲ್ಲಿ ಪಾಲ್ಗೊಳ್ಳುವಂತಹ ಅವಶ್ಯಕತೆಯು ಇದೆ ಎಂದು ತಿಳಿದುಬಂದಿದೆ.

**೫.೩. ಗ್ರಾಮ ಪಂಚಾಯಿತಿಗಳ ಚುನಾಯಿತ ಸದಸ್ಯರ ತುಲನಾತ್ಮಕ ವಿಶ್ಲೇಷಣೆ :**

ಬಳ್ಳಾರಿ ತಾಲೂಕು ಮತ್ತು ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ-ಗತಿಯನ್ನು ಗಮನಿಸಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಗ್ರಾಮ ಪಂಚಾಯಿತಿಯ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರು, ಒಣಭೂಮಿಯನ್ನು ಹೊಂದಿದ್ದು ಜೀವನಾಧಾರಕ್ಕೆ ಕೂಲಿಯನ್ನು ಮಾಡುತ್ತಾ ಹೆಚ್ಚಿನ ವರಮಾನವನ್ನು ಹೊಂದದೆ ವೈಯಕ್ತಿಕ ಜೀವನವನ್ನು ಗುಣಮಟ್ಟ ಜೀವನದಿಂದ ನಡೆಸಿಕೊಂಡು ಹೋಗುವಲ್ಲಿ ವಿಫಲವಾಗಿದ್ದು ಗ್ರಾಮದ ಅಭಿವೃದ್ಧಿಯನ್ನು ಸಾಧಿಸಲು ವಿಫಲವಾಗಿರುವುದರಿಂದ ಹಿಂದುಳಿದಿದೆ ಎನ್ನಬಹುದು.

ಗ್ರಾಮ ಪಂಚಾಯಿತಿಗಳ ಚುನಾಯಿತ ಪ್ರತಿನಿಧಿಗಳ ಆಯ್ಕೆ, ಶಿಕ್ಷಣ ಸ್ಪರ್ಧೆ ಮತ್ತು ಗೆಲುವಿನ ಅಂಶಗಳನ್ನು ಗಮನಿಸಿದಾಗ ಮುಂದುವರಿದ ಬಳ್ಳಾರಿ ಗ್ರಾಮ ಪಂಚಾಯಿತಿಗಳಿಗಿಂತ ಹಿಂದುಳಿದ ಗ್ರಾಮ ಪಂಚಾಯಿತಿಯ ಸದಸ್ಯರು ಹೆಚ್ಚಿನ ಸಂಖ್ಯೆಯ ಬೆಂಬಲವನ್ನು ಪಡೆದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜಾತಿಯ ಸಾಧನದಿಂದ ಗೆದ್ದು ಹಾಗೂ ಶಿಕ್ಷಣದಿಂದ ಹೆಚ್ಚಿನ ಸಂಖ್ಯೆಯಲ್ಲಿ ವಂಚಿತಗೊಂಡಿದ್ದರಿಂದ ವಾರ್ಡಿನ ಅಭಿವೃದ್ಧಿಯನ್ನು ಮಾಡದೆ ಹಿಂದುಳಿದಿದೆ ಎನ್ನಬಹುದು.

ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಸದಸ್ಯರು ತಮ್ಮ ಚುನಾವಣೆಗೆ ಸ್ಪರ್ಧಿಸಲು ವಾರ್ಡಿನ ಉದ್ಧಾರಕ್ಕಾಗಿಯೇ ಎಂಬ ಅಂಶವು ಕೆಳಮಟ್ಟದಲ್ಲಿದ್ದು ಅದರಂತೆ ಕ್ಷೇತ್ರ ಮೀಸಲು ಹಿರಿಯರು ರಾಜಕೀಯದಲ್ಲಿದ್ದುದ್ದರಿಂದ ಹೆಚ್ಚಿನ ಸಂಖ್ಯೆಯನ್ನು ಹೇಳಿಕೊಂಡಿರುತ್ತಾರೆ. ಹಾಗೆಯೇ ಹಿಂದುಳಿದ ಪ್ರದೇಶದಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿ ಕಾರಣದಿಂದ ಮಹಿಳೆಯು ರಾಜಕೀಯದಲ್ಲಿ ಭಾಗವಹಿಸಿ ಅವರ ನಿರ್ಣಯವು ಇರದೇ ಎಲ್ಲಾ ವಿಚಾರದ ತೀರ್ಮಾನದಲ್ಲಿ ಗಂಡಂದಿರ ಹಸ್ತಕ್ಷೇಪ ಹೆಚ್ಚಾಗಿರುವುದು ತಿಳಿದುಬಂದಿದೆ. ಅಂದರೆ ಹಿಂದುಳಿದ ಗ್ರಾಮ ಪಂಚಾಯಿತಿಯಲ್ಲಿ ಮೀಸಲಾತಿಯ ಅನುಗುಣವಾಗಿ ಮಹಿಳೆಯ ಆಯ್ಕೆಯಾಗಿ ರಾಜಕೀಯದಲ್ಲಿ ಸಮರ್ಥವಾಗಿ ಭಾಗವಹಿಸದೆ ಮಹಿಳಾ ಸಬಲೀಕರಣ ಪರಿಕಲ್ಪನೆಯನ್ನು ಸ್ಥಳೀಯ ಸಂಸ್ಥೆಯಿಂದ ಈಡೇರಿಸುವುದರಲ್ಲಿ ಕೂಡ ವಿಫಲತೆಯಿಂದ ಕೂಡ್ಲಿಗಿ ಗ್ರಾಮ ಪಂಚಾಯಿತಿಗಳು ಹಿಂದುಳಿದಿವೆ ಎನ್ನಬಹುದು.

ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಮತ್ತು ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರ ಚುನಾವಣೆಯ/ರಾಜಕೀಯದ ಅನುಭವಗಳನ್ನು ನೋಡಿದಾಗ ಇಲ್ಲಿಯೂ ಕೂಡ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವೈಯಕ್ತಿಕವಾಗಿ ಹೆಚ್ಚಿನ ಜನರ ಸಂಪರ್ಕ ಹೊಂದದಿರುವುದು, ಚುನಾವಣೆಯಲ್ಲಿ ಗೆಲ್ಲಲು ಹಣ-ಮಧ್ಯಪಾನವು ಹೆಚ್ಚಿನ ಪ್ರಮಾಣ ದಲ್ಲಿರುವುದು, ಚುನಾವಣೆಗಾಗಿ ಆದಾಯವನ್ನು ಹೆಚ್ಚಿನ ಪ್ರಮಾಣವನ್ನು ಹೊಂದದೆ ಸಾಲವನ್ನು ಮಾಡಿ ಗೆಲ್ಲಲು ಹಣ ಖರ್ಚು ಮಾಡಿದ್ದಾಗಿಯು ಮತ್ತು ಅಭಿವೃದ್ಧಿಗಾಗಿ ಚುನಾವಣಾ ಪೂರ್ವದಲ್ಲಿ ನೀಡಿದಂತಹ ಆಶ್ವಾಸನೆಗಳನ್ನು ಈಡೇರಿಸದೆ ಯಾವ ಅಭಿವೃದ್ಧಿಯನ್ನು ಸಾಧಿಸದೆ ವಿಫಲವಾಗಿರುವುದದ್ದರಿಂದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ.

ಎರಡು ಗ್ರಾಮ ಪಂಚಾಯಿತಿಗಳ ಚುನಾಯಿತ ಪ್ರತಿನಿಧಿಗಳ ರಾಜಕೀಯ ತಿಳುವಳಿಕೆ ಮತ್ತು ಭಾಗವಹಿಸುವಿಕೆಯ ಅಂಶಗಳನ್ನು ನೋಡಿದಾಗ ಮುಂದುವರಿದ ಬಳ್ಳಾರಿ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಸದಸ್ಯರು ಕಡಿಮೆ ಸಂಖ್ಯೆ ಜನರ ಸಮಸ್ಯೆಗಳಿಗೆ ಪರಿಹಾರಕ್ಕಾಗಿ, ಫಲಾನುಭವಿಗಳ ಆಯ್ಕೆಯಿರಬಹುದು ಕಾರಣಗಳಿಗಾಗಿ ಸ್ಥಳೀಯ ಸಂಸ್ಥೆಗಳಿಗೆ ದಿನಾಲು ಹೋಗದೇ ಇರುವುದು, ಸಾಮಾನ್ಯ ಸಭೆಯ ಬಗ್ಗೆ ತಿಳುವಳಿಕೆ ಮತ್ತು ಅದರಲ್ಲಿ ಭಾಗವಹಿಸದೇ ಇರುವುದು ಹಾಗೂ ಅಧಿಕಾರಿಗಳೊಂದಿಗೆ ಹೆಚ್ಚಿನ ಪ್ರಮಾಣದಲ್ಲಿ ಚರ್ಚಿಸದೇ, ಸ್ಥಾಯಿ ಸಮಿತಿಗಳ ಬಗ್ಗೆಯಾಗಲಿ ಮತ್ತು ಸ್ಥಳೀಯ ಸಂಸ್ಥೆಗಳ ನಿಯಮಿತವಾಗಿ ಜವಾಬ್ದಾರಿಗಳನ್ನು ನಿರ್ವಹಿಸದೆ ಆಡಳಿತವನ್ನು ಸಮರ್ಥವಾಗಿ ನಿರ್ವಹಿಸದೆ ಇಂತಹ ಹಲವು ಕಾರಣಗಳಿಂದ ಮುಂದುವರಿದ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಗ್ರಾಮ ಪಂಚಾಯಿತಿಯ ಸದಸ್ಯರು ಹೆಚ್ಚಿನ ರೀತಿಯಲ್ಲಿ ವಿಫಲಗೊಂಡಿರುವುದ್ದರಿಂದ ಕೂಡ್ಲಿಗಿ ಗ್ರಾಮ ಪಂಚಾಯಿತಿಗಳು ಹಿಂದುಳಿದಿವೆ ಎನ್ನಬಹುದಾಗಿದೆ.

ಗ್ರಾಮಗಳ ಅಭಿವೃದ್ಧಿಗೆ ಗ್ರಾಮ ಪಂಚಾಯಿತಿಗಳಿಂದ ನೇರವಾದ ಪ್ರಮುಖ ಅಭಿವೃದ್ಧಿ ಕಾರ್ಯಗಳನ್ನು ಮಾಡದಿದ್ದರೂ ಸಹ ಚರಂಡಿ ನಿರ್ಮಾಣ, ಸಮರ್ಪಕ ಕುಡಿಯುವ ನೀರಿನ ಪೂರೈಕೆ, ಬೀದಿ ದೀಪಗಳ ವ್ಯವಸ್ಥೆ, ನಿಯಮಿತವಾಗಿ ಸ್ವಚ್ಛತೆಯನ್ನು ಕೈಗೊಳ್ಳುವುದು ಮತ್ತು ಶೌಚಾಲಯ ನಿರ್ಮಾಣ ಕೆಲವು ಗ್ರಾಮಗಳಲ್ಲಿ ಕಾಣಬಹುದಾಗಿದೆ. ಗ್ರಾಮ ಪಂಚಾಯಿತಿಗಳು ಸಮರ್ಪಕ ರೀತಿಯಲ್ಲಿ ಅಭಿವೃದ್ಧಿ ಕಾರ್ಯವನ್ನು ಕೈಗೊಳ್ಳುತ್ತವೆಯೋ ಎಂಬುದನ್ನು ವಾರ್ಡಿನ ಜನರು ರೋಸಿ ಹೋಗಿದ್ದಾರೆ. ನಿರಂತರ ಮೇಲೆ ಹೇಳಿದ ಕೆಲವು ಕೆಲಸ-ಕಾರ್ಯಗಳನ್ನು ಕೈಗೊಳ್ಳಲಾಗುತ್ತದೆ ಎಂದು ಗ್ರಹಿಸಲಾಗಿದೆ. ಹೀಗೆ ಗ್ರಾಮ ಪಂಚಾಯಿತಿಗಳು ವಾರ್ಡಿನ ಅಭಿವೃದ್ಧಿಗಾಗಿ ಶ್ರಮ ವಹಿಸುತ್ತಿವೆ. ಆದರೆ ಚುನಾಯಿತ ಪ್ರತಿನಿಧಿಗಳು ಮತ್ತು ವಾರ್ಡಿನ ಜನರು ಪರಸ್ಪರ ಸ್ಥಳೀಯ ಆಡಳಿತದಲ್ಲಿ ಹೆಚ್ಚು-ಹೆಚ್ಚು ತಿಳುವಳಿಕೆ ಹೊಂದುವುದರ ಜೊತೆಯಲ್ಲಿ ಭಾಗವಹಿಸುವುದೊಂದಿಗೆ ಅಭಿವೃದ್ಧಿಯನ್ನು ಹೊಂದಬಹುದಾಗಿದೆ.

ಮೇಲಿನ ಅಂಶಗಳನ್ನು ನೋಡಿದಾಗ ಒಟ್ಟಾರೆ ಈ ವಿಶ್ಲೇಷಣೆಯಿಂದ ಗ್ರಾಮದ ಜನರ ಮತ್ತು ಚುನಾಯಿತ ಪ್ರತಿನಿಧಿಗಳ ಹೆಚ್ಚು ಹೆಚ್ಚು ಸಾಕ್ಷರತೆಯನ್ನು ಪಡೆಯುತ್ತಾ ಆಡಳಿತದ ಬಗ್ಗೆ ತರಬೇತಿಯನ್ನು ಹೊಂದಿ ಪ್ರಶ್ನಿಸುವುದರೊಂದಿಗೆ ತಮ್ಮ ವೈಯಕ್ತಿಕವಾಗಿ ಉತ್ತಮ ಜೀವನ ಮಟ್ಟವನ್ನು ನಿರ್ವಹಿಸಿಕೊಂಡಾಗ ಅಭಿವೃದ್ಧಿಯನ್ನು ಹೊಂದಬಹುದಾಗಿದೆ. ಹಾಗಾಗಿ ಆಯಾ ಗ್ರಾಮದ ಜನರಲ್ಲಿ ಆಡಳಿತದ ಬಗ್ಗೆ ಬೇಸರದ ಭಾವನೆ, ರಾಜಕಾರಣಿಗಳಲ್ಲಿ

ನಿರ್ವಹಣೆ ಸಮಸ್ಯೆ, ಇಚ್ಛಾಶಕ್ತಿಯ ಕೊರತೆ ಪರಸ್ಪರವಾಗಿ ಭಾಗವಹಿಸದಿರುವುದು, ಸರ್ಕಾರಿ ಯೋಜನೆಗಳ ಮೇಲೆ ಹೆಚ್ಚಾಗಿ ಅವಲಂಬನೆಯಾಗಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಆದ್ದರಿಂದ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಮೇಲಿನ ಹೇಳಿದ ಅಂಶಗಳ ಬಗ್ಗೆ ಬದಲಾವಣೆಯ ಆದ್ಯತೆಯನ್ನು ಮೊದಲು ಹಿಂದುಳಿದ ಗ್ರಾಮ ಪಂಚಾಯಿತಿಗಳಿಗೆ ಕೊಡಬೇಕಾಗಿದೆ. ಹೀಗೆ ಗ್ರಾಮ ಪಂಚಾಯಿತಿಗಳು ಕೆಲವು ಅಭಿವೃದ್ಧಿ ಕಾರ್ಯಗಳನ್ನು ಮಾಡಿವೆ ಎಂದು ತಿಳಿಯಬಹುದಾಗಿದೆ.

## ಅಧ್ಯಾಯ : ಆರು

## ಪಂಚಾಯತ್ ರಾಜ್ ವ್ಯವಸ್ಥೆಯ ಪರಿಣಾಮಕಾರಿ ಅನುಷ್ಠಾನದಲ್ಲಿ ರಾಜ್ಯ ಹಣಕಾಸು ಆಯೋಗ ಮತ್ತು ಜಿಲ್ಲಾ ಯೋಜನಾ ಸಮಿತಿಯ ಪಾತ್ರ

೬.೧. ಜಿಲ್ಲಾ ಯೋಜನಾ ಸಮಿತಿಯ ರಚನೆ, ಕಾರ್ಯಗಳು ಮತ್ತು ಮಿತಿಗಳು

೬.೨. ರಾಜ್ಯ ಹಣಕಾಸು ಆಯೋಗದ ರಚನೆ ಮತ್ತು ಅಧಿಕಾರಗಳು

೬..೩. ಗ್ರಾಮ ಪಂಚಾಯಿತಿಗಳ ಬಲವರ್ಧನೆಗೆ ತೆಗೆದುಕೊಂಡ ಕ್ರಮಗಳು

೬.೪. ಕರ್ನಾಟಕ ರಾಜ್ಯ ಹಣಕಾಸು ಆಯೋಗಗಳ ಸಂವಿಧಾನಾತ್ಮಕ ಹಿನ್ನೆಲೆ ಮತ್ತು ಅವಲೋಕನ

೬.೫. ಪಂಚಾಯತ್ ರಾಜ್ ಸಂಸ್ಥೆಗಳ ಹಣಕಾಸು ಸ್ಥಿತಿಗತಿಯ ಮೌಲ್ಯಮಾಪನ

## ಅಧ್ಯಾಯ - ಆರು

# ಪಂಚಾಯಿತ್ ರಾಜ್ ವ್ಯವಸ್ಥೆಯ ಪರಿಣಾಮಕಾರಿ ಅನುಷ್ಠಾನದಲ್ಲಿ ರಾಜ್ಯ ಹಣಕಾಸು ಆಯೋಗ ಮತ್ತು ಜಿಲ್ಲಾ ಯೋಜನಾ ಸಮಿತಿಯ ಪಾತ್ರ

### ಪ್ರಸ್ತಾವನೆ

ವಿಶ್ವದಲ್ಲಿ ಪ್ರಜೆಗಳಿಗೆ ಆಳ್ವಿಕೆಯ ಹಕ್ಕು ನಿರಂತರ ಹೋರಾಟದಿಂದಲೇ ಲಭ್ಯವಾಗಿದೆ. ನಿರಂಕುಶ ಪ್ರಭುತ್ವದ ಹಿಡಿತದಿಂದ ಬಿಡುಗಡೆಯಾಗಿ ಹಾಗೂ ಪ್ರಜಾಪ್ರಭುತ್ವ ಸ್ಥಾಪಿಸಲು ಅನೇಕ ಕಷ್ಟನಷ್ಟಗಳಿಗೆ ಜನರು ಒಳಪಟ್ಟಿರುತ್ತಾರೆ. ಮಹಾತ್ಮ ಗಾಂಧೀಜಿಯವರು ಭಾರತ ದೇಶವು ಹಳ್ಳಿಗಳ ದೇಶವಾಗಿರುವುದರಿಂದ ಆಡಳಿತವನ್ನು ಹಳ್ಳಿಗಳಿಗೆ ತೆಗೆದುಕೊಂಡು ಹೋಗಲು ಕನಸಿ ಕಂಡಿದ್ದರು, ಸಮಾಜದಲ್ಲಿ ಶೋಷಿತರು, ದುರ್ಬಲರು ಶಕ್ತರಾಗಬೇಕು ಹಾಗೂ ಆಡಳಿತದಲ್ಲಿ ಜನರು ಸಹಭಾಗಿಗಳಾಗಬೇಕು ಅಧಿಕಾರ ಜನಸಾಮಾನ್ಯರ ವಶಕ್ಕೆ ಬಂದಾಗ ಮಾತ್ರ ಭಾರತ ಸ್ವಾತಂತ್ರ್ಯ ಭಾರತ ಎಂಬ ಅರ್ಥ ಪೂರ್ಣವೆಂದು ಗಾಂಧೀಜಿಯವರು ನಂಬಿದ್ದರು. ನಮ್ಮ ದೇಶದಲ್ಲಿ ಅಧಿಕಾರ ವಿಕೇಂದ್ರೀಕರಣದ ಬಗ್ಗೆ ಅನೇಕ ಪ್ರಯೋಗಗಳು ೧೮೮೨ ರಿಂದಲೇ ಪ್ರಾರಂಭವಾಗಿದ್ದು, ೧೮೮೨ರಲ್ಲಿ ಲಾರ್ಡ್ ರಿಪ್ಪನ್ ಜಾರಿಗೆ ತಂದ ಸುಧಾರಣಾ ಕ್ರಮಗಳಿಂದ ಪ್ರೇರಿತರಾಗಿರುವ ಅನೇಕ ಸಂಸ್ಥಾನಗಳು ವಿಕೇಂದ್ರೀಕರಣ ವ್ಯವಸ್ಥೆಯನ್ನು ಜಾರಿಗೆ ತರಲು ಪ್ರಯತ್ನ ಪಟ್ಟವು.

ಕೇಂದ್ರೀಕರಣ ಪ್ರಕ್ರಿಯ ಬಲಪಡಿಸಲು ಪ್ರಥಮವಾಗಿ ೧೯೮೭ನೇ ವರ್ಷದಲ್ಲಿ ೨೫೭ ಯೋಜನಾ ಕಾರ್ಯಕ್ರಮಗಳನ್ನು ಸರ್ಕಾರದ ವ್ಯಾಪ್ತಿಯಿಂದ ಜಿಲ್ಲಾ ಪರಿಷತ್ತಿಗೆ ವರ್ಗಾಯಿಸಲಾಯಿತು. ಈ ಪೈಕಿ ೮೯ ಯೋಜನಾ ಕಾರ್ಯಕ್ರಮಗಳನ್ನು ಮಂಡಲ ಪಂಚಾಯಿತಿಗಳಿಗೆ ವರ್ಗ ಮಾಡಲಾಯಿತು. ವರ್ಗಾವಣೆಗೊಂಡಿರುವ ಕಾರ್ಯಕ್ರಮಗಳು ೨೦ ಇಲಾಖೆಗಳಿಗೆ ಸೇರಿದ್ದು, ಈ ಎಲ್ಲಾ ಇಲಾಖೆಗಳು ಜಿಲ್ಲಾ ಪರಿಷತ್‌ನ ಆಡಳಿತ ವ್ಯಾಪ್ತಿಗೆ ತರಲಾಯಿತು. ಈ ಅಧಿನಿಯಮವು ಗ್ರಾಮ ಸಭೆಯನ್ನು ಸ್ಥಾಪಿಸಿತು.

ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಅತ್ಯಂತ ಮುಖ್ಯವಾದ ಪರಿಣಾಮವು ೧೯೯೨ನೇ ವರ್ಷದಲ್ಲಿ ಸಂವಿಧಾನವನ್ನು ತಿದ್ದುಪಡಿ ಮಾಡುವ ಮೂಲಕ ತರಲಾಯಿತು. ಸಂವಿಧಾನದ

೭೩ ಮತ್ತು ೭೪ನೇ ತಿದ್ದುಪಡಿಗಳ ಮೂಲಕ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಮಾನ್ಯತೆಯನ್ನು ನೀಡಲಾಯಿತು. ಈ ತಿದ್ದುಪಡಿಗಳಿಗೆ ಅನುಗುಣವಾಗಿ ಕರ್ನಾಟಕ ಸರ್ಕಾರವು ೧೯೯೩ನೇ ವರ್ಷದಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩ನ್ನು ಜಾರಿಗೆ ತಂದಿತು. ಸ್ಥಳೀಯರಿಗೆ ಅಧಿಕಾರ ನೀಡುವ ಮತ್ತು ಆಡಳಿತದಲ್ಲಿ ಭಾಗವಹಿಸುವ ದೃಷ್ಠಿಕೋನದಿಂದ ಈ ತಿದ್ದುಪಡಿಗೆ ಅನುಗುಣವಾಗಿ ಜಿಲ್ಲಾ ಯೋಜನಾ ಸಮಿತಿಯ ಜಾರಿಗೆ ಕಡ್ಡಾಯಗೊಳಿಸಲಾಯಿತು. ಇಡೀ ದೇಶದಲ್ಲಿಯೇ ಮೂರು ಹಂತದ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಜಾರಿಗೆ ತಂದಿರುವ ಎರಡನೇ ರಾಜ್ಯವು ಕರ್ನಾಟಕ ರಾಜ್ಯವಾಗಿದೆ.

ನಾಡಿನ ಪ್ರತಿಯೊಬ್ಬ ಪ್ರಜೆಯೂ ದೇಶದ ಅಭಿವೃದ್ಧಿ ಮತ್ತು ಆಡಳಿತದಲ್ಲಿ ಭಾಗಿಯಾಗುವ ಅವಕಾಶ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಕಲ್ಪಿಸಲಾಗಿದೆ. ಯೋಜನೆಗಲು ಸ್ಥಳೀಯ ಜನರ ಬೇಡಿಕೆ ಹಾಗೂ ಸಂಪನ್ಮೂಲಗಳ ಲಭ್ಯತೆ ಇವುಗಳ ಆಧಾರದ ಮೇಲೆ ರೂಪಗೊಳ್ಳಬೇಕು. ಒಟ್ಟಾರೆ ಗ್ರಾಮೀಣ ಜನರ ಆರ್ಥಿಕ ಹಾಗೂ ಸಾಮಾಜಿಕ ಮಟ್ಟದಲ್ಲಿ ಸುಧಾರಣೆ ತರುವುದು ಯೋಜನೆಗಳ ಗುರಿಯಾಗಬೇಕು. ಅದಿಕಾರದ ವಿಕೇಂದ್ರೀಕರಣ ಜೊತೆಗೆ ಯೋಜನೆಗಳನ್ನು ಸಹ ಮೂರು ಹಂತದಲ್ಲಿ ಅನುಷ್ಠಾಗೊಳಿಸುವುದು ಜಾರಿಗೆ ಬಂದಿರುತ್ತದೆ. ಎಲ್ಲಾ ಯೋಜನೆಗಳನ್ನು ಮೂರು ಭಾಗಗಳನ್ನಾಗಿ ವರ್ಗಿಕರಣ ಮಾಡಿ ಜಿಲ್ಲಾ ಪಂಚಾಯತ್, ತಾಲೂಕು ಪಂಚಾಯುತ್ ಹಾಗೂ ಗ್ರಾವು ಪಂಚಾಯುತ್ ವುಟ್ಟದಲ್ಲಿ ಅನುಷ್ಠಾನಗೊಳಿಸಲಾಗಿರುತ್ತದೆ. ಕೆಳಮಟ್ಟದಿಂದ ಯೋಜನೆಗಳನ್ನು ರೂಪಿಸುವುದರಿಂದ ಅಭಿವೃದ್ಧಿ ಕಾರ್ಯಕ್ರಮಗಳು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಗಿದ್ದು ಕೆಳಮಟ್ಟದಿಂದ ಯೋಜನೆಗಳನ್ನು ರೂಪಿಸುವುದರಿಂದ ಅಭಿವೃದ್ಧಿ ಕಾರ್ಯಕ್ರಮಗಳ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗುತ್ತದೆ.

**೬.೧. ಜಿಲ್ಲಾ ಯೋಜನಾ ಸಮಿತಿಯ ರಚನೆ, ಕಾರ್ಯಗಳು ಮತ್ತು ಮಿತಿಗಳು:**

ಸಂವಿಧಾನದ ೨೪೩ ಜಡ್.ಡಿ. ಪರಿಚ್ಛೇದದ ಪ್ರಕಾರ ಜಿಲ್ಲಾ ಯೋಜನಾ ಸಮಿತಿಗಳು ಜಿಲ್ಲೆಗಳಿಗೆ ಸಂಬಂಧಿಸಿದ ಅಭಿವೃದ್ಧಿ ಯೋಜನೆಗಳನ್ನು ಸಿದ್ದಪಡಿಸುವಾಗ ಮೊದಲನೆಯದಾಗಿ, ಪಂಚಾಯಿತಿ (ಗ್ರಾಮೀಣ ಸ್ಥಳೀಯ ಸಂಸ್ಥೆಗಳು) ಮತ್ತು ಪರಸಭೆಗಳ (ನಗರ ಸ್ಥಳೀಯ ಸಂಸ್ಥೆಗಳು) ಸಾಮಾನ್ಯವಾದ ಹಿತಾಸಕ್ತಿ-ಅಗತ್ಯಗಳನ್ನು, ಪ್ರಾದೇಶಿಕ ಯೋಜನೆಗಳನ್ನು ನೀರಿನ ಹಂಚಿಕೆಯನ್ನು ಭೌತಿಕ ಹಾಗೂ ನೈಸರ್ಗಿಕ ಸಂಪನ್ಮೂಲಗಳನ್ನು ಮೂಲ ಸೌಲಭ್ಯ ಮತ್ತು ಪರಿಸರದ ರಕ್ಷಣೆಯ ಸಂಯೋಜಿತ ಅಭಿವೃದ್ಧಿಯನ್ನು ಅಗತ್ಯವಾಗಿ ಗಣನೆಗೆ ತೆಗೆದುಕೊಳ್ಳಬೇಕು.

ಎರಡನೆಯದಾಗಿ, ಲಭ್ಯವಿರುವ ಹಣಕಾಸು ಹಾಗೂ ಇತರೆ ಸಂಪನ್ಮೂಲಗಳ ಗಾತ್ರ ಹಾಗೂ ವಿಧಗಳನ್ನು ಗಮನ ಸಂಪರ್ಕಿಸಿ ಸಲಹೆ ಮಾರ್ಗದರ್ಶನ ಪಡೆಯುವುದು.

ಮೂರನೆಯದಾಗಿ, ರಾಜ್ಯಪಾಲರು ಆದೇಶದ ಮೂಲಕ ಶಿಫಾರಸ್ಸು ಮಾಡುವ ಸಂಸ್ಥೆ ಅಥವಾ ಸಂಘಟನೆಗಳನ್ನು ಸಂಪರ್ಕಿಸಿ ಸಲಹೆ ಮಾರ್ಗದರ್ಶನ ಪಡೆಯುವುದು.

ನಾಲ್ಕನೆಯದಾಗಿ, ಪ್ರತಿ ಜಿಲ್ಲಾ ಯೋಜನಾ ಸಮಿತಿಯ ಅಧ್ಯಕ್ಷರು, ಸಮಿತಿಯ ಶಿಫಾರಸ್ಸುಗಳನ್ನು ಒಳಗೊಂಡಂತೆ ಅಭಿವೃದ್ಧಿ ಯೋಜನೆ ಕರಡನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸಬೇಕು.

**ಜಿಲ್ಲಾ ಯೋಜನಾ ಸಮಿತಿ**

ಜಿಲ್ಲಾ ಯೋಜನಾ ಸಮಿತಿ ದೇಶದ ಯೋಜನಾ ಪ್ರಕ್ರಿಯೆಯಲ್ಲಿ ಹೊಸ ದಿಗಂತವನ್ನೇ ಸೃಷ್ಟಿಸಿದೆ. ೧೯೯೩ರ ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಗಳ ಮೂಲಕ ಜಿಲ್ಲಾ ಯೋಜನಾ ಸಮಿತಿಯನ್ನು/ಗಳನ್ನು ಕಟ್ಟುನಿಟ್ಟಾಗಿ ಸ್ಥಾಪಿಸಲಾಗಿದೆ. ಸಂವಿಧಾನದ ೨೪೩ನೇ ವಿಧಿಯ ಉಪವಿಧಿ-೨ಡಿಯ ಅನ್ವಯ ಜಾರಿಗೆ ತರಲಾಯಿತು.

**ರಚನೆ**

| | | |
|---|---|---|
| ಈ ಸಮಿತಿಯ ಅಧ್ಯಕ್ಷರು | – | ಜಿಲ್ಲಾ ಪಂಚಾಯಿತಿ ಅಧ್ಯಕ್ಷರು. |
| ಸಮಿತಿಯ ಉಪಾಧ್ಯಕ್ಷರು | – | ಜಿಲ್ಲಾ ಮುಖ್ಯ ಕೇಂದ್ರದ ನಗರ ಸಭೆ ಅಧ್ಯಕ್ಷರು/ಮಹಾಪೌರರು |
| ಸಮಿತಿಯ ಸದಸ್ಯರು | – | ಜಿಲ್ಲೆಯ ಸಂಸತ್ ಸದಸ್ಯರು, ಜಿಲ್ಲೆಯ ಶಾಸನ ಸಭಾ |

ಸದಸ್ಯರು ಶೇ ೮೦ ಕ್ಕಿಂತ ಕಡಿಮೆ ಇಲ್ಲದಂತೆ ಜಿಲ್ಲಾ ಪಂಚಾಯತಿ ಮತ್ತು ಪುರ/ನಗರ ಸಭೆಗಳ ಸದಸ್ಯರಿಂದ ಚುನಾಯಿತರಾಗಿರುವ ಸದಸ್ಯರು.

**ಈ ಸಮಿತಿಯ ಕಡ್ಡಾಯ ತಿದ್ದುಪಡಿಗಳು**

ಗ್ರಾಮ ಪಂಚಾಯಿತಿಗಳು ವಾರ್ಷಿಕ ಅಭಿವೃದ್ಧಿ ಯೋಜನೆಗಳನ್ನು ತಯಾರಿಸುವಾಗ ಗ್ರಾಮಸಭೆಗಳು ಸಲಹೆ ಮಾಡಿದ ಕಾರ್ಯಕ್ರಮಗಳಿಗೆ ಆದ್ಯತೆ ನೀಡಬೇಕು.

ಜಿಲ್ಲಾ ಪಂಚಾಯತಿ ಅಧ್ಯಕ್ಷರೇ ಜಿಲ್ಲಾ ಯೋಜನಾ ಸಮಿತಿಯ ಅಧ್ಯಕ್ಷರಾಗಿರಬೇಕು, ನಗರ ಪಾಲಿಕೆ ಮಹಾಪೌರರು ಅಥವಾ ಜಿಲ್ಲಾ ಮುಖ್ಯ ಕೇಂದ್ರದ ಪುರಸಭಾ ಅಧ್ಯಕ್ಷರು, ಉಪಾಧ್ಯಕ್ಷರು ಆಗಿರುತ್ತಾರೆ.

ಜಿಲ್ಲಾ ಯೋಜನಾ ಸಮಿತಿಯು ತಯಾರಿಸಿದ ಅಭಿವೃದ್ಧಿ ಯೋಜನೆಯು ನಗರ ಪಂಚಾಯಿತಿಗಳು/ಪುರಸಭೆಗಳು ರೂಪಿಸಿದ ಯೋಜನೆಗಳನ್ನು ಬದಲಿಸಬಾರದು.

**ಜಿಲ್ಲಾ ಯೋಜನಾ ಸಮಿತಿಯ ಕಾರ್ಯಗಳು (ಸಂವಿಧಾನದ ವಿಧಿ ೨೪೩೨(೧))**

೧. ಜಿಲ್ಲೆಯ ಪಂಚಾಯಿತಿಗಳು ಮತ್ತು ನಗರ ಪಂಚಾಯಿತಿಗಳು ತಯಾರಿಸುವ ಯೋಜನೆಗಳನ್ನು ಕ್ರೂಢೀಕರಿಸುವುದು.

೨. ಇಡೀ ಜಿಲ್ಲೆಯ ಕರಡು ಅಭಿವೃದ್ಧಿ ಯೋಜನೆಯನ್ನು ತಯಾರಿಸುವುದು. ಜೊತೆಗೆ ೧೨/೪ಯ ೨೦೦೧ರ ಸೂತ್ತೋಲೆ ಪ್ರಕಾರ.

ಜಿಲ್ಲಾ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವುದು.

ಯೋಜನಾ ಕಾರ್ಯಕ್ರಮಗಳು ಅನುಷ್ಠಾನ ಮತ್ತು

ಯೋಜನಾ ವಿಷಯಗಳಿಗೆ ಸಂಬಂಧಿಸಿದಂತೆ ಗ್ರಾಮೀಣ ಹಾಗೂ ನಗರ ಸಂಸ್ಥೆಗಳ ನಡುವೆ ಸಹಯೋಗ ಸಾಧಿಸುವುದು.

ಸೃಜನಶೀಲ ಅಭಿವೃದ್ಧಿ ತಂತ್ರಗಳನ್ನು ರೂಪಿಸುವುದು.

ಅಧ್ಯಯನಗಳನ್ನು ಪ್ರಾಯೋಜಿಸುವುದು.

ಪಾರದರ್ಶಕ ನಿಯಮಗಳನ್ನು ಪಾಲಿಸುವುದು.

೩. ಪ್ರತಿಯೊಂದು ಜಿಲ್ಲಾ ಯೋಜನಾ ಸಮಿತಿಯು ಅಭಿವೃದ್ಧಿ ಯೋಜನಾ ಕರಡನ್ನು ತಯಾರಿಸುವಲ್ಲಿ ಪ್ರಾದೇಶಿಕ ಯೋಜನೆ, ನೀರಿನ ಹಂಚಿಕೆ ಮತ್ತು ಇತರೆ ಭೌತಿಕ ಮತ್ತು ಪ್ರಾಕೃತಿಕ ಸಂಪನ್ಮೂಲಗಳ ಹಂಚಿಕೆ, ಮೂಲ ಪರಿಕರಗಳ ಸಮಗ್ರ ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆ, ಇವುಗಳನ್ನು ಒಳಗೊಂಡಂತೆ ಜಿಲ್ಲಾ ಪಂಚಾಯಿತಿಗಳು, ತಾಲೂಕು ಪಂಚಾಯಿತಿಗಳು, ಗ್ರಾಮ ಪಂಚಾಯಿತಿಗಳು (ಪಟ್ಟಣ ಪಂಚಾಯಿತಿಗಳು) ಜಿಲ್ಲೆಯಲ್ಲಿರುವ ಪೌರಸಭಾ, ನಿಗಮಗಳು ಮತ್ತು ಪೌರಸಭಾ ನಿಗಮಗಳು ಪರಿಷತ್ತುಗಳ ನಡುವಣ ಸಮಾನ ಹಿತಾಸಕ್ತಿಯ ವಿಷಯಗಳನ್ನು ಲಭ್ಯವುವಿರುವ ಹಣಕಾಸು ಸಂಪನ್ಮೂಲ(ಇತರೆ ಸಂಪನ್ಮೂಲಗಳ ವ್ಯಾಪ್ತಿ ಮತ್ತು ಸ್ವರೂಪಗಳ ಬಗ್ಗೆ ಗಮನ ಹರಿಸತಕ್ಕದು.

ರಾಜ್ಯಪಾಲರು, ಆದೇಶದ ಮೂಲಕ ನಿರ್ದಿಷ್ಟ ಪಡಿಸಬಹುದಾದಂತ ಸಂಘ ಸಂಸ್ಥೆಗಳ ಸಲಹೆ ತೆಗೆದುಕೊಳ್ಳುವುದು. ಪ್ರತಿಯೊಂದು ಜಿಲ್ಲಾ ಯೋಜನಾ ಸಮಿತಿಯ ಅಧ್ಯಕ್ಷರುಗಳು ಅಂಥ ಸಮಿತಿಯಿಂದ ಶಿಫಾರಸ್ಸು ಮಾಡಿದಂತೆ ಅಭಿವೃದ್ಧಿ ಯೋಜನೆಯನ್ನು (ರಾಜ್ಯ ಯೋಜನೆಯಲ್ಲಿ ಸೇರಿಸುವ ಸಲುವಾಗಿ) ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**ಡಾ॥ ಕೆ.ಚಂದ್ರಶೇಖರ್‌ರವರ ಪುಸ್ತಕವಾದ "ಅಭಿವೃದ್ಧಿ ಪಥದಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು"** (೨೦೦೯) ದಲ್ಲಿ ಜಿಲ್ಲಾ ಯೋಜನಾ ಸಮಿತಿಯ ಮುಖ್ಯವಾಗಿ ಉದ್ಧೇಶಿಸಿ-ಸ್ಥಳೀಯ ಸಂಸ್ಥೆಗಳ ಸಹಭಾಗಿತ್ವದೊಂದಿಗೆ ಯೋಜಿತ ಅಭಿವೃದ್ಧಿಯನ್ನು ಸ್ಥಾಪಿಸುವುದು.

ಪ್ರತಿಯೊಂದು ಗ್ರಾಮ ಪಂಚಾಯಿತಿ ಹಾಗೂ ನಗರ ಸ್ಥಳೀಯ ಸಂಸ್ಥೆಯನ್ನು ಜಿಲ್ಲಾ ಯೋಜನೆಯ ಕೇಂದ್ರ ಬಿಂದುವಾಗಿ ಪರಿಗಣಿಸಬೇಕು'. ಪ್ರತಿಯೊಂದು ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಯೇ ಜಿಲ್ಲಾ ಯೋಜನೆಯ ಗುರಿಯಾಗಬೇಕು

ಸ್ಥಳೀಯ ಆರ್ಥಿಕ ಸಂಪೂನ್ಮೂಲಗಳನ್ನು ಗಣನೆಗೆ ತೆಗೆದುಕೊಂಡು ಮಾನವ ಸಂಪನ್ಮೂಲವನ್ನು ಜೊತೆಗೂಡಿಸಿ, ಸ್ಥಳೀಯ ಸಮಸ್ಯೆಗಳಿಗೆ ಸ್ಪಂಧಿಸುವ ರೀತಿಯಲ್ಲಿ ಯೋಜನೆಯನ್ನು ಸಿದ್ಧಪಡಿಸಿ ಸ್ಥಳೀಯ ಸರ್ಕಾರಗಳ ಮೂಲಕ ಪರಿಹಾರ ಕಂಡುಕೊಳ್ಳವುದೇ ಜಿಲ್ಲಾ ಸಮಿತಿಯ ಯೋಜನೆಯ ಗುರಿಯಾಗಿದೆ.

**ನ್ಯೂನತೆಗಳು**

ಪರಿಣಾಮಕಾರಿಯಾಗಿ ಮತ್ತು ದಕ್ಷಯುತವಾಗಿ ಕಾರ್ಯ ನಿರ್ವಹಿಸುವಲ್ಲಿ ಇದರ ಅಧಿಕಾರ ಮತ್ತು ಕಾರ್ಯಗಳು ಬಗ್ಗೆ ನಿರ್ದಿಷ್ಟಪಡಿಸಿದ ವಿಷಯಗಳನ್ನು ವಿಷಧೀಕರಿಸಬೇಕು. ಸರ್ಕಾರದ ವಿವಿಧ ಇಲಾಖೆಗಳು, ವಿವಿಧ ಕಾರ್ಯಕ್ರಮಗಳು, ಯೋಜನೆಗಳು ಮತ್ತು ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಪ್ರತ್ಯೇಕವಾದ ಯೋಜನೆಗಳನ್ನು ಸಿದ್ಧಪಡಿಸಿ ಜಾರಿಗೆ ತರುವುದು. ಜಿಲ್ಲಾ ಯೋಜನಾ ಸಮಿತಿ ರಚಿಸಲು ಹಾಗೂ ಸಭೆಸೇರಲು ನಗರ/ಗ್ರಾಮೀಣ ಸ್ಥಳೀಯ ಸರ್ಕಾರಗಳು ಏಕಕಾಲದಲ್ಲಿ ರಚನೆಗೊಂಡಿರಬೇಕು. ಆದರೆ ಕೆಲವೊಂದು ಸಂದರ್ಭದಲ್ಲಿ ನಗರ ಮತ್ತು ಗ್ರಾಮೀಣ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆಗಳು ಬೇರೆ-ಬೇರೆ ಕಾಲದಲ್ಲಿ ನಡೆಯುತ್ತಿರುವುದರಿಂದ, ಏಕಕಾಲದಲ್ಲಿ ಜಿಲ್ಲಾ ಯೋಜನಾ ಸಮಿತಿ ರಚನೆಯಾಗಲು ಆಡಚಣೆಯಾಗಿದೆ. ಈ ಸಮಿತಿಯಲ್ಲಿ ತಾಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿ, ಸದಸ್ಯರುಗಳಿಗೆ ಪ್ರಾತಿನಿಧ್ಯವಿರುವುದಿಲ್ಲ. ನಗರ ಯೋಜನೆಗೆ ಸಂಬಂಧಿಸಿದಂತೆ ಪ್ರತ್ಯೇಕ ನಗರ ಘಟಕ ಪ್ರಾರಂಭವಾಗಿದೆ. ಆದರೆ ವಾಸ್ತವಿಕವಾಗಿ ಅದು ಕ್ರಿಯಾಶೀಲವಾಗಿ ಕೆಲಸಮಾಡುತ್ತಿಲ್ಲ. ಜನ ಪ್ರತಿನಿಧಿ/ಅಧಿಕಾರಿಗಳು ಆಸಕ್ತಿ, ಪ್ರೋತ್ಸಾಹ ನೀಡುತ್ತಿಲ್ಲ, ಯೋಜನೆಗಳ ಮೌಲ್ಯಮಾಪನ ಮತ್ತು ವಿಶೇಷ ಅಧ್ಯಾಯನಗಳು ಬಗ್ಗೆ ಸೂಕ್ತ ಅರಿವು/ಜ್ಞಾನದ ಕೊರತೆ ಇರುವುದು ಕಂಡುಬಂದಿದೆ.

**ಸಲಹೆಗಳು**

ಸ್ಥಳೀಯ ಸಂಸ್ಥೆಗಳನ್ನು ತಮ್ಮ ಕಾರ್ಯಕ್ರಮಗಳನ್ನು ನಿರ್ದಿಷ್ಟ ಕಾಲದಲ್ಲಿ ನಿಯಮಾನುಸಾರವಾಗಿ ಅನುಷ್ಠಾನಗೊಳ್ಳುವಂತೆ ಯೋಜನೆಗಳನ್ನು ಸಿದ್ಧಪಡಿಸಲು ಕ್ರಮವಹಿಸುವುದು.

ಇವು ಕ್ರಿಯಾಶೀಲವಾಗಿ ಕಾರ್ಯ ನಿರ್ವಹಿಸುವಂತೆ ಮಾಡಬೇಕು.

ಯೋಜನೆಯನ್ನು ರೂಪಿಸುವುದು ಮಾತ್ರವಲ್ಲದೆ ಯೋಜನೆಯ ಅನುಷ್ಠಾನ ಮತ್ತು ಪ್ರಗತಿ ಕುರಿತು ಪರಿಶೀಲಿಸುವ/ವಿಮರ್ಶಿಸುವ ಅಧಿಕಾರ ಹೊಂದಿರಬೇಕು.

ರಾಜ್ಯ ಯೋಜನಾ ಮಂಡಳಿಗಳು ತಾವು ಸಿದ್ಧಪಡಿಸಿದ ಯೋಜನೆಗಳಿಗೆ ಜಿಲ್ಲಾ ಯೋಜನೆಗಳನ್ನು ಸಮನ್ವಯಗೊಳಿಸುವ ಕುರಿತು ಖಚಿತಪಡಿಸಿಕೊಳ್ಳಬೇಕು.

ಕೆಳಹಂತದಲ್ಲಿ ಯೋಜನೆಗಳನ್ನು ಸಿದ್ಧಪಡಿಸಿದ ನಂತರವೇ ರಾಜ್ಯ ಸರ್ಕಾರವು ತನ್ನ ಯೋಜನೆಗಳನ್ನು ಸಿದ್ದಪಡಿಸುವುದು ಸೂಕ್ತ.

ಸ್ಥಳೀಯ ಆಧ್ಯತಾ ಪಟ್ಟಿಗಳನ್ನು ವೈಜ್ಞಾನಿಕವಾಗಿ ಸಿದ್ದಪಡಿಸಿ ತಾಂತ್ರಿಕತೆಗೊಳಿಸುವುದು.

ಜಿಲ್ಲಾ ಯೋಜನಾ ಸಮಿತಿಯ ಸಭಾ ಕಲಾಪದ ನಿಯಮಗಳು ಪ್ರಸ್ತಾವನೆಯನ್ನು ಯೋಜನಾ ಇಲಾಖೆಯು ಸಿದ್ಧಪಡಿಸಿ, ರಾಜ್ಯ ಯೋಜನಾ ಆಯೋಗಕ್ಕೆ ಕಳುಹಿಸಬೇಕು ನಂತರ ಅನುಮೋದನೆ ಪಡೆಯಬೇಕು.

ಕೇರಳ ರಾಜ್ಯದಲ್ಲಿ ಜಾರಿಯಲ್ಲಿರುವ ಜಿಲ್ಲಾ ಯೋಜನಾ ಸಮಿತಿಯನ್ನು ಮಾದರಿಯನ್ನಾಗಿ ಅನುಸರಿಸಬೇಕು.

ಸ್ಥಳೀಯ ಸಂಸ್ಥೆಗಳ ಸಂಗ್ರಹಣೆಯಲ್ಲಿ ಸಂಪನ್ಮೂಲಗಳನ್ನು ಸಮರ್ಥವಾಗಿ ಸ್ಥಳೀಯ ಜನರ ಹಿತಾಸಕ್ತಿಯ ಅನುಸಾರವಾಗಿ ಸದುಪಯೋಗ ಪಡಿಸಿಕೊಳ್ಳಬೇಕು.

ಹೀಗೆ ಅವರು ಜಿಲ್ಲಾ ಯೋಜನಾ ಸಮಿತಿಯ ದೋಷಗಳು ಮತ್ತು ಅವುಗಳಿಗೆ ಸಂಬಂಧಿಸಿದಂತೆ ಸಲಹೆಗಳನ್ನು ನೀಡಿದ್ದಾರೆ.

**ಕಾರ್ಯಗಳು (Functions):**

ಕರ್ನಾಟಕ ಸರ್ಕಾರ ದಿನಾಂಕ: ೧೨-೦೪-೨೦೦೧ರಲ್ಲಿ ಹೊರಡಿಸಿದ ಸುತ್ತೋಲೆಯ ಪ್ರಕಾರ ಜಿಲ್ಲಾ ಯೋಜನಾ ಸಮಿತಿಯ ಕಾರ್ಯಗಳು ಹೀಗಿವೆ:

ಜಿಲ್ಲಾ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವುದು.

ಯೋಜನಾ ಕಾರ್ಯಕ್ರಮಗಳ ಅನುಷ್ಠಾನದ ಮೌಲ್ಯಮಾಪನ ಮಾಡುವುದು.

ಯೋಜನೆ ಮತ್ತು ಇತರೆ ವಿಷಯಗಳಿಗೆ ಸಂಬಂಧಿಸಿದಂತೆ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳ ನಡುವೆ ಸಹಯೋಗ ಸಾಧಿಸುವುದು.

ಸೃಜನಶೀಲ ಅಭಿವೃದ್ಧಿ ತಂತ್ರಗಳನ್ನು ಘೋಷಿಸುವುದು.

ಅಧ್ಯಯನಗಳನ್ನು ಪ್ರಾಯೋಜಿಸುವುದು.

**ಮಿತಿಗಳು (Limitations):**

ಅತ್ಯಂತ ದುರದೃಷ್ಟದ ಸಂಗತಿಯೆಂದರೆ ಜಿಲ್ಲಾ ಯೋಜನಾ ಸಮಿತಿಗಳು ಕೇವಲ ಹೆಸರಿಗೆ ಮಾತ್ರ ಇದ್ದಂತೆ ಕಾಣುತ್ತವೆ. ಅವು ಕ್ರಿಯಾಶೀಲವಾಗಿಲ್ಲ. ಜಿಲ್ಲಾ ಯೋಜನಾ ಸಮಿತಿಗಳು ಕ್ರಿಯಾಶೀಲವಾಗುವ ದಾರಿಯಲ್ಲಿ ಅನೇಕ ಅಡಚಣೆಗಳಿವೆ.

೧. ಮೊದಲನೆಯದಾಗಿ, ಜಿಲ್ಲಾ ಮಟ್ಟದಲ್ಲಿ ಸಂಪನ್ಮೂಲಗಳ ತೀವ್ರ ಅಭಾವದಿಂದಾಗಿ ಅಭಿವೃದ್ಧಿ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು ಸಾಧ್ಯವಾಗುವುದಿಲ್ಲ, ಜಿಲ್ಲಾ ಯೋಜನಾ ಅಧಿಕಾರಿಗಳು ಹಣಕಾಸಿನ ಸಂಪನ್ಮೂಲಗಳಿಗಾಗಿ ರಾಜ್ಯ ಸರ್ಕಾರವನ್ನು ಹೆಚ್ಚು ಅವಲಂಭಿಸಬೇಕಾಗುತ್ತದೆ. ಈ ರೀತಿಯ ಅತಿಯಾದ ಅವಲಂಬನೆಯು ಜಿಲ್ಲಾ ಯೋಜನೆಯ ದಕ್ಷ ಹಾಗೂ ಪರಿಣಾಮಕತೆಗೆ ಮಾರಕವಾಗುವುದು. ಹೀಗೆ ಕೆಳಸ್ತರದ ಸರ್ಕಾರಗಳು ಅತ್ಯಂತ ಅವಲಂಬಿತ ಸ್ಥಿತಿಯಲ್ಲಿರುವುದು ಅವು ಕ್ರಿಯಾಶೀಲವಾಗುವುದು ಸಾಧ್ಯವಿಲ್ಲ.

೨. ಎರಡನೆಯದಾಗಿ, ಯೋಜನೆಗೆ ಸಂಬಂಧಿಸಿದಂತೆ ಜಿಲ್ಲಾ ಮಟ್ಟದ ಯೋಜನೆ ರೂಪಿಸುವವರಿಗೆ ಸಾಕಷ್ಟು ತಜ್ಞತೆ ಹಾಗೂ ತರಬೇತಿ ಇರುವುದಿಲ್ಲ. ಜಿಲ್ಲಾ ಯೋಜನಾ ಸಮಿತಿಗಳ ತಜ್ಞ ಸದಸ್ಯರ ಕೊರತೆಯಿಂದಾಗಿ ಪರಿಣಾಮಕಾರಿಯಾದ ಯೋಜನೆಗಳನ್ನು ರೂಪಿಸುವುದು ಸಾಧ್ಯವಾಗಲಾರದು.

೩. ಮೂರನೆಯದಾಗಿ, ಜಿಲ್ಲಾ ಮಟ್ಟದ ವಿವಿಧ ಅಧಿಕಾರಿಗಳ ಹಾಗೂ ಇಲಾಖೆಗಳ ನಡುವೆ ಸಮನ್ವಯ ಹಾಗೂ ಸಾಮರಸ್ಯದ ಕೊರತೆಯಿಂದಾಗಿ ಜಿಲ್ಲಾ ಯೋಜನಾ ಸಮಿತಿಗಳು ಪರಿಣಾಮಕಾರಿಯಾದ ಯೋಜನೆಗಳನ್ನು ರೂಪಿಸುವಲ್ಲಿ ವಿಫಲವಾಗಿವೆ. ಜಿಲ್ಲಾ ಯೋಜನಾ ಸಮಿತಿಗಳು ಇಂದು ನಿಷ್ಕ್ರೀಯವಾಗಿದ್ದರೆ ಅದಕ್ಕೆ ಇಲಾಖೆಗಳ ನಡುವಣ ಸಹಯೋಗ ಇಲ್ಲದಿರುವುದು ಮುಖ್ಯ ಕಾರಣವಾಗಿದೆ.

೪. ಐದನೆಯದಾಗಿ, ಕೇಂದ್ರೀಕೃತ ನೌಕರಶಾಹಿಯ ಜಿಲ್ಲಾ ಯೋಜನೆಗೆ ತೊಡಕಾಗಿದೆ, ನೌಕರಶಾಹಿಯು ಸಾಮಾನ್ಯವಾಗಿ ಕೆಳ ಮಟ್ಟದ ಯೋಜನೆಗೆ ಪ್ರೋತ್ಸಾಹಿಸುವುದಿಲ್ಲ, ಸ್ಥಳೀಯ ಯೋಜನೆಯ ಪರಿಣಾಮಕಾರಿಯಾದ ನಿರೂಪಣೆಯ ಪ್ರಕ್ರಿಯೆಯಲ್ಲಿ ನೌಕರಶಾಹಿಯ ವಿವಿಧ ಅಧಿಕಾರಿಗಳನ್ನು ಹಾಗೂ ಜನತೆಯೊಡನೆ ಚರ್ಚೆ ಮತ್ತು ಸಮಾಲೋಚನೆಗೆ ಉತ್ತೇಜಿಸುವುದಿಲ್ಲ, ಹೀಗೆ ನೌಕರಶಾಹಿಯ ಉದಾಸೀನತೆ ಜಿಲ್ಲಾ ಯೋಜನಾ ಕಮಿಟಿಗಳ ಕ್ರಿಯಾಶೀಲತೆಗೆ ಅಡಚಣೆಯಾಗಿದೆ.

೫. ಕೊನೆಯದಾಗಿ ಜಿಲ್ಲಾ ಯೋಜನಾ ಸಮಿತಿಗಳು ತಮ್ಮ ಕಾರ್ಯನಿರ್ವಹಣೆಯಲ್ಲಿ ಸ್ವಾಯತ್ತತೆ ಹೊಂದಿರುವುದಿಲ್ಲ, ಅವುಗಳು ರಾಜ್ಯ ಸರ್ಕಾರದಿಂದ ಆದೇಶ ಹಾಗೂ ಸಲಹೆಗಳನ್ನು ಪಡೆದು ಕಾರ್ಯನಿರ್ವಹಿಸಬೇಕಾಗಿದೆ.

ಈ ಎಲ್ಲಾ ಕಾರಣಗಳಿಂದ ತಳಮಟ್ಟದ ಸಂಸ್ಥೆಗಳಾದ ಪಂಚಾಯಿತಿಗಳು, ಪುರಸಭೆಗಳು, ಜಿಲ್ಲಾ ಯೋಜನಾ ಸಮಿತಿಗಳು ಸ್ವಯಂ ಆಡಳಿತ ಸಂಸ್ಥೆಗಳಾಗಿ ಕೆಲಸ ಮಾಡಲು ಸಾಧ್ಯವಾಗುತ್ತಿಲ್ಲ. ಸಂವಿಧಾನದ ಮನ್ನಣೆ ಇವುಗಳಿಗೆ ದೊರತಿದೆ. ಆದರೆ ಆಚರಣೆಯಲ್ಲಿ

ಯೋಜನಾ ಆಯೋಗ ಮತ್ತು ಯೋಜನಾ ಮಂಡಳಿಗಳು ಅಭಿವೃದ್ಧಿ ಯೋಜನೆಗಳನ್ನು ರೂಪಿಸುವ ಕೆಲಸವನ್ನು ಮುಂದುವರಿಸಿವೆ.

ಹಣಕಾಸು ಸಂಪನ್ಮೂಲದ ದೃಷ್ಟಿಯಿಂದ ಯೋಜನಾ ಆಯೋಗ ಮತ್ತು ಯೋಜನಾ ಮಂಡಳಿಗಳು ಸಮೃದ್ಧವಾಗಿದ್ದರೆ, ಜಿಲ್ಲಾ ಮಟ್ಟದ ಯೋಜನಾ ಸಮಿತಿಗಳು ತೀವ್ರ ಕೊರತೆಯಿಂದ ನರಳುತ್ತಿವೆ. ಮೇಲ್ಮಟ್ಟದಲ್ಲಿ ಉನ್ನತವಾದ ತಜ್ಞರು ಮತ್ತು ಅವರ ಸೇವೆ ದೊರೆ ದೊರೆಯುತ್ತದೆ. ಆದರೆ ಕೆಳಮಟ್ಟದಲ್ಲಿ ಅಗತ್ಯವಾದ ಕುಶಲತೆ ದೊರೆಯುವುದು ದುರ್ಬಲ.

ಆದುದರಿಂದ ಜಿಲ್ಲಾ ಯೋಜನೆಯು ಹೆಚ್ಚು ಪರಿಣಾಮಕಾರಿಯಾಗಲು, ಜಿಲ್ಲಾ ಯೋಜನೆ ಸಾಕಷ್ಟು ಸಂಪನ್ಮೂಲಗಳನ್ನು ಒದಗಿಸಬೇಕು. ಪ್ರತಿಯೊಂದು ಜಿಲ್ಲೆಯಲ್ಲಿ ಯೋಜನಾ ಸಮಿತಿಯನ್ನು ಸ್ಥಾಪಿಸಬೇಕು ಮತ್ತು ಆ ಸಮಿತಿಗೆ ತಜ್ಞರನ್ನು ನೇಮಿಸಬೇಕು. ಜಿಲ್ಲಾ ಮಟ್ಟದ ಎಲ್ಲಾ ಇಲಾಖೆಗಳ ಮಧ್ಯೆ ಸಮನ್ವಯವನ್ನುಂಟು ಮಾಡಬೇಕು. ಜಿಲ್ಲಾ ಯೋಜನಾ ಸಮಿತಿಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಅವುಗಳಿಗೆ ಸಾಕಷ್ಟು ಸ್ವಾಯತ್ತತೆ ನೀಡಬೇಕು. ಜಿಲ್ಲಾ ಯೋಜನಾ ಸಮಿತಿಗಳ ನೌಕರಶಾಹಿಯ ಬೆಂಬಲ ಹಾಗೂ ಪ್ರೋತ್ಸಾಹವಿರಬೇಕು. ಕೊನೆಯದಾಗಿ ಜಿಲ್ಲಾ ಯೋಜನಾ ಪ್ರಕ್ರಿಯೆಯಲ್ಲಿ ಜನತೆಯ ನೈಜ ಹಾಗೂ ಸಕ್ರಿಯ ಸಹಭಾಗಿತ್ವವಿರಬೇಕು ಮತ್ತು ಯೋಜನೆಗಳಿಗೆ ಸಕಾಲದಲ್ಲಿ ಅನುದಾನ ಬಿಡುಗಡೆಯಾಗಬೇಕು ಈ ನಿಟ್ಟಿನಲ್ಲಿಯೇ ರಾಜ್ಯ ಹಣಕಾಸು ಆಯೋಗವು ಕಾರ್ಯನಿರ್ವಹಿಸುತ್ತಿದೆ,

**೬.೨. ರಾಜ್ಯ ಹಣಕಾಸು ಆಯೋಗದ ರಚನೆ ಮತ್ತು ಅಧಿಕಾರಗಳು**

**ಹಣಕಾಸು ಆಯೋಗದ ರಚನೆ [ಸಂವಿಧಾನದ ಕಲಂ-೨೪೩-೧-ಪ್ರಕಾರ]**

ಸಂವಿಧಾನದ ೭೩ನೇ ತಿದ್ದುಪಡಿಯನ್ವಯ ೧೯೯೨ರಲ್ಲಿ ಪಂಚಾಯಿತಿ ರಾಜ್ಯ ವ್ಯವಸ್ಥೆ ಆರಂಭವಾದ ದಿನಾಂಕದಿಂದ ಒಂದು ವರ್ಷದೊಳಗೆ ಮತ್ತು ಆನಂತರ ಪ್ರತಿ ೫ನೇ ವರ್ಷ ಮುಕ್ತಾಯವಾದಾಗ ಸಾಧ್ಯವಾದಷ್ಟು ಶೀಘ್ರವಾಗಿ ಪಂಚಾಯಿತಿಗಳ ಹಣಕಾಸು ಪರಿಸ್ಥಿತಿಗಳನ್ನು ಪರಿಶೀಲಿಸಲು ಹಣಕಾಸು ಆಯೋಗದ ರಚನೆ-ಇದು ರಾಜ್ಯಪಾಲರಿಗೆ ಶಿಫಾರಸ್ಸುಗಳನ್ನು ಮಾಡಬಹುದು.

೧. ರಾಜ್ಯದ ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯತಿ, ಗ್ರಾಮ ಪಂಚಾಯಿತಿ ನಡುವೆ ವಿತರಣೆಯನ್ನು ಸರ್ಕಾರವು ವಿಧಿಸಬಹುದಾದ ಹಾಗೂ ತಮ್ಮಲ್ಲಿ ವಿಭಾಗಿಸಬಹುದಾದ ಶುಲ್ಕ ಪೀಜು ದಂಡ ಮತ್ತು ಉತ್ಪತ್ತಿಯನ್ನು ಸ್ಥಳೀಯ ಸರ್ಕಾರ ಸಂಸ್ಥೆಗಳಿಗೆ ಹಂಚಿಕೆಯ ಪಾಲನ್ನು ಶಿಫಾರಸ್ಸು ಮಾಡಲು

೨. ಜಿಲ್ಲಾ ಪಂಚಾಯತಿ, ತಾಲೂಕು ಪಂಚಾಯತಿ, ಗ್ರಾಮ ಪಂಚಾಯಿತಿ ವಹಿಸಿಕೊಡಬಹುದಾದ/ ವಿನಿಯೋಗಿಸಬಹುದಾದ ತೆರಿಗೆ ಸುಂಕಗಳ ನಿರ್ಧರಿಸಲು.

೩. ಸಂಚಿತ ನಿಧಿಯಿಂದ ಜಿಲ್ಲಾ ಪಂಚಾಯತ್ ತಾಲ್ಲೂಕು ಪಂಚಾಯತ್ ಗ್ರಾಮ ಪಂಚಾಯತ್ ನೀಡುವ ಸಹಾಯಧನವನ್ನು ನಿರ್ಧರಿಸಲು.

೪. ಜಿಲ್ಲಾ ಪಂಚಾಯಿತಿ, ತಾಲೂಕು, ಪಂಚಾಯಿತಿ, ಗ್ರಾಮ ಪಂಚಾಯಿತಿ, ಹಣಕಾಸು ಪರಿಸ್ಥಿತಿಗಳನ್ನು ಸುಧಾರಿಸಲು ಅವಶ್ಯಕವಾದ ಕ್ರಮಗಳನ್ನು ನಿರ್ಧರಿಸಲು ಹಣಕಾಸು ಆಯೋಗವನ್ನು ರಚಿಸಬೇಕು.

ಕರ್ನಾಟಕದಲ್ಲಿ ಪಂಚಾಯತ್ ರಾಜ್ ಅಸ್ತಿತ್ವಕ್ಕೆ ಬಂದ ಮೇಲೆ ಪ್ರಥಮ ಬಾರಿಗೆ ರಾಜ್ಯ ಸರ್ಕಾರವು ಆರ್ಥಿಕ ತಜ್ಞ ಡಾ॥ ಜೆ.ತಿಮ್ಮಯ್ಯನವರ ಅಧ್ಯಕ್ಷತೆಯಲ್ಲಿ ೧೯೯೪ರಲ್ಲಿ ರಾಜ್ಯ ಹಣಕಾಸು ಆಯೋಗ್ಯವನ್ನು ನೇಮಿಸಿತು. ಈ ಆಯೋಗವು ೧೯೯೬ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ಅದರ ಹಲವಾರು ಶಿಫಾರಸ್ಸುಗಳು ಅಂಗೀಕಾರವಾಗಿವೆ. ರಾಜ್ಯ ಸರ್ಕಾರದ ಆದಾಯವನ್ನು ಗಣನೆಗೆ ತೆಗೆದುಕೊಂಡು ಆಯೋಗವು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಂದಾಯವಾಗಬಹುದಾದ ಆರ್ಥಿಕ ಸಂಪನ್ಮೂಲಗಳ ಬಗ್ಗೆ ಶಿಫಾರಸ್ಸು ಮಾಡಿತ್ತು.

ಈ ಆಯೋಗ ಪಂಚಾಯತ್ ರಾಜ್ ಸಂಸ್ಥೆಗಳಿಗೆ ರಾಜ್ಯದ ಆದಾಯದ ಶೇ. ೩೬ ರಷ್ಟನ್ನು ಪಂಚಾಯಿತಿ ರಾಜ್ ಸಂಸ್ಥೆಗಳಿಗೆ (ಗ್ರಾಮೀಣ ಮತ್ತು ನಗರ) ವರ್ಗಾಯಿಸುವಂತೆ ಶಿಫಾರಸ್ಸು ಮಾಡಿತು. ಈ ಶೇ ೩೬%ರಲ್ಲಿ ಗ್ರಾಮೀಣ ಪಂಚಾಯಿತ್ ರಾಜ್ ಸಂಸ್ಥೆಗಳಿಗೆ ೮೫% ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ಶೇ ೧೫%ರಷ್ಟು ಯೋಜಿತ ರೀತಿಯಲ್ಲಿ ಹಂಚಬೇಕೆಂದು ಶಿಫಾರಸ್ಸು ಮಾಡಿತ್ತು ಸರ್ಕಾರ ಇದನ್ನು ಅಂಗೀಕರಿಸಿತು.

**ಈ ಹಣಕಾಸು ಆಯೋಗದ ಸದಸ್ಯರು**

ಹಣಕಾಸು ಆಯೋಗ ಒಬ್ಬರು ಅಧ್ಯಕ್ಷರು, ಇಬ್ಬರು ಸದಸ್ಯರನ್ನು ಹೊಂದಿರುತ್ತದೆ.

ಇವರನ್ನು ಸರ್ಕಾರ ನೇಮಿಸುತ್ತದೆ.

ಸರ್ಕಾರ ನಿಗದಿಪಡಿಸುವ ಅರ್ಹತೆಗಳನ್ನು ಹೊಂದಿರಬೇಕು

ಇವರು ರಾಜೀನಾಮ ನೀಡಬೇಕಾದರೆ, ಸರ್ಕಾರದ ಹಣಕಾಸು ಇಲಾಖೆಯ ಕಾರ್ಯದರ್ಶಿಯವರಿಗೆ ರಾಜೀನಾಮೆ ನೀಡಬಹುದು (ಅಧ್ಯಕ್ಷರು, ಸದಸ್ಯರು)

೨೬೭(೬) ೧ ಪ್ರಕರಣ ಪ್ರಕಾರ ಅಧ್ಯಕ್ಷರ ಮತ್ತು ಸದಸ್ಯರ ರಾಜೀನಾಮ ನೀಡಿದ ಮೇಲೆ ಹುದ್ದೆಗೆ ಹೊಸದಾಗಿ ಮತ್ತೆ ನೇಮಕ ಮಾಡುವ ಮೂಲಕ ಭರ್ತಿಮಾಡಬಹುದು. ಹಾಗೆ ನೇಮಕ ಆದವರು ಉಳಿದ ಅವಧಿಗೆ ಮಾತ್ರ ಹುದ್ದೆಯಲ್ಲಿ ಮುಂದುವರೆಯುತ್ತಾರೆ.

**ಆಯೋಗದ ಅಧಿಕಾರ**

ಯಾವುದೇ ಪ್ರಾಧಿಕಾರದಿಂದ ಅಥವಾ ವ್ಯಕ್ತಿಯಿಂದ ಯಾವುದೇ ದಾಖಲಾತಿಗಳನ್ನು ತರಿಸಿಕೊಂಡು ಪರಿಶೀಲಿಸುವುದು.

ದಾಖಲೆಗಳಿಗೆ ಪೂರಕವಾದ ವಿವರಗಳನ್ನು ನೀಡಲು ಸಂಬಂಧಪಟ್ಟ ಅಧಿಕಾರಿಗಳಿಗೆ ಒತ್ತಡ ತರುವುದು.

ಹಣಕಾಸು ಹಂಚಿಕೆಗೆ ಶಿಫಾರಸ್ಸು ಮಾಡುವುದು.

೨೬೭(೮) ಪ್ರಕರಣದ ಪ್ರಕಾರ ಹಣಕಾಸು ಆಯೋಗ ಮಾಡಿದ ಪ್ರತಿಯೊಂದು ಶಿಫಾರಸುಗಳ ಮೇಲೆ ರಾಜ್ಯಪಾಲರು ಕೈಗೊಂಡ ಕ್ರಮದ ಬಗೆಗಿನ ವಿವರಣೆಯನ್ನು ರಾಜ್ಯವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡಬೇಕು.

**೬.೩. ಗ್ರಾಮ ಪಂಚಾಯಿತಿಗಳ ಬಲವರ್ಧನೆಗೆ ಕ್ರಮಗಳು**

**ಹಣಕಾಸು ಆಯೋಗವು ಗ್ರಾಮ ಪಂಚಾಯಿತಿಗಳ ಬಲವರ್ಧನೆ ಕೆಲವೊಂದು ಕ್ರಮಗಳನ್ನು ಕೈಗೊಂಡಿತ್ತು.**

ಅನೇಕ ಗ್ರಾಮ ಪಂಚಾಯಿತಿಗಳ ಆಸ್ತಿ ತೆರಿಗೆಯನ್ನು ಅವೈಜ್ಞಾನಿಕವಾಗಿ ಮಾಡಿರುತ್ತವೆ. ಅಲ್ಲದೇ ಹಲವಾರು ವರ್ಷಗಳಿಂದ ತೆರಿಗೆಯನ್ನು ಪರಿಷ್ಕರಿಸಿರುವುದಿಲ್ಲ, ಇದನ್ನು ಸರಿಪಡಿಸಲು ದಿನಾಂಕ; ೨೪.೦೫.೨೦೦೩ ರಂದು ತೆರಿಗೆ ನಿರ್ಧರಿಸುವ ಬಗ್ಗೆ ಸರ್ಕಾರವು ಆದೇಶ ಹೊರಡಿಸಲಾಗಿದೆ. ಇದರನ್ವಯ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದೆ. ಪ್ರತಿಯೊಂದು ವರ್ಗದ ಕಟ್ಟಡಕ್ಕೆ ವಾರ್ಷಿಕ ಬಾಡಿಗೆ ಮೌಲ್ಯವನ್ನು ನಿರ್ಧರಿಸಿ ಇದರ ಆಧಾರದ ಮೇಲೆ ತೆರಿಗೆಯನ್ನು ಪರಿಷ್ಕರಿಸಲಾಗಿದೆ. ಈ ಯೋಜನೆಯಡಿ ಸಾರ್ವಜನಿಕರು ಸ್ವತಃ ಕರ ನಿರ್ಧರಿಸಲು ಅವಕಾಶ ಮಾಡಿಕೊಡಲಾಗಿದೆ. ೨೦೧೪-೧೫ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯ ೧೮೯ ಗ್ರಾಮ ಪಂಚಾಯಿತಿಗಳ ಪೈಕಿ (ಪಂಚ ತಂತ್ರ) ವರದಿ ಪ್ರಕಾರ) ಕೇವಲ ೧೧೧ ಗ್ರಾಮ ಪಂಚಾಯಿತಿಗಳು ಮಾತ್ರ ತೆರಿಗೆಯನ್ನು ಪರಿಷ್ಕರಿಸಿದ್ದು, ಉಳಿದ ಗ್ರಾಮ ಪಂಚಾಯಿತಿಗಳು ಕೂಡಲೇ ಕ್ರಮಕೈಗೊಳ್ಳ ಬೇಕಾಗಿರುತ್ತದೆ. ೨೦೧೩-೧೪ ಮತ್ತು ೨೦೧೪-೧೫ನೇ ಸಾಲುಗಳು ತೆರಿಗೆ ವಸುಲಾತಿ ವಿವರಗಳು ಕೆಳಗಿನಂತಿವೆ.

**ಕೋಷ್ಟಕ -೧ ಗ್ರಾಮ ಪಂಚಾಯಿತಿ ತೆರಿಗೆ ವಿವರ:-**

| ಕ್ರಸಂ | ವರ್ಷ | ಆರಂಭಿಕ ಶುಲ್ಕ | ತಗಾದೆ | ಒಟ್ಟು | ವಸೂಲಾತಿ | ಶೇಕಡವಾರು |
|---|---|---|---|---|---|---|
| ೧. | ೨೦೧೩-೧೪ | ೧೦೩೪.೧೩ | ೧೦೦೦.೯೪ | ೨೦೩೫.೦೮ | ೧೧೩೬.೪೪ | ೫೫.೮೪ |
| ೨. | ೨೦೧೪-೧೫ | ೯೭೨.೮೬ | ೧೦೩೪.೯೭ | ೨೦೦೬.೮೩ | ೯೯೮.೬೧ | ೫೦.೦೦ |

(ಮೂಲ : ಬಳ್ಳಾರಿ ಜಿಲ್ಲೆಯ ವಾರ್ಷಿಕ ಯೋಜನಾ ವರದಿ ೨೦೧೫-೧೬)

ಮತ್ತು ೧೨ನೇ ಹಾಗೂ ೧೩ನೇ ಹಣಕಾಸು ಆಯೋಗದ ೯ ಅನುದಾನವನ್ನು ಸದರಿ ಸೂಚ್ಯಾಂಕದ ಆಧಾರದ ಮೇಲೆ ಸರ್ಕಾರವು ಅನುದಾನ ನಿಗದಿಪಡಿಸಿ ಬಿಡುಗಡೆ ಮಾಡುತ್ತದೆ. ಅದೇ ರೀತಿ ಲಿಂಕ್ ಡಾಕ್ಯುಮೆಂಟ್‌ಲ್ಲಿ ಒದಗಿಸಿದ ಅನುದಾನದಲ್ಲಿ ಪ್ರತಿ ಯೋಜನೆಗೆ ನಿಗದಿಪಡಿಸಿದ ಅನುದಾನದಲ್ಲಿ ಓಂಟಿ ಅಂಟಟುಣಣಜಜ ಅನುದಾನವನ್ನು ಕೂಡಾ ಸದರಿ ಸೂಚ್ಯಾಂಕದ ಆಧಾರದ ಮೇಲೆ ತಾಲ್ಲೂಕುವಾರು ಅನುದಾನ ಹಂಚಿಕೆ ಮಾಡಲಾಗುತ್ತದೆ.

೨೦೧೫-೧೬ನೇ ವರ್ಷಕ್ಕೆ ರಾಜ್ಯ ವಲಯದಲ್ಲಿ ರೂ.೩೨೮೯೨.೪೬ ಲಕ್ಷ ಅನುದಾನವು ನಿಗಧಿಪಡಿಸಲಾಗಿರುತ್ತದೆ.

**ಕೋಷ್ಟಕ:-೨ ೨೦೧೫-೧೬ ಸಾಲಿನ ವಲಯ/ಪಂಚಾಯಿತಿವಾರು ಅನುದಾನ**

| **ಕ್ರಸಂ** | **ವಲಯ** | **ಯೋಜನೆಗಳು ಸಂಖ್ಯೆ** | **ಅನುದಾನ (ರೂ.ಲಕ್ಷಗಳಲ್ಲಿ)** | **ಶೇಕಡ** |
|---|---|---|---|---|
| ೧. | ರಾಜ್ಯ | ೧೧೫ | ೩೨೮೯೨.೪೬ | ೯೫.೪೦ |
| ೨. | ಕೇಂದ್ರ | *(೬+೪)=೧೦ | ೧೫೮೨.೫೪ | ೪.೬೦ |
| | **ಒಟ್ಟು** | **೧೨೫** | **೩೪೪೭೫.೦೦** | **೧೦೦.೦೦** |

* ಕೇಂದ್ರ + ಕೇಂದ್ರ ಪುರಸ್ಕೃತ (ಮೂಲ : ಬಳ್ಳಾರಿ ಜಿಲ್ಲೆಯ ವಾರ್ಷಿಕ ಯೋಜನಾ ವರದಿ ೨೦೧೫-೧೬)

**ಕೋಷ್ಟಕ:೩ ೨೦೧೫-೧೬ ಸಾಲಿನ ವಲಯ/ಪಂಚಾಯಿತಿವಾರು ಅನುದಾನ**

| **ಕ್ರಸಂ** | **ವಲಯ** | **ಯೋಜನೆಗಳು ಸಂಖ್ಯೆ** | **ಅನುದಾನ** | **ಶೇಕಡ** |
|---|---|---|---|---|
| ೧. | ಜಿಲ್ಲಾ ಪಂಚಾಯಿತಿ | ೮೯ | ೧೩೫೬೬.೧೦ | ೩೯.೩೫ |
| ೨. | ತಾಲೂಕು ಪಂಚಾಯಿತಿ | ೩೪ | ೧೮೬೬೫.೯೦ | ೫೪.೧೪ |
| ೩. | ಜಿಲ್ಲಾ ಪಂಚಾಯಿತಿ | ೨ | ೨೨೪೩.೦೦ | ೬.೫೧ |
| | **ಒಟ್ಟು** | **೧೨೫** | **೩೪೪೭೫.೦೦** | **೧೦೦.೦೦** |

(ಮೂಲ : ಬಳ್ಳಾರಿ ಜಿಲ್ಲೆಯ ವಾರ್ಷಿಕ ಯೋಜನಾ ವರದಿ ೨೦೧೫-೧೬)

ಒಟ್ಟು ಅನುದಾನದ ಪೈಕಿ ರೂ.೧೩೫೬೬.೧೦ ಲಕ್ಷ ಜಿಲ್ಲಾ ಪಂಚಾಯಿತಿ ವತಿಯಿಂದ ಹಾಗೂ ರೂ.೧೮೬೬೫.೯೦ ತಾಲೂಕು ಹಾಗೂ ಪಂಚಾಯಿತಿ ವತಿಯಿಂದ ರೂ.೨೨೪೩.೦೦ ಲಕ್ಷ ೧೦ ಗ್ರಾಮ ಪಂಚಾಯಿತಿ ವತಿಯಿಂದ ವಿವಿಧ ಯೋಜನೆಗಳ ಅನುಷ್ಠಾನಕ್ಕೆ ವಿನಿಯೋಗಿಸಲಾಗಿದೆ. ೨೦೧೫-೧೬ನೇ ಸಾಲಿನ ವಾರ್ಷಿಕ ಯೋಜನೆಯ ಮುಖ್ಯಾಂಶಗಳು

**ಅ) ಶಿಕ್ಷಣ**

ಆರ್ಥಿಕ ಬೆಳವಣಿಗೆಯೊಂದೇ ರಾಷ್ಟ್ರೀಯ ಏಕೈಕ ಗುರಿಯಾಗಿರುವುದು ಸಾಧ್ಯವಿಲ್ಲ, ಕೇವಲ ಒಟ್ಟು ದೇಶಿಯ ಉತ್ಪನ್ನದಲ್ಲಿ ಹೆಚ್ಚುವರಿ ಹಾಗೂ ಸರಾಸರಿ ತಲಾ ವರಮಾನದ ಹೆಚ್ಚಳ ಮಾತ್ರವಲ್ಲದೇ ಜನಸಾಮಾನ್ಯರ ಕ್ಷೇಮಾಭೀವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಹಲವಾರು ವರ್ಷಗಳಿಂದ ಅಭಿವೃದ್ಧಿ ಉದ್ದೇಶಗಳನ್ನು ಸ್ಪಷ್ಟವಾಗಿ ನಿರೂಪಿಸುತ್ತಾ ಬರಲಾಗಿದೆ. ಮಾನವನ ಅಭಿವೃದ್ಧಿ ಮೂರು ಅಂಶಗಳನ್ನು ಅವಲಂಭಿಸಿರುತ್ತದೆ, ಈ ಪೈಕಿ ಶಿಕ್ಷಣ ಮತ್ತು ಆರೋಗ್ಯ ಪ್ರಮುಖವಾದವು. ಮಾನವನ ಅಭಿವೃದ್ಧಿ ಎಂದರೆ ಆಯ್ಕೆಗಳನ್ನು ವಿಶಾಲಗೊಳಿಸುವುದು ಆಯ್ಕೆಗಳನ್ನು ವಿಶಾಲಗೊಳಿಸುವುದು ಎಂದು ಪ್ರತಿ ಮನುಷ್ಯನ ಆರೋಗ್ಯ ಮಟ್ಟದಲ್ಲಿ ಸುಧಾರಣೆ ತರುವುದು-ಹಾಗೂ-ಗುಣಮಟ್ಟದ ಶಿಕ್ಷಣ ನೀಡುವುದು ೨೦೧೫-೧೬ನೇ ಸಾಲಿನಲ್ಲಿ ಶಿಕ್ಷಣ ವಲಯಕ್ಕೆ ರೂ.೧೪೫೪೩.೦೦ ಲಕ್ಷ ಅನುದಾನವನ್ನು ನಿಗದಿಪಡಿಸಿದ್ದು, ಈ ಪೈಕಿ ಶೇ.೫೪.೫೧ ರಷ್ಟು ಅನುದಾನವು ವೇತನಕ್ಕೆ ವಿನಿಯೋಗಿಸಲಾಗುತ್ತದೆ.

ಶಿಕ್ಷಣ ವಲಯಕ್ಕೆ ಸಂಬಂಧಿಸಿದಂತೆ ಸಾಕ್ಷರತ ಮಟ್ಟವನ್ನು ಹೆಚ್ಚಿಸಲು ಅನೇಕ ವಿಶೇಷ ಕಾರ್ಯಕ್ರಮಗಳನ್ನು ಜಿಲ್ಲೆಯಲ್ಲಿ ಹಮ್ಮಿಕೊಳ್ಳಲಾಗಿದೆ. ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಬಳ್ಳಾರಿ ವಿಶೇಷ ಪ್ಯಾಕೇಜ್ ಅಡಿಯಲ್ಲಿ ಜಿಲ್ಲೆಗೆ ೨೦೦೬-೦೭ ನೇ ಸಾಲಿನಲ್ಲಿ ವಿಶೇಷ ಅನುದಾನ ನೀಡಲಾಗಿದೆ. ಅದಲ್ಲದೆ ೨೦೦೭-೦೮ನೇ ಸಾಲಿನಿಂದ ೨೦೧೪-೧೫ನೇ ಸಾಲಿನವರೆಗೆ ರಾಜ್ಯ ಸರ್ಕಾರವು ವಿಶೇಷ ಅಭಿವೃದ್ಧಿ ಯೋಜನೆಯ ಅಡಿಯಲ್ಲಿ ಪ್ರಮುಖವಾಗಿ ಮೂಲಭೂತ ಸೌಕರ್ಯ ಹಾಗೂ ಇನ್ನಿತರೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರೂ.೨೧೭೭.೨೪ ಲಕ್ಷ ಅನುದಾನ ನೀಡಿರುತ್ತದೆ.

ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ವಲಯಕ್ಕೆ ಸಂಬಂಧಿಸಿದಂತೆ ಅತ್ಯಂತ ಹಿಂದುಳಿದ ಜಿಲ್ಲೆಯೆಂದು ಡಾ. ನಂಜುಂಡಪ್ಪ ಇವರ ಸಮಿತಿಯು ಗುರುತಿಸಿರುತ್ತದೆ, ೨೦೧೧ ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ಸಾಕ್ಷರತಾ ಮಟ್ಟವು ಕೆಳಗಿನಂತಿದೆ.

**ಕೋಷ್ಟಕ:-೪ ಜಿಲ್ಲೆಯಲ್ಲಿ ಸಾಕ್ಷರತಾ ಮಟ್ಟವು**

| **ಕ್ರಸಂ** | **ಲಿಂಗ** | **ಸಾಕ್ಷರತಾ ಮಟ್ಟ (ಶೇ)** |
|---|---|---|
| ೧. | ಪುರುಷರು | ೭೬.೬೪ |
| ೨. | ಸ್ತ್ರೀಯರು | ೫೮.೦೯ |
| **ಒಟ್ಟು** | - | ೬೭.೪೩ |

(ಮೂಲ : ಬಳ್ಳಾರಿ ಜಿಲ್ಲೆಯ ವಾರ್ಷಿಕ ಯೋಜನಾ ವರದಿ ೨೦೧೫-೧೬)

ಸಾಕ್ಷರತಾ ಮಟ್ಟವನ್ನು ಹೆಚ್ಚಿಸಲು ಕಳೆದ ೬ ದಶಕಗಳಿಂದ ಅನೇಕ ಕ್ರಮಗಳನ್ನು

ತೆಗೆದುಕೊಳ್ಳಲಾಗುತ್ತಿದ್ದು, ಇಲ್ಲಿಯವರೆಗೂ ನಿರೀಕ್ಷಿಸಿದ ಮಟ್ಟದಲ್ಲಿ ಪ್ರಗತಿ ಕಂಡುಬಂದಿರುವುದಿಲ್ಲ, ಈ ಜಿಲ್ಲೆಯಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನಾ, ಕನ್ನಡನಾಡು ಸಾಕ್ಷರ ನಾಡು, ಸಾಕ್ಷರೋತ್ತರ ಕಾರ್ಯಕ್ರಮ ಮುಂದುವರಿಕೆ ಶಿಕ್ಷಣ ಕಾರ್ಯಕ್ರಮ, ಶಾಲೆಗೆ ಮರಳಿ ಬಾ, ಡಿ.ಪಿ.ಇ.ಪಿ ಅಕ್ಷರದಾಸೋಹ, ಮುಂತಾದ ಅನೇಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತಂದಿರುತ್ತದೆ. ಅದೇ ರೀತಿ ಸರ್ಕಾರವು ೨೦೧೨-೧೩ನೇ ಸಾಲಿನಿಂದ ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಯೋಜನೆಯು ಜಾರಿಗೆ ತಂದಿದ್ದು, ಈ ಕಾರ್ಯಕ್ರಮದ ಗುರಿ ಹೀಗಿವೆ.

೧. ೨೦೧೭ರ ಒಳಗೆ ಶೇ. ೧೦೦ ರ ದಾಖಲೆಯನ್ನು ಸಾಧಿಸುವುದು.

೨. ೨೦೨೦ ಒಳಗೆ ವಿದ್ಯಾರ್ಥಿಗಳ ಸಂಪೂರ್ಣ ಶಾಲೆಯಲ್ಲಿ ಉಳಿಯುವಂತೆ ಮಾಡುವುದು.

೩. ಪೌಢ ಶಿಕ್ಷಣ ಸಾರ್ವತ್ರಿಕರಣಗೊಳಿಸುವುದು.

೪. ಸರ್ಕಾರಿ ಹಾಗೂ ಅನುದಾನಿತ ಶಾಲೆಗಳನ್ನು ಭೌತಿಕ ಹಾಗೂ ಶೈಕ್ಷಣಿಕವಾಗಿ ಬಲವರ್ಧನೆಗೊಳಿಸುವುದು,

೫. ಸರ್ವರಿಗೂ ಲಿಂಗ ತಾರತಮ್ಯವಿಲ್ಲದ ಶಿಕ್ಷಣ ನೀಡುವುದು.

೬. ಪೌಢ ಶಿಕ್ಷಣದಲ್ಲಿ ಶೇಕಡ ೯೦% ಪ್ರಭುತ್ವ ಮಟ್ಟದ ಕಲಿಕೆ

೭. ೧೫ ರಿಂದ ೧೬ರ ವಯೋಮಾನದವರಿಗಿನ ವಿದ್ಯಾರ್ಥಿಗಳಿಗೆ ಉಚಿತ ಮತ್ತು ಗುಣಮಟ್ಟದ ಶಿಕ್ಷಣ ನೀಡುವುದು.

೮. ೮ನೇ ತರಗತಿಗೆ ಉನ್ನತೀಕರಣಗೊಂಡ ಶಾಲೆಗಳಲ್ಲಿ ಪ್ರೌಢ ಶಿಕ್ಷಣ ಮುಂದುವರೆಸುವುದು.

೯. ವಿದ್ಯಾರ್ಥಿ ಮತ್ತು ಶಿಕ್ಷಕರ ಅನುಪಾತವನ್ನು ಕಡಿಮೆಗೊಳಿಸಿ ಗುಣಮಟ್ಟದ ಶಿಕ್ಷಣವನ್ನು ಸಾಧಿಸುವುದು.

ರಾಷ್ಟ್ರೀಯ ಮಹಿಳಾ ಸಾಕ್ಷರತಾ ಪ್ರಮಾಣವು (೨೦೦೧ರ ಜನಗಣತಿಯ ಪ್ರಕಾರ) ಶೇ.೪೬.೧೩ ಆಗಿದ್ದು, ಈ ಪ್ರಮಾಣಕ್ಕಿಂತ ಕಡಿಮೆ ಪ್ರಮಾಣಕ್ಕಿಂತ ಕಡಿಮೆ ಪ್ರಮಾಣ ದಾಖಲಿಕರಿಸಿದ ಹಾಗೂ ಸಾಕ್ಷರತದಲ್ಲಿ ಜೆಂಡರ್ ಗ್ಯಾಪ್ ರಾಷ್ಟ್ರೀಯ ಸರಾಸರಿಗಿಂತ (ಶೇ.೨೪.೨೦) ಹೆಚ್ಚಿಗೆ ಇರುವ ತಾಲ್ಲೂಕುಗಳಲ್ಲಿ ಹೆಚ್ಚು ಮಕ್ಕಳು ಸಾಕ್ಷರತಾ ಮಟ್ಟವನ್ನು ಏರಿಸಲು ಕಸ್ತೂರ ಬಾ ಗಾಂಧಿ ಬಾಲಿಕಾ ವಿದ್ಯಾಲಯಗಳನ್ನು (ಕೆ.ಜಿ.ಬಿ.ವಿ) ಸ್ಥಾಪಿಸಲಾಗಿದೆ. ಈ ಶಾಲೆಗಳನ್ನು ಮೂರು ಮಾದರಿಗಳನ್ನಾಗಿ ವಿಂಗಡಿಸಿದ್ದು, ಮೊದಲನೆಯ ಮಾದರಿಯಲ್ಲಿ

೧೦೦, ೨ನೇ ಮಾದರಿಯಲ್ಲಿ ೫೦ ಬಾಲಕೀಯರನ್ನು ಹಾಗೂ ೩ನೇ ಮಾದರಿಯಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ಹಿರಿಯ ಪ್ರಾಥಮಿಕ ಶಾಲೆಗಳನ್ನು ಉನ್ನತೀಕರಿಸಿ ೫೦ ಬಾಲಕಿಯರನ್ನು ದಾಖಲಾತಿ ಮಾಡಲಾಗುತ್ತದೆ. ಈ ಪೈಕಿ ಶೇ ೭೫ ರಷ್ಟು ಪ.ಜಾತಿ ಪ.ಪಂಗಡ, ಒ.ಬಿ.ಸಿ ಹಾಗೂ ಅಲ್ಪ ಸಂಖ್ಯಾಂತರಿದ ದಾಖಲಾತಿ ಮಾಡಲಾಗುತ್ತದೆ. ಉಳಿದ ಬಾಲಕಿಯರು ಬಡತನ ರೇಖಗಿಂತ ಕಡಿಮೆ ಇರುವ ಕುಟುಂಬದವರಾಗಿರಬೇಕು.

**ಅ) ಆರೋಗ್ಯ**

ಬಳ್ಳಾರಿಯ ಜಿಲ್ಲೆಯು ಅನೇಕ ಸಾಂಕ್ರಾಮಿಕ ರೋಗಗಳಿಗೆ ತವರೂರಾಗಿರುವುದು ವಿಷಾದನೀಯವಾಗಿದೆ. ಮದಳು ಜ್ವರದ ಪ್ರಕರಣಗಳು, ಮಲೇರಿಯಾ, ಡ್ವೆಂಗು ಜ್ವರ ಹೆಚ್೧ ಎನ್೧ ಹಾಗೂ ಇನ್ನಿತರ ಸಾಮಾನ್ಯವಾಗಿ ಕಾಣಿಸಿಕೊಳ್ಳದೇ ಇರುವಂತಹ ರೋಗಗಳು ಜಿಲ್ಲೆಯಲ್ಲಿ ವರದಿಯಾಗಿರುತ್ತದೆ. ಇದಲ್ಲದೆ ೨೦೧೧ ಜನಗಣತಿಯ ಪ್ರಕಾರ ಜಿಲ್ಲೆಯು ಅತ್ಯಂತ ಹೆಚ್ಚಿನ ಜನಸಂಖ್ಯೆ ಬೆಳವಣಿಗೆಯನ್ನು ಕಂಡಿರುತ್ತದೆ. ಜನಸಂಖ್ಯೆ ಬೆಳವಣಿಗೆಯನ್ನು ಜಿಲ್ಲೆಯ ದಶಕದ ಜನಸಂಖ್ಯಾ ಬೆಳವಣೆಗೆ ಶೇ ೨೦.೯೯ ಇದ್ದು ಇದು ರಾಜ್ಯದ ಸರಾಸರಿ (ಶೇ.೧೫.೬೭) ಹಾಗೂ ರಾಷ್ಟ್ರದ ಸರಾಸರಿ (ಶೇ. ೧೭.೬೪) ಕ್ಕಿಂತ ಹೆಚ್ಚಿಗೆ ಇರುತ್ತದೆ.

ಆರೋಗ್ಯ ವಲಯಕ್ಕೆ ಸಂಬಂಧಿಸಿದಂತೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದರಲ್ಲಿ ಜಿಲ್ಲೆಯು ಗಮನಾರ್ಹ ಪ್ರಗತಿಯನ್ನು ಸಾಧಿಸಿರುತ್ತದೆ, ಬಳ್ಳಾರಿ ವಿಶೇಷ ಪ್ಯಾಕೇಜ್ ಅಡಿಯಲ್ಲಿ ಮತ್ತು ವಿಶೇಷ ಅಭಿವೃದ್ಧಿ ಯೋಜನೆಯಲ್ಲಿ ಜಿಲ್ಲೆಗೆ ವಿಶೇಷವಾಗಿ ಸರ್ಕಾರವು ಅನುದಾನ ಬಿಡುಗಡೆ ಮಾಡಲಾಗುತ್ತದೆ.

ಜಿಲ್ಲಾ ವಲಯ ಅಡಿಯಲ್ಲಿ ಈ ವರ್ಷದಲ್ಲಿ (೨೦೧೫-೨೦೧೬) ಆರೋಗ್ಯ ವಲಯಕ್ಕೆ ರೂ.೨೩೪೫.೫೪ ಲಕ್ಷ ಅನುದಾನವನ್ನು ಒದಗಿಸಿದ್ದು, ಈ ಪೈಕಿ ರೂ.೧೭೪೦.೪೯ ಲಕ್ಷ ವೇತನಕ್ಕೆ ವಿನಿಯೋಗಿಸಲಾಗುತ್ತದೆ. ಉಳಿದ ಅನುದಾನದಲ್ಲಿ ಆರೋಗ್ಯ ಸಂಸ್ಥೆಗಳಿಗೆ ಉಪಕರಣಗಳು ಕಟ್ಟಡಗಳು ನಿರ್ಮಾಣ/ನಿರ್ವಹಣೆ, ಔಷದಿಗಳ ಸರಬರಾಜು ವಾಹನಗಳಿಗೆ ಇಂಧನ ಮತ್ತು ದುರಸ್ಥಿ ವೆಚ್ಚವನ್ನು ಭರಿಸಲಾಗುತ್ತದೆ.

**ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ (NRHM) :೨೦೦೫-೧೨**

ಮಾನವನ ಅಭಿವೃದ್ಧಿಗೆ ಪೂರಕವಾಗಿರುವ ಮೂರು ಮೂಲಭೂತ ಅಂಶಗಳ ಪೈಕಿ ಒಂದಾದ ಆರೋಗ್ಯ ವಲಯಕ್ಕೆ ಮಹತ್ವವಾದ ಆದ್ಯತೆಯನ್ನು ನೀಡಿ ಭಾರತ ಸರ್ಕಾರವು ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಎಂಬ ಕಾರ್ಯಕ್ರಮವನ್ನು ಇಡೀ ರಾಷ್ಟ್ರದಲ್ಲಿ ಜಾರಿಗೆ ತಂದಿದೆ. ಅವರ ಜೀವನ ಮಟ್ಟದಲ್ಲಿ ಸುಧಾರಣೆ ತರುವ ನಿಟ್ಟಿನಲ್ಲಿ ಅನೇಕ

ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಕ್ಕೆ ತಂದಿರುತ್ತದೆ. ಈ ಕಾರ್ಯಕ್ರಮದ ಕೆಲವು ಮುಖ್ಯಾಂಶಗಳು ಈ ಕೆಳಗಿನಂತಿವೆ.

**ಎನ್.ಆರ್.ಹೆಚ್.ಎಂ. ಕಾರ್ಯಕ್ರಮದ ಅವಧಿ ೭ ವರ್ಷ (೨೦೦೫-೧೨)**

ವಾರ್ಷಿಕ ಯೋಜನೆಗಳನ್ನು ಆದ್ಯತೆಗೆ ಅನುಗುಣವಾಗಿ ರೂಪಿಸಲಾಗುತ್ತದೆ.

ಯೋಜನೆಗಳನ್ನು ಗ್ರಾಮ ಮಟ್ಟದಿಂದ ರೂಪಿಸಲಾಗುತ್ತದೆ.

ಸಂವಿಧಾನದ ತಿದ್ದುಪಡಿ ೭೩ ರಂತೆ ಇಡೀ ಕಾರ್ಯಕ್ರಮದ ಅನುಷ್ಠಾನದಲ್ಲಿ ಜನರನ್ನು ತೋಡಗಿಸಲಾಗುತ್ತದೆ.

ಗ್ರಾಮ, ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯಿತಿ ಸದಸ್ಯರನ್ನು ಸ್ತ್ರೀ ಶಕ್ತಿ ಗುಂಪುಗಳನ್ನು ಹಾಗೂ ಸ್ವಯಂ ಸೇವಾ ಸಂಸ್ಥೆಗಳನ್ನು ಪ್ರತಿ ಹಂತದಲ್ಲಿಯೂ ತೊಡಗಿಸಲಾಗುವುದು.

ಮಹಿಳಾ ಹಾಗೂ ಮಕ್ಕಳ ಆರೋಗ್ಯ ಕುಟುಂಬ ಕಲ್ಯಾಣ ಕಾರ್ಯಕ್ರಮ ಹಾಗೂ ಸಾಂಕ್ರಾಮಿಕ ರೋಗಗಳ ತಡೆಗಟ್ಟುವಿಕೆ ಮುಂತಾದ ಅಂಶಗಳಿಗೆ ಒತ್ತು ನೀಡಲಾಗುತ್ತದೆ.

ಪ್ರತಿ ಸಾವಿರ ಜನಸಂಖ್ಯೆಗೆ ಒಬ್ಬ ತರಬೇತಿ ಪಡೆದ ಆರೋಗ್ಯ ಸಹಾಯಕಿಯನ್ನು ಒದಗಿಸಲಾಗುತ್ತದೆ. (ಆಶಾ ಕಾರ್ಯಕ್ರಮ)

ಜನನಿ ಸುರಕ್ಷಾ ಕಾರ್ಯ ಕ್ರಮದಡಿಯಲ್ಲಿ ಪರಿಹಾರ ಧನವನ್ನು ಒದಗಿಸಲಾಗುತ್ತದೆ.

ಎನ್. ಆರ್.ಹೆಚ್.ಎಂ. ಕಾರ್ಯಕ್ರಮದ ಅಡಿಯಲ್ಲಿ ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ (ಪಿ.ಹೆಚ್.ಸಿ) ರೂ.೨೫೦೦೦-೦೦ ನಿರ್ಭಂಧರಹಿತ ಅನುದಾನವನ್ನು ಒದಗಿಸಲಾಗುತ್ತದೆ. ಈ ಅನುದಾನದಲ್ಲಿ ಕೊಳಾಯಿಗಳ ದುರಸ್ತಿ ವಿದ್ಯುತ್ ಶಕ್ತಿ ಬಲ್ಬ್‌ಗಳು, ಸಣ್ಣ-ಪುಟ್ಟ ದುರಸ್ತಿಗಳನ್ನು ತೆಗೆದುಕೊಳ್ಳಬಹುದು, ಅಲ್ಲದೆ, ರೋಗಿಗಳ ತಪಾಸಣೆಗಾಗಿ ಟೇಬಲ್ ಹೇಗೆ ಟೇಬಲ್ ಬಿ.ಪಿ ಪರಿಕರಣ, ಹಿಮೋಗ್ಲೋಬಿನ್ ಮೀಟರ್, ಇತ್ಯಾದಿಗಳ ವೆಚ್ಚವನ್ನು ಭರಿಸಲು ವಿನಿಯೋಗಿಸಬಹುದಾಗಿದೆ. ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ೭೫,೦೦೦-೦೦ ರೂ ರಂತೆ ವಾರ್ಷಿಕ ನಿರ್ವಹಣಾ ವೆಚ್ಚವನ್ನು ಒದಗಿಸಲಾಗುತ್ತದೆ. ಈ ಜಿಲ್ಲೆಯಲ್ಲಿರುವ ಪ್ರತಿ ಆರೋಗ್ಯ ಉಪ ಕೇಂದ್ರಕ್ಕೆ ಪ್ರತಿ ವರ್ಷ ರೂ.೧೦೦೦೦-೦೦ ಗಳನ್ನು ಒದಗಿಸಲಾಗುವುದು.

**ಇ. ಗ್ರಾಮೀಣ ನೀರು ಪೂರೈಕೆ**

ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನರಿಗೆ ಸ್ವಚ್ಛ ಕುಡಿಯುವ ನೀರನ್ನು ಒದಗಿಸುವುದು ೧೧ನೇ ಪಂಚವಾರ್ಷಿಕ ಯೋಜನೆಯ ಆದ್ಯತೆಗಳಲ್ಲಿ ಒಂದಾಗಿರುತ್ತದೆ. ಪ್ರತಿಯೋಬ್ಬರಿಗೂ ಮೊದಲನೆಯ ಹಂತದಲ್ಲಿ ೫೫ ಲೀಟರ್ ಹಾಗೂ ಎರಡನೇ ಹಂತದಲ್ಲಿ

೭೫ ಲೀಟರ್ ಶುದ್ಧ ಕುಡಿಯುವ ನೀರನ್ನು ಒದಗಿಸುವ ಕ್ರಮ ವಹಿಸಲಾಗುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟಾರೆ ೧೦೧೨ ಜನವಸತಿಯುಳ್ಳ ಪ್ರದೇಶಗಳಿದ್ದು ಈ ಪೈಕಿ ೫೨ ಗ್ರಾಮಗಳಲ್ಲಿನ ನೀರು ಪ್ಲೋರೈಡ್ ಮತ್ತು ಇತರೆ ರಾಸಾಯನಿಕ ಅಂಶದಿಂದ ಕೂಡಿರುತ್ತದೆ. ಈ ಗ್ರಾಮಗಳಲ್ಲಿ ಅಧಿಕ ಲವಣಾಂಶವುಳ್ಳ (೧.೫೦ ಪಿ.ಪಿ.ಎಂ. ಕ್ಕಿಂತ ಅಧಿಕ) ನೀರು ಲಭ್ಯವಾಗುತ್ತದೆ. ಆದರೆ ಇದರಿಂದ ಜನರ ಆರೋಗ್ಯದ ಮೇಲೆ ದುಷ್ಪಾರಿಣಾಮ ಬೀರುವ ಸಾಧ್ಯತೆಗಳಿದ್ದು ಇದನ್ನು ಸರಿಪಡಿಸಲು ೨ ಮಾರ್ಗಗಳನ್ನು ಅವಲಂಭಿಸಲಾಗಿದೆ. ಮೊದಲನೆಯದಾಗಿ ಪ್ಲೋರೈಡ್ ಮಿಶ್ರಿತ ಕುಡಿಯುವ ನೀರು ಲಭ್ಯವಿರುವ ಗ್ರಾಮಗಳಲ್ಲಿ ಪ್ಲೋರೈಡ್ ಫೀಲ್ಟರ್‌ಗಳನ್ನು ಸರಬರಾಜು ಮಾಡಬಹುದು, ಎರಡನೇಯದಾಗಿ ಮೇಲ್ಮೈ ಜಲಮೂಲದ ನೀರನ್ನು ಸರಬರಾಜು ಮಾಡುವ ವ್ಯವಸ್ಥೆಯನ್ನು ಮಾಡುವುದು. ಇದಕ್ಕೆ ಕೇಂದ್ರ ಮತ್ತು ರಾಜ್ಯ ಸರ್ಕಾರದ ಸಮಪಾಲಿನಲ್ಲಿ ನೀರು ಸರಬರಾಜು ಮಾಡುತ್ತಿದ್ದು, ೨೦೧೪-೧೫ನೇ ಸಾಲಿನ ಅಂತ್ಯದವರೆಗೆ ಈ ಕೆಳಗಿನಂತೆ ವೆಚ್ಚ ಮಾಡಲಾಗಿದೆ.

**ಆರ್ಥಿಕ (ದಿನಾಂಕ: ೩೧.೦೩.೨೦೧೫)** **(ರೂ. ಲಕ್ಷಗಳಲ್ಲಿ)**

ಆರಂಭಿಕ ಶುಲ್ಕ ರೂ.೧೦೮೨.೮೬

ನಿಗದಿಪಡಿಸಿರುವ ಅನುದಾನ ರೂ.೯೧೬೭.೩೭

ಕೇಂದ್ರ ಸರ್ಕಾರದಿಂದ ಬಿಡುಗಡೆ ಆಗಿರುವ ರೂ.೨೮೬೫.೪೧

ರಾಜ್ಯ ಸರ್ಕಾರದಿಂದ ಬಿಡುಗಡೆ ಆಗಿರುವ ರೂ.೪೮೫೭.೬೬

ಒಟ್ಟು ಲಭ್ಯವಿರುವ ಅನುದಾನ ರೂ.೮೭೯೬.೦೩

ಒಟ್ಟು ಆಗಿರುವ ವೆಚ್ಚ (೩೧ :೦೩ :೨೦೧೫) ರೂ.೬೩೫೯.೦೫ (೭೨.೨೯%)

**ಕುಡಿಯುವ ನೀರಿನ ಪೂರೈಕೆ ಕಾಮಗಾರಿಗಳ ಸಂಖ್ಯೆ: ೧೪೧೬**

ಗ್ರಾಮ ಪ್ರದೇಶಗಳಲ್ಲಿರುವ ಅಂಗನವಾಡಿ ಕುಡಿಯುವ ನೀರಿನ ಪೂರೈಕೆ ಕಾಮಗಾರಿಗಳ ಸಂಖ್ಯೆ: ೫೭೨

ಗ್ರಾಮ ಪ್ರದೇಶಗಳಲ್ಲಿರುವ ಶಾಲೆಗಳಿಗೆ ಕುಡಿಯುವ ನೀರಿನ ಪೂರೈಕೆ ಕಾಮಗಾರಿಗಳ ಸಂಖ್ಯೆ: ೧೮೮.

ಅಂತರ್ಜಲ ಮರುಪೂರ್ಣ ಯೋಜನೆಗಳ ಕಾಮಗಾರಿಗಳ ಸಂಖ್ಯೆ: ೬೦

ಒಟ್ಟು ಅನುಮೋದನೆಗೊಂಡಿರುವ ಕಾಮಗಾರಿಗಳ ಸಂಖ್ಯೆ: ೨೩೩೬.

ಆಯಾ ಗ್ರಾಮ ಪಂಚಾಯಿತಿಗಳಿಗೆ ಕುಡಿಯುವ ನೀರಿನ ಯೋಜನೆಯಗಳನ್ನು ಅನುಷ್ಠಾನಗೊಳಿಸುವ ಮತ್ತು ನಿರ್ವಹಣೆ ಜವಬ್ದಾರಿಯನ್ನು ವಹಿಸಲಾಗಿದೆ. (೦೧:೧೦:೨೦೧೦ರ ಪ್ರಕಾರ)

ಜಿಲ್ಲಾ ಪಂಚಾಯಿತಿಗಳು ನಿಗದಿತ ಅನುದಾನಕ್ಕೆ ಕ್ರಿಯಾ ಯೋಜನೆಯನ್ನು ರೂಪಿಸುವಾಗ ೧ವರ್ಷಕ್ಕೂ ಮೇಲ್ಪಟ್ಟು ಪೂರ್ಣಗೊಳ್ಳದೆ ಇರುವ ಮುಂದವರೆದ ಕಾಮಗಾರಿಗಳನ್ನು ಕ್ರಿಯಾ ಯೋಜನೆಯಲ್ಲಿ ಅಳವಡಿಸಲಾಗುತ್ತದೆ.

ಸಿಪಿಎ-೯೯ ಅಡಿ ಗುರುತಿಸಿ ೧೯೯೮-೯೯ ರಲ್ಲಿ ಭಾರತ ಸರ್ಕಾರಕ್ಕೆ ವರದಿ ಮಾಡಲಾದ ಭಾಗಶಃ ಅವರಿಸಲ್ಪಟ್ಟ ಜನವಸತಿಗಳಿಗೆ ಹೊಸ ಯೋಜನೆಗಳಿಗೆ ಆದ್ಯತೆಯನ್ನು ನೀಡುವುದು.

**ವಸತಿ ಕಾರ್ಯಕ್ರಮಗಳು**

೨೦೦೫-೦೬ನೇ ಸಾಲಿನಿಂದ ಎಲ್ಲಾ ವಸತಿ ಕಾರ್ಯಕ್ರಮಗಳನ್ನು ಗ್ರಾಮ ಪಂಚಾಯಿತಿಯ ಮುಖಾಂತರ ಅನುಷ್ಠಾನಗೊಳಿಸಲಾಗುತ್ತದೆ.

೧) **ಇಂದಿರಾ ಆವಾಸ್ ಯೋಜನೆ:** ಈ ಯೋಜನೆಯ ಮೂಲ ಉದ್ದೇಶವು ಬಡತನ ರೇಖೆಗಿಂತ ಕೆಳಗಿರುವ ವಸತಿ ರಹಿತರಿಗೆ ಹೊಸ ಮನೆಗಳನ್ನು ನಿರ್ಮಿಸುವುದು. ಆಯ್ಕೆಯಾಗಿರುವ ಫಲಾನುಭವಿಗಳ ಪೈಕಿ ಪ.ಜಾತಿ/ಪ.ಪಂ ಫಲಾನುಭವಿಗಳು ಶೇ.೬೦ ರಷ್ಟು ಇರಲೇಬೇಕಾಗುತ್ತದೆ. ಶೇ.೩ರಷ್ಟು ಅನುದಾನವನ್ನು ಅಂಗವೀಕಲರಾಗಿ ಮೀಸಲಿಡಲಾಗಿದೆ. ಅಲ್ಲದೇ ಈ ಯೋಜನೆಯನ್ನು ಮಾಜಿ ಸೈನಿಕರಿಗೆ ಹಾಗೂ ಜೀತ ವಿಮುಕ್ತರಿಗೆ ಆದ್ಯತೆ ಮೇಲೆ ಪರಿಗಣಿಸಲು ಅವಕಾಶ ಮಾಡಲಾಗಿದೆ

**ಕೋಷ್ಟಕ:೫ – ಕಳೆದ ೫ ವರ್ಷಗಳಲ್ಲಿ ವಿವಿಧ ವಸತಿ ಯೋಜನೆಗಳಿಗೆ ನಿಗಧಿಪಡಿಸಿದ ಗುರಿಸಾಧನೆ ವಿವರ.**

| ಕ್ರಸಂ | ಯೋಜನೆಯ ಹೆಸರು | ವರ್ಷ | ನಿಗದಿಪಡಿಸಿದ ಗುರಿ | ಸಾಧನೆ | ಶೇಕಡ |
|---|---|---|---|---|---|
| ೧ | ಇಂದಿರಾ ಆವಾಸ್‌ಯೋಜನೆ | ೨೦೧೦-೧೧ ರಿಂದ ೨೦೧೪-೧೫ | ೩೮೭೩೮ | ೩೩೬೨೫ | ೮೬.೮೦ |
| ೨. | ಬಸವ ವಸತಿ ಯೋಜನೆ | ೨೦೧೦-೧೧ ರಿಂದ ೨೦೧೪-೧೫ | ೪೮೯೬೬ | ೩೫೯೧೨ | ೭೩.೩೩ |
| | ಒಟ್ಟು | | ೮೭೭೦೪ | ೬೯೫೩೭ | ೭೯.೨೮ |

(ಮೂಲ: ಬಳ್ಳಾರಿ ವಾರ್ಷಿಕ ಯೋಜನಾ ವರದಿ ೨೦೧೫-೨೦೧೬ ಜಿಲ್ಲಾ ಪಂಚಾಯಿತಿ ಕಾರ್ಯಾಲಯ, ಬಳ್ಳಾರಿ.)

೨೦೦೪-೦೫ನೇ ವರ್ಷದಿಂದ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಗ್ರಾಮ ಪಂಚಾಯಿತಿಗಳಿಗೆ ವಹಿಸಲಾಗಿದೆ. ಅನುದಾನವು ಸಹ ನೇರವಾಗಿ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗುತ್ತಿದ್ದು, ೨೦೧೪-೧೫ನೇ ಸಾಲಿನಿಂದ ನಿಗಮದಿಂದ ಜಿ.ಪಿ.ಎಸ್. ಮಾಹಿತಿ ಆಧರಿಸಿ ನೇರವಾಗಿ ಫಲಾನುಭವಿ ಖಾತೆಗೆ ಜಮಾ ಮಾಡಲಾಗುತ್ತದೆ. ಅಲ್ಲದೇ ಘಟಕ ವೆಚ್ಚವನ್ನು ಸಹ ೨೦೧೪-೧೫ನೇ ಸಾಲಿನಿಂದ ಪರಿಷ್ಕರಿಸಲಾಗಿದೆ.

**೬.೪. ರಾಜ್ಯ ಹಣಕಾಸು ಆಯೋಗಗಳ ಸಂವಿಧಾನಿಕ ಹಿನ್ನೆಲೆ ಮತ್ತು ಅವಲೋಕನ**

ವಿಕೇಂದ್ರೀಕರಣವನ್ನು 'ಒಂದು ರಾಜಕೀಯ ವ್ಯವಸ್ಥೆಯಲ್ಲಿ ಬಹುಹಂತದ ಸರ್ಕಾರಗಳನ್ನು ಪೋಷಿಸಬಲ್ಲ ವಿಶಿಷ್ಟ ಅಧಿಕಾರಗಳು, ಪ್ರಕಾರ್ಯಗಳು ಮತ್ತು ಹಣಕಾಸು ಸಂಪನ್ಮೂಲಗಳನ್ನು ಹೊಂದಿರುವ ವಿವಿಧ ಹಂತಗಳ ಸರ್ಕಾರಗಳು' ಎಂದು ನಿರ್ವಹಿಸಬಹುದು. ಪ್ರಜಾಪ್ರಭುತ್ವದ ಬೇರುಗಳನ್ನು ಬಲಪಡಿಸುವಲ್ಲಿ ವಿಕೇಂದ್ರೀಕರಣವು ದೂರಗಾಮಿ ಪರಿಣಾಮವನ್ನು ಬೀರಬಲ್ಲದು. ಬಹು ಹಂತಗಳ ಸರ್ಕಾರಗಳು, ಬಹು ಹಂತಗಳ ಯೋಜನೆ ಹಾಗೂ ಪ್ರಜಾಪ್ರಭುತ್ವ ವ್ಯವಸ್ಥೆ ಇವುಗಳು ಒಟ್ಟಿಗೆ ಸಾಗುತ್ತವೆ. ಇವುಗಳ ನಡುವೆ ಪರಸ್ಪರ ರಚನಾತ್ಮಕ ಸಂಬಂಧವಿದೆ.

ಭಾರತದಲ್ಲಿ ಒಕ್ಕೂಟ ಹಣಕಾಸಿನ ಉಗಮ ಹಾಗೂ ವಿಕಾಸವನ್ನು ಭಾರತ ಸರ್ಕಾರದ ೧೯೧೯ರ ಮತ್ತು ೧೯೩೫ರ ಕಾಯಿದೆಗಳಲ್ಲಿ ಗುರುತಿಸಬಹುದು. ಬಹು ದೀರ್ಘಕಾಲದವರೆಗೆ ಭಾರತ ಒಕ್ಕೂಟದ ವ್ಯಾಪ್ತಿಯು ಎರಡು ಘಟಕಗಳಿಗೆ ಮಾತ್ರ ಸೀಮಿತವಾಗಿತ್ತು. ಅವುಗಳೆಂದರೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು. ಒಂದು ಆರೋಗ್ಯಕರ ಒಕ್ಕೂಟ ವ್ಯವಸ್ಥೆಯಲ್ಲಿ ಈ ಎರಡೂ ಘಟಕಗಳಿಗೆ ಸಮಾನವಾದ ಹಕ್ಕುಗಳು ಮತ್ತು ಅಧಿಕಾರಗಳು ಇರಬೇಕು. ಒಕ್ಕೂಟ ಪದ್ಧತಿ ಅನ್ನುವುದು ಮೂಲತಃ ಒಂದು ರಾಜಕೀಯ ವ್ಯವಸ್ಥೆ. ಸಾರ್ವಜನಿಕರಿಗೆ ಮೂಲ ಸೌಕರ್ಯಗಳನ್ನು ಒದಗಿಸುವ ಜವಾಬ್ದಾರಿ ರಾಜ್ಯಗಳದ್ದಾಗಿದೆ. ಆದ್ದರಿಂದ ಅವು ಸಂಪನ್ಮೂಲಗಳ ಕೊರತೆಯಿಂದ ಭಾರೀ ಒತ್ತಡವನ್ನು ಅನುಭವಿಸುತ್ತವೆ. ಯಾವುದೇ ಒಕ್ಕೂಟ ವ್ಯವಸ್ಥೆಯಲ್ಲಿ ಕೇಂದ್ರ ಸರ್ಕಾರದ ಆದಾಯದ ಆಕರಗಳು ಹಾಗೂ ಸಂಪನ್ಮೂಲಗಳು ಸಾಮಾನ್ಯವಾಗಿ ವ್ಯಾಪಕವೂ ಮತ್ತು ಬೃಹತ್ ಪ್ರಮಾಣದವು ಆಗಿದ್ದರೆ ರಾಜ್ಯ ಸರ್ಕಾರಗಳ ಆದಾಯದ ಆಕರಗಳು ಸೀಮಿತವಾಗಿರುತ್ತದೆ. ಹಣಕಾಸು ಸಂಬಂಧಗಳಲ್ಲಿನ ಲಂಬಾಕಾರ ಹಾಗೂ ಸಮತಲ ಅಸಮತೋಲನದ ಕಾರಣದಿಂದಾಗಿ ಕೇಂದ್ರ ಮತ್ತು ರಾಜ್ಯಗಳ ನಡುವಿನ ಹಣಕಾಸು ಸಂಬಂಧದಲ್ಲಿ ಬಿಕ್ಕಟ್ಟು ಉಂಟಾಗುತ್ತದೆ. ಇದು ಜಗತ್ತಿನಾದ್ಯಂತ ಪ್ರತಿ ಒಕ್ಕೂಟ ವ್ಯವಸ್ಥೆಯು ಎದುರಿಸುವ ಸಾಮಾನ್ಯ ಸಮಸ್ಯೆಯಾಗಿದೆ.

ನಮ್ಮ ಒಕ್ಕೂಟ ವ್ಯವಸ್ಥೆಯಲ್ಲಿನ ಒಂದು ಜಟಿಲ ಅಂಶ ಯಾವುದೆಂದರೆ ಒಕ್ಕೂಟದ ಮೂರು ಘಟಕಗಳ ನಡುವಿನ ಹಣಕಾಸು ಸಂಬಂಧ. ರಾಜ್ಯ ಹಾಗೂ ಸ್ಥಳೀಯ ಸ್ವಯಂ

ಆಡಳಿತ ಸರ್ಕಾರಗಳ ನಡುವಿನ ಹಣಕಾಸು ಸಂಬಂಧವು ಅನುಚ್ಛೇದ ೨೪೩ (ಐ) ಮತ್ತು (ವೈ) ಪ್ರಕಾರ ಆಯಾ ರಾಜ್ಯಗಳಲ್ಲಿನ ರಾಜ್ಯ ಹಣಕಾಸು ಆಯೋಗಗಳಿಂದಲೇ ನಿಯಂತ್ರಿತವಾಗುತ್ತದೆ. ೧೯೯೨ಕ್ಕೆ ಮೊದಲು ಸಂವಿಧಾನದ ೭೩ ಹಾಗೂ ೭೪ನೆಯ ತಿದ್ದುಪಡಿಗಳಿಗೆ ನಡೆದ ಹಣಕಾಸು ಆಯೋಗದ ಶಿಫಾರಸ್ಸುಗಳು ತೆರಿಗೆಯ ಹಂಚಿಕೆ ಮತ್ತು ಸಹಾಯಾನುದಾನಗಳನ್ನು ಒಳಗೊಂಡ ನಿಧಿಗಳನ್ನು ರಾಜ್ಯಗಳಿಗೆ ವರ್ಗಾಯಿಸುವುದಕ್ಕೆ ಮಾತ್ರ ಸೀಮಿತವಾಗಿತ್ತು. ಆದರೆ ಮೇಲೆ ಹೇಳಿದ ತಿದ್ದುಪಡಿಗಳ ನಂತರ, ಸಂವಿಧಾನದ ೨೮೦ (೩) (ಬಿ) ಹಾಗೂ ೨೮೦(೩) (ಸಿ) ಅನುಚ್ಛೇದಗಳಲ್ಲಿ ಆಯಾ ಹಣಕಾಸು ಆಯೋಗಗಳ ಶಿಫಾರಸ್ಸುಗಳನ್ನು ಆಧರಿಸಿ ಪಂಚಾಯತ್ ರಾಜ್ ಸಂಸ್ಥೆಗಳ ಹಾಗೂ ನಗರ ಸ್ಥಳೀಯ ಸಂಸ್ಥೆಗಳ ಸಂಪನ್ಮೂಲಗಳನ್ನು ಪೂರೈಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯನ್ನು ಹೆಚ್ಚಿಸುವ ನಿಟ್ಟಿನಲ್ಲಿ ಶಿಫಾರಸ್ಸು ಮಾಡುವ ಜವಾಬ್ದಾರಿಯನ್ನು ಸಂಬಂಧಿಸಿದ ರಾಜ್ಯ ಹಣಕಾಸು ಆಯೋಗಕ್ಕೆ ವಹಿಸಿಕೊಡಲಾಗಿದೆ.

ನಮ್ಮ ದೇಶದಲ್ಲಿ ೧೯೯೨ರ ವರೆಗೆ ಎರಡು ಹಂತದ ಸರ್ಕಾರಗಳಿದ್ದವು. ಈಗ ಸರ್ಕಾರಗಳ ಹಂತಗಳ ವಿಸ್ತರಣೆಯಿಂದ ಹಣಕಾಸು ಆಯೋಗವು ಸ್ಥಳೀಯ ಸ್ವಯಂ ಆಡಳಿತ ಸರ್ಕಾರಗಳ ಹಣಕಾಸಿನ ಅಗತ್ಯತೆಗಳನ್ನೂ ಪರಿಗಣಿಸಬೇಕಾಗುತ್ತದೆ. ಇದನ್ನು ಸಾಧಿಸುವುದಕ್ಕಾಗಿ ನಿರ್ದಿಷ್ಟವಾದ ಪರಿಶೀಲನಾರ್ಹ ಅಂಶಗಳಿಲ್ಲದಿದ್ದರೂ ಸಹ ಹತ್ತನೆಯ ಹಣಕಾಸು ಆಯೋಗವು ಸ್ಥಳೀಯ ಸ್ವಯಮಾಡಳಿತ ಸರ್ಕಾರಗಳಿಗೆ ನಿಧಿಗಳನ್ನು ಒದಗಿಸುವ ಅಗತ್ಯವನ್ನು ಪರಿಗಣಿಸಿತು. ಮೊಟ್ಟಮೊದಲ ಬಾರಿಗೆ ಅದು ಸ್ಥಳೀಯ ಸಂಸ್ಥೆಗಳಿಗೆ ಅನುದಾನಗಳನ್ನು ಶಿಫಾರಸ್ಸು ಮಾಡಿತು. ಹನ್ನೊಂದನೆಯ ಹಣಕಾಸು ಆಯೋಗದ ನಂತರ ಹಣಕಾಸು ಆಯೋಗದ ಪರಿಶೀಲನಾರ್ಹ ಅಂಶಗಳಲ್ಲಿ ಸ್ಥಳೀಯ ಸಂಸ್ಥೆಗಳಿಗೆ ನಿಧಿಗಳನ್ನು ವರ್ಗಾಯಿಸುವ ಅಂಶವನ್ನು ಸೇರಿಸುವ ಕ್ರಮವನ್ನು ಅನುಸರಿಸಲಾಯಿತು.

**ಕರ್ನಾಟಕ ರಾಜ್ಯ ಹಣಕಾಸು ಆಯೋಗಗಳ ಅವಲೋಕನ**

ಪಂಚಾಯತ್‌ರಾಜ್ ಸಂಸ್ಥೆಗಳು ಹಾಗೂ ನಗರ ಸ್ಥಳೀಯ ಸಂಸ್ಥೆಗಳು ಎದುರಿಸುತ್ತಿರುವ ವಿತ್ತೀಯ ಸಮಸ್ಯೆ ಬಗ್ಗೆ ಗಮನ ಹರಿಸುವುದಕ್ಕಾಗಿ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ ೧೯೯೩ರ (೨೦೧೫)ಪ್ರಕರಣ ೨೬೭ ಮತ್ತು ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ ೧೯೭೬ರ ಪ್ರಕರಣ ೫೦೩-ಸಿ ಮತ್ತು ತಿದ್ದುಪಡಿಯಾದಂತೆ ಕರ್ನಾಟಕ ಪೌರ ಅಧಿನಿಯಮ ೧೯೬೪ರ ಪ್ರಕರಣ ೩೦೨-ಬಿ ಗಳಿಗೆ ಅನುಗುಣವಾಗಿ ಸಂವಿಧಾನದ ೨೪೩ (ಐ) ಮತ್ತು ೨೪೩(ವೈ) ಅನುಚ್ಛೇದಗಳ ಅನ್ವಯ ಪಂಚಾಯತ್‌ರಾಜ್ ಸಂಸ್ಥೆಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳು ಎದುರಿಸುತ್ತಿರುವ ಹಣಕಾಸು ಸಮಸ್ಯೆಗಳನ್ನು ನಿರ್ವಹಿಸುವುದಕ್ಕಾಗಿ ರಾಜ್ಯ ಹಣಕಾಸು ಆಯೋಗವನ್ನು ರಚಿಸುವುದಕ್ಕೆ ಅವಕಾಶ

ಮಾಡಿಕೊಡಲಾಗಿದೆ. ರಾಜ್ಯ ಹಣಕಾಸು ಆಯೋಗಗಳು ಪಂಚಾಯತ್‌ರಾಜ್ ಸಂಸ್ಥೆ ಹಾಗೂ ನಗರ ಸ್ಥಳೀಯ ಸಂಸ್ಥೆಗಳೆರಡರ ವಿತ್ತೀಯ ಸಮಸ್ಯೆಗಳ ಬಗ್ಗೆ ಗಮನ ನೀಡಬೇಕಾಗಿದೆ. ಈ ವ್ಯವಸ್ಥೆಯು ಅಸ್ತಿತ್ವಕ್ಕೆ ಬರುವ ಮೊದಲು ರಾಜ್ಯ ಸರ್ಕಾರಗಳು ರಾಜ್ಯ ಕಾನೂನು ಹಾಗೂ ಸರ್ಕಾರದ ವಿವೇಚನೆಯನ್ನು ಆಧರಿಸಿ ಸ್ಥಳೀಯ ಸಂಸ್ಥೆಗಳಿಗೆ ನಿಧಿಗಳ ವರ್ಗಾವಣೆ ಮಾಡುತ್ತಿದ್ದವು. ಈಗ ರಾಜ್ಯ ಮತ್ತು ಸ್ಥಳೀಯ ಸರ್ಕಾರಗಳ ನಡುವೆ ರಾಜ್ಯ ಹಣಕಾಸು ಆಯೋಗಗಳ ಮೂಲಕ ವಿತ್ತೀಯ ಸಂಬಂಧಗಳನ್ನು ನಿರ್ವಹಿಸಲು ಒಂದು ಸಂವಿಧಾನಾತ್ಮಕ ತಳಹದಿ ರೂಪಿತವಾಗಿದೆ. ಸಂವಿಧಾನದ ೨೪೩(ಐ) ಅನುಚ್ಛೇದದ ಅನ್ವಯ, ಸಂವಿಧಾನಕ್ಕೆ ೭೩ನೆಯ (೧೯೯೨) ತಿದ್ದುಪಡಿಯಾದ ಒಂದು ವರ್ಷದೊಳಗಾಗಿ ಮತ್ತು ಆನಂತರ ಪ್ರತಿ ಐದು ವರ್ಗಗಳ ಅಂತ್ಯದಲ್ಲಿ ರಾಜ್ಯ ಹಣಕಾಸಿನ ಸ್ಥಿತಿಗತಿಯನ್ನು ಮತ್ತು ಸ್ಥಳೀಯ ಸಂಸ್ಥೆಗಳ ಹಣಕಾಸು ಸ್ಥಿತಿಗತಿಯನ್ನು ಪರಾಮರ್ಶಿಸಲು ರಾಜ್ಯಪಾಲರು ರಾಜ್ಯ ಹಣಕಾಸು ಆಯೋಗವನ್ನು ರಚಿಸುತ್ತಾರೆ.

**ಕರ್ನಾಟಕದ ರಾಜ್ಯ ಹಣಕಾಸು ಆಯೋಗಗಳ ರಚನೆ**

ಕರ್ನಾಟಕದ ರಾಜ್ಯಪಾಲರು ಇದುವರೆಗೆ ನಾಲ್ಕು ರಾಜ್ಯ ಹಣಕಾಸು ಆಯೋಗಗಳನ್ನು ರಚಿಸಿದ್ದಾರೆ.

**ಕೋಷ್ಟಕ: ೬ ರಾಜ್ಯದಲ್ಲಿ ಈ ವರೆಗೆ ಆಯೋಗಗಳನ್ನು ರಚಿಸಲಾಗಿದೆ, ಅದರ ಅಧ್ಯಕ್ಷರುಗಳ ವಿವರ:**

| **ಕ್ರ.ಸಂ** | **ಆಯೋಗ** | **ರಚಿಸಿದ ವರ್ಷ** | **ಅಧ್ಯಕ್ಷರು** |
|---|---|---|---|
| ೧. | ೧ನೇ ಹಣಕಾಸು ಆಯೋಗ | ೧೯೯೩ | ಡಾ.ಜೆ.ತಿಮ್ಮಯ್ಯ |
| ೨. | ೨ನೇ ಹಣಕಾಸು ಆಯೋಗ | ೨೦೦೦ | ಕೆ.ಪಿ.ಸುರೇಂದ್ರನಾಥ |
| ೩. | ೩ನೇ ಹಣಕಾಸು ಆಯೋಗ | ೨೦೦೮ | ಎ.ಜಿ.ಕೋಡ್ಗಿ |
| ೪. | ೪ನೇ ಹಣಕಾಸು ಆಯೋಗ | ೨೦೧೫ | ಸಿ.ಜೆ. ಚಿನ್ನಸ್ವಾಮಿ |

(ಮೂಲ: ರಾಜ್ಯ ಹಣಕಾಸು ಆಯೋಗ ಕರ್ನಾಟಕ ಸರ್ಕಾರ)

**ಮೊದಲನೆಯ ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳು**

ಮೊದಲನೆಯ ರಾಜ್ಯ ಹಣಕಾಸು ಆಯೋಗವು ರಾಜ್ಯದ 'ಒಕ್ಕೂಟ ವಿತ್ತೀಯ ಸಂಬಂಧ'ಗಳನ್ನು ಹಾಗೂ ಕೇಂದ್ರದಲ್ಲಿ ಪ್ರಚಲಿತವಿರುವ ಪದ್ಧತಿಯನ್ನು ಕುರಿತು ವಿಸ್ತ್ರತವಾಗಿ ಪುನರಾವಲೋಕನ ಮಾಡಿದ ನಂತರ, ಸ್ಥಳೀಯ ಸಂಸ್ಥೆಗಳಿಗೆ ರಾಜಸ್ವವನ್ನು ವರ್ಗಾವಣೆ ಮಾಡುವುದಕ್ಕೆ ಕೊರತೆಗಳನ್ನು ತುಂಬಿದ ವಿಧಾನವು ಪ್ರಸ್ತುತ ಸ್ಥಿತಿಗೆ ಸೂಕ್ತವಲ್ಲ ಎಂದು

ನಿರ್ಣಯಿಸಿತು. ಇದಕ್ಕೆ ಬದಲಾಗಿ ಆಯೋಗವು ತಾನು ವ್ಯವಹಾರಿಕ ಪ್ರಮಾಣಕ ವಿಧಾನ (ಪ್ರಾಗ್ಮ್ಯಾಟಿಕ್ ನಾರ್ಮೆಟೀವ್ ಅಪ್ರೋಚ್) ಎಂದು ಕರೆಯುವಂತಹ ವಿಧಾನವನ್ನು ಅಳವಡಿಸಿಕೊಂಡಿತು ಮತ್ತು ಸ್ಥಳೀಯ ಸಂಸ್ಥೆಗಳ ಮೂಲ ಉದ್ದೇಶಗಳಾದ ಮೂಲ ಸೇವೆಗಳನ್ನು ಈಡೇರಿಸುವುದಕ್ಕೆ ಈ ವಿಧಾನ ಅಗತ್ಯ ಎಂದು ಅಭಿಪ್ರಾಯಪಟ್ಟಿತು. "ಯಾವುದೇ ವ್ಯಕ್ತಿ ಕರ್ನಾಟಕದಲ್ಲಿ ಯಾವುದೇ ಭಾಗದಲ್ಲಿ ನೆಲೆಸಿದ್ದರೂ ಅವರಿಗೆ ಕನಿಷ್ಠ ಮಟ್ಟದ ಅಗತ್ಯ ಸಾರ್ವಜನಿಕ ನಾಗರಿಕ ಸೇವೆಗಳು ಸಿಗುವಂತಾಗಬೇಕು" ಎಂಬುದೇ ಇಲ್ಲಿನ ತತ್ವ. ರಾಜ್ಯದಿಂದ ಸ್ಥಳೀಯ ಸಂಸ್ಥೆಗಳಿಗೆ ನಿಧಿಗಳ ಹಂಚಿಕೆಯನ್ನು ನಿರ್ಣಯಿಸುವುದಕ್ಕೆ ಆಯೋಗವು ಬಳಸಿಕೊಂಡ ಅಳತೆಗೋಲು ಇದೇ ಆಗಿದೆ.

**ಎರಡನೆಯ ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳು**

ಸ್ಥಳೀಯ ಸಂಸ್ಥೆಗಳಿಗೆ ನಿಧಿಗಳ ಹಂಚಿಕೆಗೆ ಸಂಬಂಧಿಸಿದಂತೆ ಎರಡನೆಯ ರಾಜ್ಯ ಹಣಕಾಸು ಆಯೋಗವು ಉದ್ದರಿಯೇತರ ಒಟ್ಟು ಸ್ವಂತ ರಾಜಸ್ವ ಸ್ವೀಕೃತಿ ಪರಿಕಲ್ಪನೆಯನ್ನೇ ಮುಂದುವರಿಸಿತು. ಆದರೆ ರಾಜ್ಯ ಸರ್ಕಾರವು ಅದನ್ನು ಉದ್ದರಿಯೇತರ ನಿವ್ವಳ ಸ್ವಂತ ರಾಜಸ್ವ ಸ್ವೀಕೃತಿಗಳಿಗೆ ಪರಿವರ್ತಿಸಿತು ಮತ್ತು ಅದನ್ನು ಅನುಷ್ಠಾನಗೊಳಿಸಿತು. ಆಯೋಗವು ಪ.ಜಾ. ಮತ್ತು ಪ.ಪಂ. ಜನಸಂಖ್ಯೆಯ ಪ್ರಮಾಣವನ್ನು ಒಂದು ಸೂಚಿಯನ್ನಾಗಿ ಸೇರಿಸಿತು ಮತ್ತು ಒಂದನೆಯ ರಾಜ್ಯ ಹಣಕಾಸು ಆಯೋಗವು ಅಳವಡಿಸಿಕೊಂಡಿದ್ದ ಪ್ರತಿ ಚ. ಕಿ.ಮೀ.ಗೆ ರಸ್ತೆಯ ಉದ್ದ ಎಂಬ ಸೂಚಿಯನ್ನು ಕೈ ಬಿಟ್ಟಿತು. ದತ್ತಾಂಶವು ವಿಶ್ವಸನೀಯವಾಗಿಲ್ಲ ಎಂಬ ಕಾರಣಕ್ಕೆ ಎರಡನೆಯ ರಾಜ್ಯ ಹಣಕಾಸು ಆಯೋಗವು ಬಡತನದ ರೇಖೆಯ ಕೆಳಗಿನ ಜನಸಂಖ್ಯೆ ಹಾಗೂ ತಲಾ ಆದಾಯದ ಅಂಶಗಳನ್ನು ಸೂಚಿಗಳಾಗಿ ಪರಿಗಣನೆಗೆ ತೆಗೆದುಕೊಳ್ಳಲಿಲ್ಲ. ಪ.ಜಾ./ಪ.ಪಂ. ಜನಸಂಖ್ಯೆಯನ್ನು ಸಮರ್ಥಿಸಬಹುದಾದ ಸೂಚಿಯಾಗಿ ಪರಿಗಣಿಸಿತು. ಹಿಂದುಳಿದಿರುವಿಕೆ ಎಂಬುದನ್ನು ಪ್ರತಿನಿಧಿಸುವ ಅನಕ್ಷರಸ್ಥರ ಪ್ರಮಾಣಕ್ಕೆ ಶೇ. ೧೫ ಪ.ಜಾ./ಪ.ಪಂ ಜನಸಂಖ್ಯೆಗೆ ಶೇ. ೧೫ ಮತ್ತು ಪ್ರತಿ ಆಸ್ಪತ್ರೆ ಹಾಸಿಗೆಗೆ ಜನರ ಪ್ರಮಾಣಕ್ಕೆ ಶೇ. ೧೦ ಆದ್ಯತಾ ತೂಕಗಳನ್ನು ನೀಡಿತು. ಇದರ ಒಟ್ಟು ಪ್ರಮಾಣ ಶೇ. ೪೦ ರಷ್ಟಾಗುತ್ತದೆ. ಬಡತನದ ರೇಖೆಗಿಂತ ಕೆಳಗಿನ ಜನಸಂಖ್ಯೆ ಹಾಗೂ ತಲಾ ಆದಾಯಗಳನ್ನು ಸೂಚಿಗಳಾಗಿ ಬಳಸಬಹುದೇ ಎಂಬ ಬಗ್ಗೆಯೂ ನಾಲ್ಕನೇ ರಾಜ್ಯ ಹಣಕಾಸು ಆಯೋಗ, ಕರ್ನಾಟಕ ೨೨ ಆಯೋಗವು ಪರಿಶೀಲಿಸಿತು. ಆದರೆ ಗ್ರಾಮೀಣ ಮತ್ತು ನಗರ ವಿಭಾಗಗಳ ನಡುವಿನ ವರ್ಗೀಕೃತ ದತ್ತಾಂಶದ ಲಭ್ಯತೆಯ ಮಿತಿಯಿಂದಾಗಿ ಈ ಎರಡು ಸೂಚಿಗಳನ್ನು ಬಳಸಲಿಲ್ಲ.

ಹನ್ನೊಂದನೇಯ ಹಣಕಾಸು ಆಯೋಗದ ಅನುದಾನದ ಪರಸ್ಪರ ಹಂಚಿಕೆಗಾಗಿ ಎರಡನೇಯ ರಾಜ್ಯ ಹಣಕಾಸು ಆಯೋಗವು ಒಂದು ಹಂಚಿಕೆ ಸೂತ್ರವನ್ನು ರೂಪಿಸಿತು. ಆದರೆ ವಾಸ್ತವ ಆಚರಣೆಯಲ್ಲಿ ಈ ಅನುದಾನವನ್ನು ಕರ್ನಾಟಕ ಸರ್ಕಾರವು ರಾಜ್ಯ

ಹಣಕಾಸು ಆಯೋಗದ ಅನುದಾನದ ಒಂದು ಭಾಗವೆಂದು ಲೆಕ್ಕ ಹಾಕಿದೆ. ಇದನ್ನು ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸಿನ ವಿರುದ್ಧ ಮಾಡಲಾಗಿದೆ. ಯೋಜನೇತರ ವೆಚ್ಚದಲ್ಲಿನ ಬಹುತೇಕ ಹೆಚ್ಚಳಕ್ಕೆ ವೇತನ ಹಾಗು ಭತ್ಯೆಗಳ ರೂಪದಲ್ಲಿ ಉದ್ಯೋಗಿಗಳಿಗೆ ನೀಡಲಾದ ವೇತನಬಡ್ತಿಯ ಸೌಲಭ್ಯಗಳು ಕಾರಣವಾಗಿವೆ ಎಂದು ಆಯೋಗವು ಅಭಿಪ್ರಾಯಪಟ್ಟಿದೆ.

**ಮೂರನೇಯ ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳು**

ಮೊದಲನೇಯ ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳ ಪ್ರಕಾರ ಪಂಚಾಯತ್‌ರಾಜ್ ಸಂಸ್ಥೆಗಳ ಮತ್ತು ನಗರ ಸ್ಥಳೀಯ ಸಂಸ್ಥೆಗಳ ಸಾಪೇಕ್ಷ ಪಾಲುಗಳು ಅನುಕ್ರಮವಾಗಿ ೮೦:೧೫ ಅನುಪಾತದಲ್ಲಿದ್ದವು. ಎರಡನೇಯ ಆಯೋಗವು ಅದನ್ನು ೮೦:೨೦ಕ್ಕೆ ಬದಲಾಯಿಸಿತು. ಮೂರನೆಯ ರಾಜ್ಯ ಹಣಕಾಸು ಆಯೋಗವು ಉದ್ದರಿಯೇತರ ನಿವ್ವಳ ಸ್ವಂತ ರಾಜಸ್ವ ಸ್ವೀಕೃತಿಗಳಲ್ಲಿ ಪಂಚಾಯತ್‌ರಾಜ್ ಸಂಸ್ಥೆ ಮತ್ತು ನಗರ ಸ್ಥಳೀಯ ಸಂಸ್ಥೆಗಳ ನಡುವಿನ ಅನುಪಾತವು ಕ್ರಮವಾಗಿ ೭೦:೩೦ ಆಗಿರತಕ್ಕದ್ದು ಎಂದು ಶಿಫಾರಸ್ಸು ಮಾಡಿತು. ನಗರ ಜನಸಂಖ್ಯಾ ಬೆಳವಣಿಗೆಯ ದರವು ಅಧಿಕವಾಗಿರುವುದರಿಂದ ನಗರ ಸ್ಥಳೀಯ ಸಂಸ್ಥೆಗಳ ಪಾಲಿನಲ್ಲಿ ಹೆಚ್ಚಳ ಮಾಡಿರುವುದು ಸಮರ್ಥನೀಯವಾಗಿದೆ. ಎರಡನೆಯ ರಾಜ್ಯ ಹಣಕಾಸು ಆಯೋಗವು ಅಳವಡಿಸಿಕೊಂಡ ಸೂಚಿಗಳ ಜೊತೆಗೆ ಮೂರನೆಯ ರಾಜ್ಯ ಹಣಕಾಸು ಆಯೋಗ 'ಜನಸಾಂದ್ರತೆ' ಎಂಬ ಇನ್ನೊಂದು ಸೂಚಿಯನ್ನು ಅಳವಡಿಸಿಕೊಂಡಿತು. ಸೂಚಿಗಳು ಹಾಗು ನಿಗದಿಪಡಿಸಲಾದ ಆದ್ಯತಾ ತೂಕಗಳನ್ನು ಕೊಡಲಾಗಿದೆ. ಮೂರನೆಯ ರಾಜ್ಯ ಹಣಕಾಸು ಆಯೋಗವು ೨೦೦೮ರ ಡಿಸೆಂಬರ್‌ನಲ್ಲಿ ತನ್ನ ವರದಿಯನ್ನು ಸಲ್ಲಿಸಿದ ತಕ್ಷಣ ಸರ್ಕಾರವು ಮೂರನೆಯ ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳ ಅನುಷ್ಠಾನವನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಡಿಪಿಎಆರ್ ೭೨ ಶಿಸನೇ ೨೦೦೯ ಬೆಂಗಳೂರು, ದಿನಾಂಕ ೩.೭.೨೦೦೯ (ಅನುಬಂಧ)ರ ಮೂಲಕ ಒಂದು ಅನುಷ್ಠಾನ ಸಮಿತಿಯನ್ನು ರಚಿಸಿತು. ಮೂರನೆಯ ರಾಜ್ಯ ಹಣಕಾಸು ಆಯೋಗದ ಅಧ್ಯಕ್ಷರು ಹಾಗೂ ಸದಸ್ಯರೂ ಸಹ ಅನುಷ್ಠಾನ ಸಮಿತಿಯಲ್ಲಿದ್ದರು.

ಮೂರನೆಯ ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳನ್ನು ಕುರಿತಂತೆ ಸರ್ಕಾರದ ನಿರ್ಧಾರವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ–೧ ಜೆಡ್‌ಪಿಎ ೨೦೦೯, ದಿನಾಂಕ ೩೧.೧೦.೨೦೧೧ರ ಮೂಲಕ ಪ್ರಕಟಿಸಲಾಯಿತು. ಪ್ರಸ್ತಾವನೆಯಲ್ಲಿ ಇತರ ವಿಷಯಗಳ ಜೊತೆಗೆ ಹೀಗೆ ಹೇಳಲಾಗಿದೆ: ಮೂರನೇಯ ರಾಜ್ಯ ಹಣಕಾಸು ಆಯೋಗದ ಪರಿಶೀಲನಾರ್ಹ ಅಂಶಗಳಲ್ಲಿ ರಾಜ್ಯ ಸರ್ಕಾರದ ಜವಾಬ್ದಾರಿಗಳನ್ನು (ಅಭಿವೃದ್ಧಿ ಹಾಗೂ ನಿಯಂತ್ರಣಗಳೆರಡನ್ನು)

ಸೂಕ್ತವಾಗಿ ಪರಿಗಣಿಸಬೇಕೆಂದು ಕಡ್ಡಾಯ ಪಡಿಸಿದ್ದರೂ ಸಹ ಅದು ಅವುಗಳನ್ನು ಸೂಕ್ತವಾಗಿ ಪರಿಗಣಿಸಿಲ್ಲ ಎಂಬುದು ಈ ವಿಶ್ಲೇಷಣೆಯಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

**ನಾಲ್ಕನೆಯ ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳು**

ಆಯೋಗವು ಜಿಲ್ಲಾ ಪಂಚಾಯಿತಿಗಳು, ತಾಲ್ಲೂಕು ಪಂಚಾಯಿತಿಗಳು, ಗ್ರಾಮ ಪಂಚಾಯಿತಿಗಳು, ನಗರಪಾಲಿಕೆಗಳು, ನಗರಸಭೆಗಳು, ಪುರಸಭೆಗಳು ಹಾಗೂ ಪಟ್ಟಣ ಪಂಚಾಯಿತಿಗಳ ಹಣಕಾಸಿನ ಸ್ಥಿತಿಗಳನ್ನು ವಿಮರ್ಶಿಸಿ ಈ ಕೆಳಕಂಡ ಅಂಶಗಳಿಗೆ ಸಂಬಂಧಿಸಿದಂತೆ ರಾಜ್ಯಪಾಲರಿಗೆ ಶಿಫಾರಸ್ಸುಗಳನ್ನು ಮಾಡಬೇಕು.

**ಕೆಳಕಂಡ ಸಂಗತಿಗಳನ್ನು ನಿರ್ವಹಿಸಲು ಅಗತ್ಯವಾದ ಮೂಲಸೂತ್ರಗಳನ್ನು ನಿರ್ಧರಿಸುವುದು**

I. ರಾಜ್ಯ ಸರ್ಕಾರವು ವಿಧಿಸುವ ತೆರಿಗೆಗಳು, ಸುಂಕಗಳು, ಜಕಾತಿ ಮತ್ತು ಶುಲ್ಕಗಳಿಂದ ಪ್ರಾಪ್ತವಾಗುವ ನಿವ್ವಳ ರಾಜಸ್ವ ಸ್ವೀಕೃತಿಯನ್ನು ರಾಜ್ಯ ಸರ್ಕಾರ ಮತ್ತು ಜಿಲ್ಲಾ ಪಂಚಾಯಿತಿಗಳು, ತಾಲ್ಲೂಕು ಪಂಚಾಯಿತಿಗಳು, ಗ್ರಾಮ ಪಂಚಾಯಿತಿಗಳು ಹಾಗೂ ನಗರಪಾಲಿಕೆಗಳು, ನಗರಸಭೆಗಳು, ಪುರಸಭೆಗಳು ಮತ್ತು ಪಟ್ಟಣ ಪಂಚಾಯಿತಿಗಳ ನಡುವೆ ವಿತರಿಸಲು ಹಾಗೂ ಜಿಲ್ಲಾ ಪಂಚಾಯಿತಿಗಳು, ತಾಲ್ಲೂಕು ಪಂಚಾಯಿತಿಗಳು, ಗ್ರಾಮ ಪಂಚಾಯಿತಿಗಳು ಹಾಗೂ ನಗರಪಾಲಿಕೆಗಳು, ನಗರಸಭೆಗಳು, ಪುರಸಭೆಗಳು ಮತ್ತು ಪಟ್ಟಣ ಪಂಚಾಯಿತಿಗಳ ನಡುವೆ ಸಮರ್ಪಕ ಹಂಚುವಿಕೆಯನ್ನು ನಿರ್ಧರಿಸುವ ನಿಯಮಗಳನ್ನು ರೂಪಿಸುವುದು.

II. ಜಿಲ್ಲಾ ಪಂಚಾಯಿತಿಗಳು, ತಾಲ್ಲೂಕು ಪಂಚಾಯಿತಿಗಳು, ಗ್ರಾಮ ಪಂಚಾಯಿತಿಗಳು ಹಾಗೂ ನಗರಪಾಲಿಕೆಗಳು, ನಗರಸಭೆಗಳು, ಪುರಸಭೆಗಳು ಮತ್ತು ಪಟ್ಟಣ ಪಂಚಾಯಿತಿಗಳು ವಿಧಿಸಬಹುದಾದ ಅಥವ ಸಂಗ್ರಹಿಸಿಕೊಳ್ಳಬಹುದಾದ ತೆರಿಗೆಗಳು, ಸುಂಕಗಳು, ಜಕಾತಿ ಮತ್ತು ಶುಲ್ಕಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರೂಪಿಸುವುದು.

III. ರಾಜ್ಯದ ಸಂಚಿತ ನಿಧಿಯಿಂದ ಜಿಲ್ಲಾ ಪಂಚಾಯಿತಿಗಳು, ತಾಲ್ಲೂಕು ಪಂಚಾಯಿತಿಗಳು, ಗ್ರಾಮ ಪಂಚಾಯತಿಗಳು ಹಾಗೂ ನಗರಪಾಲಿಕೆಗಳು, ನಗರಸಭೆಗಳು, ಪುರಸಭೆಗಳು ಮತ್ತು ಪಟ್ಟಣ ಪಂಚಾಯತಿಗಳಿಗೆ ಅನುದಾನವನ್ನು ನೀಡುವುದಕ್ಕೆ ನಿಯಮಗಳನ್ನು ರೂಪಿಸುವುದು.

ಜಿಲ್ಲಾ ಪಂಚಾಯಿತಿಗಳು, ತಾಲ್ಲೂಕು ಪಂಚಾಯಿತಿಗಳು, ಗ್ರಾಮ ಪಂಚಾಯಿತಿಗಳು ಹಾಗೂ ನಗರಪಾಲಿಕೆಗಳು, ನಗರಸಭೆಗಳು, ಪುರಸಭೆಗಳು ಮತ್ತು ಪಟ್ಟಣ ಪಂಚಾಯತಿಗಳ ಹಣಕಾಸು ಸ್ಥಿತಿಗತಿಯನ್ನು ಉತ್ತಮಪಡಿಸಲು ಅಗತ್ಯವಾದ ಸುಧಾರಣಾ ಕ್ರಮಗಳನ್ನು ನಿರ್ಧರಿಸುವುದು.

**ಇವೆಲ್ಲವುಗಳ ಜೊತೆಗೆ ಆಯೋಗವು:**

I. ಸ್ಥಳೀಯ ಸಂಸ್ಥೆಗಳು ತಮ್ಮ ವೆಚ್ಚವನ್ನು ಭರಿಸುವುದಕ್ಕೆ ಅವುಗಳಿಗೆ ಲಭ್ಯವಿರುವ ಸಂಪನ್ಮೂಲವನ್ನು ಯಾವ ರೀತಿಯಲ್ಲಿ ಮತ್ತು ಯಾವ ಪ್ರಮಾಣದಲ್ಲಿ ಉತ್ತಮವಾಗಿ ಬಳಸಿಕೊಳ್ಳಬಹುದು ಎಂಬುದನ್ನು ಪರಿಶೀಲಿಸುವುದು ಮತ್ತು ಅದಕ್ಕೆ ಸಂಬಂಧಿಸಿದಂತೆ ಕ್ರಮಗಳನ್ನು ರೂಪಿಸುವುದು;

II. ಕಾಲಕಾಲಕ್ಕೆ ರಾಜ್ಯ ಸರ್ಕಾರವು ಸ್ಥಳೀಯ ಸಂಸ್ಥೆಗಳಿಗೆ ಒದಗಿಸುವ ಸಾಲ ಮತ್ತು ಮುಂಗಡಗಳ ಮರುಪಾವತಿ ಕುರಿತಂತೆ ಕೂಲಂಕುಷವಾಗಿ ವಿಶ್ಲೇಷಿಸುವುದು, ಸರ್ಕಾರದ ಬಾಕಿಯನ್ನು ಮರುಪಾವತಿ ಮಾಡಲು ಸೂಕ್ತ ಕ್ರಮಗಳನ್ನು ಶಿಫಾರಸ್ಸು ಮಾಡುವುದು ಹಾಗೂ ರಾಜ್ಯ ಸರ್ಕಾರವು ಮುಂದೆ ಸಂಪನ್ಮೂಲಗಳ ವರ್ಗಾವಣೆ ಸಂದರ್ಭದಲ್ಲಿ ಬಾಕಿಗಳನ್ನು ಹೊಂದಾಣಿಕೆ ಮಾಡಿಕೊಳ್ಳಬಹುದಾದ ಅವಕಾಶಗಳನ್ನು ಪರಿಶೀಲಿಸುವುದು.

ಈ ಶಿಫಾರಸ್ಸುಗಳನ್ನು ಮಾಡುವಾಗ ಮುಖ್ಯವಾಗಿ ರಾಜ್ಯ ಸರ್ಕಾರದ ಸಂಪನ್ಮೂಲಗಳು ಮತ್ತು ಅದಕ್ಕೆ ಸಂಬಂಧಿಸಿದಂತೆ ನಾಗರಿಕ ಆಡಳಿತ, ಸಾಲದ ಮೇಲಿನ ಬಡ್ಡಿ ಪಾವತಿ, ಅಭಿವೃದ್ಧಿ ಮತ್ತು ಇತರೆ ಬದ್ಧತೆಯ ಖರ್ಚುಗಳಿಗೆ ಸಂಬಂಧಿಸಿದ ಸಂಗತಿಗಳ ಬೇಡಿಕೆಗಳನ್ನು ಆಯೋಗವು ಗಮನದಲ್ಲಿಟ್ಟುಕೊಳ್ಳಬೇಕು.

**ರಾಜ್ಯ ಹಣಕಾಸು ಆಯೋಗಗಳ ಶಿಫಾರಸ್ಸುಗಳ ಅನುಷ್ಠಾನದ ಇತಿ-ಮಿತಿಗಳು**

ಶಿಫಾರಸ್ಸುಗಳ ಅನುಷ್ಠಾನದ ಸ್ಥಿತಿಗತಿ ಕುರಿತಂತೆ ಒಂದು ವಿಮರ್ಶಾತ್ಮಕ ವಿಶ್ಲೇಷಣೆ ನಡೆಸಿದಾಗ ಕರ್ನಾಟಕದ ಹಿಂದಿನ ರಾಜ್ಯ ಹಣಕಾಸು ಆಯೋಗಗಳೂ ಒಂದು ಸಮಗ್ರವಾದ ಹಾಗೂ ಸರಳವಾದ ವಿತ್ತೀಯ ಹಂಚಿಕೆಯ ಪ್ರಯತ್ನವನ್ನು ಮಾಡಿದ್ದವು ಎಂದು ತಿಳಿಯುತ್ತದೆ. ವಾಸ್ತವವಾಗಿ ಅನುಷ್ಠಾನಗೊಳಿಸುವಾಗ ಅನೇಕ ಮಿತಿಗಳು ಎದುರಾಗುತ್ತವೆ. ಇದರಲ್ಲಿ ಪ್ರಮುಖವಾದವುಗಳೆಂದರೆ

೧) ಪಂಚಾಯತ್‌ರಾಜ್ ಸಂಸ್ಥೆ ಹಾಗೂ ನಗರ ಸ್ಥಳೀಯ ಸಂಸ್ಥೆಗಳು ನಿರ್ವಹಿಸಿಕೊಂಡು ಬಂದಿರುವ ದತ್ತಾಂಶದಲ್ಲಿ ಒಂದು ಏಕರೂಪತೆಯಿಲ್ಲ ಹಾಗೂ ಗುಣಮಟ್ಟದ ಕೊರತೆಯಿಂದ ಕೂಡಿದೆ. ಹಂಚಿಕೆಯ ಸೂತ್ರ ಹಾಗು ಶಿಫಾರಸ್ಸುಗಳು ಅನಿವಾರ್ಯವಾಗಿ ಇಂತಹ ದತ್ತಾಂಶವನ್ನೇ ಅವಲಂಬಿಸಬೇಕಾಗಿದೆ.

೨) ಅಳವಡಿಸಿಕೊಳ್ಳಲಾದ ಸೂಚಿಗಳು ಹಾಗೂ ನೀಡಲಾದ ಆದ್ಯತಾ ತೂಕಗಳು ಸ್ಥಳೀಯ ಸಂಸ್ಥೆಗಳನ್ನು ಸೂಕ್ತವಾಗಿ ಪ್ರತಿನಿಧಿಸುತ್ತಿಲ್ಲ.

೩) ಪ್ರತಿಯೊಂದು ರಾಜ್ಯ ಹಣಕಾಸು ಆಯೋಗವು ತನ್ನದೇ ಆದ ವಿಧಾನವನ್ನು ಅನುಸರಿಸಿಕೊಂಡು ಬಂದ ಕಾರಣ ಅವುಗಳ ಹಂಚಿಕೆಯ ವಿಧಾನದಲ್ಲಿ ಒಂದು ನಿರಂತರತೆ ಇಲ್ಲ.

೪) ಹಿಂದಿನ ರಾಜ್ಯ ಹಣಕಾಸು ಆಯೋಗಗಳು ಮಾಡಿದ ಶಿಫಾರಸ್ಸುಗಳ ಬಗ್ಗೆ ಕೈಗೊಂಡ ಕ್ರಮಗಳ ವರದಿಯನ್ನು ಸರ್ಕಾರವು ಸಮಗ್ರವಾಗಿ ಹೊರತಂದಿಲ್ಲ. ಅದಕ್ಕೆ ಬದಲು ಸರ್ಕಾರವು ಆದೇಶಗಳು ಅಥವಾ ಅಧಿಸೂಚನೆಗಳನ್ನು ಮಾತ್ರ ನೀಡಿದೆ

೫) ಕೆಲವೊಂದು ಕಾರಣಗಳಿಗಾಗಿ ರಾಜ್ಯ ಸರ್ಕಾರವು ಆಯೋಗಗಳ ಶಿಫಾರಸ್ಸುಗಳನ್ನು ಪೂರ್ಣವಾಗಿ ಅನುಷ್ಠಾನಕ್ಕೆ ತಂದಿಲ್ಲ.

ಇದಕ್ಕೆ ಕೆಲವು ನಿದರ್ಶನಗಳನ್ನು ಕೊಡುವುದಾದರೆ ಒಂದನೆಯ ರಾಜ್ಯ ಹಣಕಾಸು ಆಯೋಗವು ಶಿಫಾರಸ್ಸು ಮಾಡಿದ ಪ್ರಮಾಣಕ ವಿಧಾನ(ನಾರ್ಮೆಟೀವ್ ಅಪ್ರೋಚ್)ವನ್ನು ಅನುಷ್ಠಾನಕ್ಕೆ ತರದಿರಲು ಕಾರಣವೇನೆಂದರೆ ಅದಕ್ಕೆ ಬಹು ದೊಡ್ಡ ಪ್ರಮಾಣದ ಹಣಕಾಸಿನ ಬೆಂಬಲ ಅಗತ್ಯವಾಗಿದ್ದುದರ ಜೊತೆಗೆ ಪ್ರಮಾಣಕ ಅಗತ್ಯಗಳ ಅಂದಾಜಿನಲ್ಲಿಯೇ ಕೆಲವೊಂದು ಪರಿಮಿತಿಗಳಿದ್ದವು. ಜಿಲ್ಲಾ ತಾಲ್ಲೂಕು ಮತ್ತು ಗ್ರಾಮ ಪಂಚಾಯಿತಿಗಳಿಗೆ ವಿತ್ತೀಯ ಹಂಚಿಕೆಗಾಗಿ ಅದು ಯೋಜನೆ ಹಾಗೂ ಯೋಜನೇತರ ಎರಡನ್ನೂ ಸಂಯೋಜಿಸುವಂತೆ ಪ್ರಸ್ತಾಪಿಸಿತ್ತು.

**೬.೫.ಪಂಚಾಯತ್ ರಾಜ್ ಸಂಸ್ಥೆಗಳ ಹಣಕಾಸು ಸ್ಥಿತಿಗತಿಯ ಮೌಲ್ಯಮಾಪನ**

**ಪಂಚಾಯಿತಿಗಳ ಹಣಕಾಸು ಸ್ಥಿತಿಗತಿ**

ಪಂಚಾಯತ್ ರಾಜ್ ಸಂಸ್ಥೆಗಳಿಗೆ ಹಂಚಿಕೆ ಮಾಡಲಾದ ಕಾರ್ಯಗಳು ಅರ್ಥ ಪೂರ್ಣ ಮತ್ತು ಪರಿಣಾಮಕಾರಿಯಾಗಬೇಕಾದರೆ ಅವುಗಳಿಗೆ ಅಗತ್ಯವಿರುವ ಹಣಕಾಸಿನ ಬೆಂಬಲವನ್ನು ಒದಗಿಸಬೇಕಾಗುತ್ತದೆ. ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳನ್ನು ಆಧರಿಸಿ ಸದರಿ ನಿಧಿಗಳ ಹಂಚಿಕೆಯು ನಿರ್ಧಾರವಾಗಬೇಕೆಂದು ಸಾಂವಿಧಾನಿಕವಾಗಿ ಕಡ್ಡಾಯಗೊಳಿಸಲಾಗಿದೆ. ರಾಜ್ಯದಲ್ಲಿ ೨೦೧೬ರ ಫೆಬ್ರುವರಿ ೨೫ರಂದು ಜಾರಿಗೆ ಬಂದ ಕರ್ನಾಟಕ ಗ್ರಾಮಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ ೧೯೯೩(೨೦೧೫)ದ ಒಂದು ಪ್ರಮುಖ ತಿದ್ದುಪಡಿ ಏನೆಂದರೆ, ಗ್ರಾಮ ಪಂಚಾಯಿತಿಗಳು ವಿಧಿಸುವ ತೆರಿಗೆ, ಪರಿಷ್ಕರಣೆ ಹಾಗೂ ತೆರಿಗೆಗಳ ಮೌಲ್ಯಮಾಪನದ ಕಾರ್ಯವಿಧಾನ, ಶುಲ್ಕ, ಇತ್ಯಾದಿಗಳ ಬಗ್ಗೆ ಅಧಿನಿಯಮದಲ್ಲಿಯೇ ನಿರ್ದಿಷ್ಟ ಉಪಬಂಧಗಳನ್ನು ಇರಬೇಕು ಎಂಬುದಾಗಿದೆ. ತೆರಿಗೆಯೇತರ ರಾಜಸ್ವ ದರಗಳನ್ನೂ ಸಹ ನಿರ್ದಿಷ್ಟವಾಗಿ ನಿಗದಿಪಡಿಸಲಾಗಿದೆ. ಕರ್ನಾಟಕ ಪಂಚಾಯತ್ (ತೆರಿಗೆಗಳು ಮತ್ತು ಶುಲ್ಕಗಳ) ನಿಯಮಗಳು, ೧೯೯೪ರ ೩ನೆಯ ಅಧ್ಯಾಯದಲ್ಲಿರುವ ೪ನೆಯ ಅನುಸೂಚಿಯೊಂದಿಗೆ ಓದಲಾದಂತೆ, ಇದನ್ನು ಅಧಿನಿಯಮದ ೧೯೯ (೧) ನೆಯ ಪ್ರಕರಣದಲ್ಲಿ ನಿರ್ದಿಷ್ಟವಾಗಿ ಸೇರಿಸಲಾಗಿದೆ. ಅಧಿನಿಯಮದ ೧೯೯ ಎ ಪ್ರಕರಣದ ಪ್ರಕಾರ ತೆರಿಗೆಗಳು ಹಾಗೂ ದರಗಳನ್ನು ಎರಡು ವರ್ಗಗಳಿಗೊಮ್ಮೆ ಪರಿಷ್ಕರಿಸಬೇಕು ಮತ್ತು ಇತರ ಶುಲ್ಕ ಇತ್ಯಾದಿಗಳನ್ನು ವರ್ಗಕ್ಕೆ ಒಮ್ಮೆ ಪರಿಕ್ಷರಿಸಬೇಕು. ಇದಲ್ಲದೆ, ಅಧಿನಿಯಮದ ೨೦೦(೬)ನೆಯ ಪ್ರಕರಣದ ಅನ್ವಯ ಭೂಕಂದಾಯದ ಬಾಕಿಯ

ರೂಪದಲ್ಲಿಯೂ ತೆರಿಗೆಗಳನ್ನು ಸಂಗ್ರಹಿಸಬಹುದಾಗಿದೆ. ಈ ಅಧಿನಿಯಮವು ಅತ್ಯಂತ ಸ್ಪಷ್ಟವಾಗಿ ಅನುಸೂಚಿ ೧ರ ಕೆಳಗೆ ಗ್ರಾಮ ಪಂಚಾಯಿತಿಯ ಪ್ರಕಾರ್ಯಗಳನ್ನು, ಅನುಸೂಚಿ ೨ರ ಕೆಳಗೆ ತಾಲ್ಲೂಕು ಪಂಚಾಯಿತಿಯ ಪ್ರಕಾರ್ಯಗಳನ್ನು ಹಾಗೂ ಅನುಸೂಚಿ ೩ರ ಕೆಳಗೆ ಜಿಲ್ಲಾ ಪಂಚಾಯತ್‌ಗಳ ಪ್ರಕಾರ್ಯಗಳನ್ನು ನಿರೂಪಿಸಿದೆ. ಇವುಗಳಿಗೆ ಹಂಚಿಕೆ ಮಾಡಲಾದ ಕಾರ್ಯಗಳಿಗೆ ಅನುಗುಣವಾಗಿ ರಾಜ್ಯ ಹಣಕಾಸು ಆಯೋಗವು ಈ ಸಂಸ್ಥೆಗಳಿಗೆ ಅನುದಾನಗಳನ್ನು ನೀಡುತ್ತದೆ. ಇದರ ಜೊತೆಗೆ, ಕೇಂದ್ರ ಸರ್ಕಾರದಿಂದ ಲಭ್ಯವಿರುವ ಅಥವಾ ರಾಜ್ಯ ಸರ್ಕಾರದಿಂದ ವಹಿಸಲಾದ ನಿರ್ದಿಷ್ಟ ಯೋಜನೆಗಳನ್ನು ಅನುಷ್ಠಾನಗೊಳಿಸುವ ನಿರ್ದಿಷ್ಟ ಉದ್ದೇಶಕ್ಕಾಗಿ ಈ ಸಂಸ್ಥೆಗಳಿಗೆ ಅನುದಾನಗಳು ಲಭ್ಯವಾಗುತ್ತವೆ.

ಗ್ರಾಮ ಪಂಚಾಯಿತಿಗಳ ಸ್ವಂತ ರಾಜಸ್ವ ಮೂಲವು ೨೦೦೫-೦೬ರಲ್ಲಿದ್ದ ರೂ.೧೩೫.೩ ಕೋಟಿಗಳಿಂದ ೨೦೧೫-೧೬ ರಲ್ಲಿ ರೂ.೩೪೧.೮೦ ಕೋಟಿಗಳಿಗೆ ಏರಿದೆ. ಕೊಷ್ಟಕದಲ್ಲಿ ತೋರಿಸಿರುವಂತೆ ೩೯೬೨ ಗ್ರಾಮ ಪಂಚಾಯಿತಿಗಳ ಒಟ್ಟು ಸಂಪನ್ಮೂಲ ರೂ. ೧ ಕೋಟಿಗಳಿಂದ ರೂ.೨ ಕೋಟಿಗಳವರೆಗೆ (ಶೇಕಡಾ ೬೫.೭೯) ವ್ಯಾಪಿಸಿವೆ. ೪೬೮೪ ಗ್ರಾಮ ಪಂಚಾಯಿತಿಗಳ ಸ್ವಂತ ರಾಜಸ್ವ ಮೂಲವು (ಶೇಕಡಾ ೭೭.೭೮) ರೂ. ೧ ಲಕ್ಷದಿಂದ ರೂ.೧೦ ಲಕ್ಷದವರೆಗೆ ವ್ಯಾಪಿಸಿವೆ.

**ಕೊಷ್ಟಕ:೭ ಕರ್ನಾಟಕದ ೩೦ ಜಿಲ್ಲೆಗಳ ರಾಜಸ್ವದ ಬೇಡಿಕೆ, ಸಂಗ್ರಹಣೆ ಹಾಗೂ ೨೦೧೩-೧೭ (ರೂ. ಕೋಟಿಗಳಲ್ಲಿ)**

| ವರ್ಷ | ಆರಂಭದ ಶಿಲ್ಕು | | ಈಗಿನ ಬೇಡಿಕೆ | ಒಟ್ಟು ಬೇಡಿಕೆ | ಸಂಗ್ರಹಣೆ | ಶಿಲ್ಕು | ಒಟ್ಟು ಬೇಡಿಕೆಗೆ ಪ್ರತಿಯಾಗಿ ಸಂಗ್ರಹಣೆಯ ಶೇಕಡಾವಾರು |
|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ |
| ೧. | ೨೦೧೩-೧೪ | ೯೧೯.೭೦ | ೩೭೭೧೬ | ೧೨೯೬೮೭ | ೨೪೩.೭೧ | ೧೦೫೩೧೫ | ೧೮.೭೯ |
| ೨. | ೨೦೧೪-೧೫ | ೯೬೮.೦೫ | ೪೦೬೨೨ | ೧೩೭೪.೨೭ | ೩೦೪.೭೦ | ೧೦೬೯.೫೬ | ೨೨.೧೭ |
| ೩ | ೨೦೧೫-೧೬ | ೧೦೨೬.೧೯ | ೪೨೨.೯೦ | ೧೪೪೯.೦೯ | ೨೯೭೭೫ | ೧೧೪೫.೫೦ | ೨೦.೫೪ |
| ೪. | ೨೦೧೬-೧೭ | ೧೧೪೯.೪೭ | ೪೬೨.೭೮ | ೧೬೧೨.೨೫ | ೨೯೨.೩೬ | ೧೩೧೯.೮೯೦ | ೧೮.೧೩ |

ಮೂಲ: ದತ್ತಾಂಶ ವಿಶ್ಲೇಷಣೆ ಕೋಶ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಮುಖ್ಯವಾಗಿ ಗಮನಿಸಬೇಕಾದ ಅಂಶಗಳೆಂದರೆ ತೆರಿಗೆ ವ್ಯಾಪ್ತಿಗೆ ಆಸ್ತಿಗಳನ್ನು ಒಳಪಡಿಸಿದ್ದು, ತೆರಿಗೆಗಳು ಮತ್ತು ತೆರಿಗೆಯೇತರ ಅಂಶಗಳ ಸರಿಯಾದ ಮೌಲ್ಯೀಕರಣ ಹಾಗೂ ಪರಿಷ್ಕರಣೆ, ಪ್ರತಿಯೊಂದು ನೀರಿನ ಸಂಪರ್ಕಕ್ಕೂ ಮಾಪಕದ (ಮೀಟರ್) ಅಳವಡಿಕೆ, ನೀರಿನ ದರ ಪಟ್ಟಿ ಹಾಗೂ ಸಂಪರ್ಕ ಶುಲ್ಕಗಳೂ ಸೇರಿದಂತೆ ನೀರಿನ ಬಳಕೆಯ ಶುಲ್ಕಗಳ ಸಂಗ್ರಹಣೆಯಲ್ಲಿ ಹಾಗೂ ರಸ್ತೆ ನಿರ್ಮಾಣದ ಶುಲ್ಕಗಳ ಸಂಗ್ರಹಣೆಯಲ್ಲಿ ಸುಧಾರಣೆಯಾಗಬೇಕಾಗಿದೆ.

**ರಾಜ್ಯ ಸರ್ಕಾರದಿಂದ ನಿಧಿಗಳ ವರ್ಗಾವಣೆಗಳು**

ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಹಣಕಾಸಿನ ಹಂಚಿಕೆಯನ್ನು ರಾಜ್ಯ ಹಣಕಾಸು ಆಯೋಗ ನೀಡಿದ ನಿರ್ದೇಶನದ ಪ್ರಕಾರ ಸಾರ್ವತ್ರಿಕ ಪಾಲುಗಾರಿಕೆ ಆಧಾರದ ಮೇಲೆ ಉದ್ದರಿಯೇತರ ನಿವ್ವಳ ಸ್ವಂತ ರಾಜಸ್ವ ಸ್ವೀಕೃತಿಯ ಶೇಕಡಾ ಪ್ರಕಾರವಾಗಿ ವರ್ಗಾವಣೆ ಮಾಡಲಾಗುತ್ತದೆ. ಶಾಸನಬದ್ಧ ಅನುದಾನಗಳನ್ನು ಅನಿರ್ಬಂಧಿತ ಅನುದಾನಗಳು ಎಂದು ಶಿಫಾರಸ್ಸು ಮಾಡಲಾಗುತ್ತದೆ. ಈ ವರದಿಯ ಎರಡನೆಯ ಅಧ್ಯಾಯದಲ್ಲಿ ಕರ್ನಾಟಕದ ಈ ಹಿಂದಿನ ರಾಜ್ಯ ಹಣಕಾಸು ಆಯೋಗಗಳ ಶಿಫಾರಸ್ಸುಗಳ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ. ರಾಜ್ಯ ಹಣಕಾಸು ಆಯೋಗದ ಅನುದಾನಗಳೇ ಅಲ್ಲದೆ ತಾಲ್ಲೂಕು ಪಂಚಾಯಿತಿಗಳಿಗೆ ಮಾತ್ರವೇ ಕೊಡಲಾಗುವ ಒಂದು ನಿರ್ದಿಷ್ಟ ಅನುದಾನವಿದೆ. ಇದನ್ನು ಸ್ಟಾಂಪುಗಳು ಮತ್ತು ನೋಂದಣಿ ಶುಲ್ಕದ ಮೇಲು ತೆರಿಗೆ ಎಂದು ಕರೆಯಲಾಗುತ್ತದೆ. ಇದನ್ನು ಸರ್ಕಾರವೇ ವಿಧಿಸಿ ಸಂಗ್ರಹ ಮಾಡುತ್ತದೆ ಮತ್ತು ಅದನ್ನು ತಾಲ್ಲೂಕು ಪಂಚಾಯಿತಿಗಳಿಗೆ ವರ್ಗಾಯಿಸಲಾಗುತ್ತದೆ. ಸ್ಟ್ಯಾಂಪ್ ಮತ್ತು ನೋಂದಣಿ ಶುಲ್ಕದ ಮೇಲುಸ್ತರದ ರಾಜಸ್ವವು ೨೦೧೩-೧೪ರಲ್ಲಿದ್ದ ರೂ.೩೭.೨೬ ಕೋಟಿಗಳಿಂದ ೨೦೧೭-೧೮ರಲ್ಲಿ ರೂ.೪೪.೫೦ ಕೋಟಿಗಳಿಗೆ ಏರಿಕೆಯಾಗಿದೆ.

**ಕೇಂದ್ರ ಸರ್ಕಾರದಿಂದ ವರ್ಗಾವಣೆಗಳು**

ಕೇಂದ್ರ ಸರ್ಕಾರವು ನಿರ್ದಿಷ್ಟವಾದ ಅನೇಕ ಕೇಂದ್ರ ವಲಯದ ಮತ್ತು ಕೇಂದ್ರದಿಂದ ಪ್ರಾಯೋಜಿತವಾದ ಯೋಜನೆಗಳನ್ನು ಅನುಷ್ಠಾನಕ್ಕೆ ತರುತ್ತದೆ. ಈ ಯೋಜನೆಗಳ ಮೇಲಿನ ವೆಚ್ಚದ ಪಾಲು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದಿಂದ ಪೂರ್ವನಿರ್ಧರಿತವಾಗಿರುತ್ತದೆ ಮತ್ತು ಇತ್ತೀಚಿಗೆ ಕೇಂದ್ರ ಪ್ರಾಯೋಜಿತ ಯೋಜನೆಗಳ ಅನ್ವಯ ಮಾಡಲಾಗುವ ವೆಚ್ಚಗಳು ಕೇಂದ್ರ-ರಾಜ್ಯ ನಡುವಿನ ಅನುಪಾತವು ೪೦:೬೦ರಲ್ಲಿರುತ್ತದೆ ಎಂಬ ನಿಲುವನ್ನು ಕೇಂದ್ರ ಕೈಗೊಂಡಿದೆ. ಕೇಂದ್ರ ಪ್ರಾಯೋಜಿತ ಯೋಜನೆಗಳು ಜಿಲ್ಲಾ ವಲಯದಲ್ಲಿದ್ದರೆ, ಈ

ಯೋಜನೆಗಳಿಗೆ ಕೊಡಲಾದ ನಿಧಿಗಳನ್ನು ರಾಜ್ಯ ಸರ್ಕಾರಕ್ಕೆ ವರ್ಗಾಯಿಸಲಾಗುವುದು. ಅದನ್ನು ಆಯವ್ಯಯದಲ್ಲಿ ಒದಗಿಸಿದ ಅವಕಾಶಗಳ ಪ್ರಕಾರ ಸ್ಥಳೀಯ ಸಂಸ್ಥೆಗಳಿಗೆ ಬಿಡುಗಡೆ ಮಾಡಲಾಗುವುದು. ಆದರೆ ಕೇಂದ್ರ ನಿಧಿಗಳನ್ನು ಸಂಬಂಧಪಟ್ಟ ಇಲಾಖೆಗಳು ಸ್ಥಳೀಯ ಸಂಸ್ಥೆಗಳಿಗೆ ಬಿಡುಗಡೆ ಮಾಡುತ್ತವೆ.

ವಿಕೇಂದ್ರೀಕರಣವನ್ನು ಅರ್ಥಪೂರ್ಣ ಹಾಗೂ ಪರಿಣಾಮಕಾರಿಯಾಗಿಸುವ ದೃಷ್ಟಿಯಿಂದ ಸ್ಥಳೀಯ ಸಂಸ್ಥೆಗಳಿಗೆ ನೇರವಾಗಿ ಅನುದಾನ ನೀಡುವಂತೆ ಹನ್ನೆರಡನೆಯ ಹಣಕಾಸು ಆಯೋಗವು ಶಿಫಾರಸ್ಸು ಮಾಡಿತ್ತು. ಹದಿಮೂರನೆ ಹಣಕಾಸು ಆಯೋಗವು ಸದರಿ ಶಿಫಾರಸ್ಸನ್ನು ಅನುಸರಿಸಿತು. ಆದರೆ ಹದಿನಾಲ್ಕನೆಯ ಹಣಕಾಸು ಆಯೋಗವು ಗ್ರಾಮ ಪಂಚಾಯತಿಗಳಿಗೆ ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ನೇರವಾಗಿ ಅನುದಾನ ನೀಡುವುದಕ್ಕೆ ಶಿಫಾರಸ್ಸು ಮಾಡಿತು ಮತ್ತು ಜಿಲ್ಲಾ ಪಂಚಾಯಿತಿ ಹಾಗೂ ತಾಲ್ಲೂಕು ಪಂಚಾಯಿತಿಗಳಿಗೆ ಅನುದಾನಗಳನ್ನು ನಿಲ್ಲಿಸಿತು. ಇದರಿಂದ ಜಿಲ್ಲಾ ಪಂಚಾಯತಿ ಹಾಗೂ ತಾಲ್ಲೂಕು ಪಂಚಾಯಿತಿಗಳ ಹಣಕಾಸುಗಳ ಮೇಲೆ ಭಾರೀ ಪ್ರತಿಕೂಲ ಪರಿಣಾಮವಾಗಿರುವುದರಿಂದ ಅವರಿಗೆ ಪರಿಹಾರ ನೀಡಬೇಕು. ಹದಿಮೂರನೆಯ ಹಣಕಾಸು ಆಯೋಗವು ಕರ್ನಾಟಕದ ಪಂಚಾಯತ್ ರಾಜ್ ಸಂಸ್ಥೆಗಳಿಗೆ ರೂ. ೮೪೪.೬೮ ಕೋಟಿಯನ್ನು ಹಂಚಿಕೆ ಮಾಡಿತ್ತು. (ಜಿಲ್ಲಾ ಪಂಚಾಯತ್‌ಗಳಿಗೆ ರೂ. ೯೭.೬೪ ಕೋಟಿ, ತಾಲ್ಲೂಕು ಪಂಚಾಯತ್‌ಗಳಿಗೆ ರೂ.೧೯೫.೨೯ ಕೋಟಿ ಹಾಗೂ ಗ್ರಾಮ ಪಂಚಾಯಿತಿಗಳಿಗೆ ರೂ.೫೫೧.೭೫ ಕೋಟಿ). ಹದಿನಾಲ್ಕನೆಯ ಹಣಕಾಸು ಆಯೋಗದ ಶಿಫಾರಸ್ಸಿನ ಪ್ರಕಾರ ಇದು ೨೦೧೬-೧೭ರಲ್ಲಿ ರೂ. ೧೦೦೨.೮೫ ಕೋಟಿಗಳಿಗೆ ಏರಿಕೆಯಾಗಿದೆ. ಆದ್ದರಿಂದ ೨೦೧೫-೧೬ ಮತ್ತು ೨೦೧೬-೧೭ರ ನಡುವೆ ಅನುದಾನಗಳಲ್ಲಿ ಶೇಕಡಾ ೧೮.೭೩ರಷ್ಟು ಏರಿಕೆಯಾಗಿದೆ. ಹಂಚಿಕೆಯಾದ ಸಂಪನ್ಮೂಲಗಳನ್ನು ಕುಡಿಯುವ ನೀರಿನ ಸರಬರಾಜು, ನೈರ್ಮಲ್ಯ (ಶೌಚಾಲಯಗಳಿಗೆ ಪೂರೈಕೆಯೂ ಸೇರಿದಂತೆ) ಬೀದಿದೀಪಗಳು ಮತ್ತು ಗ್ರಾಮದೊಳಗಿನ ರಸ್ತೆಗಳು ಇತ್ಯಾದಿ ಮೂಲ ಚಟುವಟಿಕೆಗಳಿಗಾಗಿ ಬಳಸಲಾಗುತ್ತದೆ ಎಂದು ನಿರೀಕ್ಷಿಸಲಾಗಿದೆ. ಇದರ ಜೊತೆಗೆ, ಗ್ರಾಮ ಪಂಚಾಯಿತಿಯು ನೀರಿನ ಸರಬರಾಜು, ಸ್ವಚ್ಛ ಭಾರತ ಅಭಿಯಾನ (ನೈರ್ಮಲ್ಯ). ಬೀದಿದೀಪಗಳು ಹಾಗೂ ರಸ್ತೆಗಳಂತಹ ಮೂಲ ಕೆಲಸಗಳಿಗಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರ ಇವೆರಡರಿಂದಲೂ ನಿಧಿಯನ್ನು ಪಡೆಯುತ್ತದೆ.

| ಪಂಚಾಯತ್ ರಾಜ್ ಸಂಸ್ಥೆಗಳಿಗೆ ಯೋಜನೆ ಹಾಗೂ ಯೋಜನೇತರ ಹಂಚಿಕೆ, ೨೦೦೧-೦೨ ರಿಂದ ೨೦೧೬-೧೭ (ರೂ. ಕೋಟಿಗಳಲ್ಲಿ) | | | | | |
|---|---|---|---|---|---|
| ವರ್ಷ | ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಯೋಜನೆ ಹಾಗೂ ಯೋಜನೇತರ ಹಂಚಿಕೆ | | | | ಉದ್ದರಿಯೇತರ ನಿವ್ವಳ ಸ್ವಂತ ರಾಜಸ್ವ ಸ್ವೀಕೃತಿಯಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಶೇಕಡ ಪಾಲು |
| | ಯೋಜನೆಯ ಹಂಚಿಕೆ | | ಯೋಜನೇತರ ಹಂಚಿಕೆ | | |
| ೨೦೦೧-೦೨ | ೨೨೦.೦೭ | ೨೪೩೦.೭೧ | ೧೬೮೬.೯೦ | ೪೩೩೭.೬೮ | ೩೯.೬೩ |
| ೨೦೦೨-೦೩ | ೧೯೮.೦೬ | ೨೪೬೧.೨೯ | ೧೭೫೦.೧೭ | ೪೪೦೯.೩೨ | ೩೭.೬೩ |
| ೨೦೦೩-೦೪ | ೧೯೮.೦೭ | ೨೫೩೧.೯೦ | ೧೬೬೧.೫೭ | ೪೩೯೧.೫೪ | ೨೮.೨೮ |
| ೨೦೦೪-೦೫ | ೨೮೨.೬೫ | ೨೯೫೧.೧೧ | ೨೦೧೨.೩೯ | ೫೨೪೬೧೫ | ೨೫.೫೪ |
| ೨೦೦೫-೦೬ | ೫೮೫.೧೬ | ೩೩೨೭೦೯ | ೨೫೫೩.೮೬ | ೬೪೬೬.೧೧ | ೨೮.೭೩ |
| ೨೦೦೬-೦೭ | ೬೧೫.೨೮ | ೩೫೬೨.೯೨ | ೨೫೭೬.೮೨ | ೬೭೫೫.೦೨ | ೨೭.೦೮ |
| ೨೦೦೭-೦೮ | ೧೪೫೩.೨೮ | ೪೩೫೦.೭೦ | ೩೨೧೫೯೧ | ೯೦೧೯.೮೯ | ೩೧.೯೬ |
| ೨೦೦೮-೦೯ | ೧೨೮೧.೪೦ | ೪೭೯೯.೫೬ | ೩೪೦೨.೯೮ | ೯೪೮೩.೯೪ | ೩೦.೭೯ |
| ೨೦೦೯-೧೦ | ೧೧೨೬.೫೨ | ೫೬೮೮.೫೬ | ೩೬೪೩.೦೬ | ೧೦೪೫೮.೧೪ | ೩೦.೮೪ |
| ೨೦೧೦-೧೧ | ೧೨೩೫.೬೧ | ೭೨೯೬.೮೬ | ೪೫೧೫.೬೩ | ೧೩೦೪೮.೧೦ | ೩೧.೧೯ |
| ೨೦೧೧-೧೨ | ೯೭೬.೩೪ | ೮೭೬೨.೬೪ | ೫೦೭೬.೪೫ | ೧೪೮೧೫.೪೩ | ೨೯.೩೦ |
| ೨೦೧೨-೧೩ | ೧೦೨೮.೬೧ | ೮೦೯೬.೧೦ | ೬೧೦೬.೭೯ | ೧೫೨೩೧.೫೦ | ೨೬.೬೯ |
| ೨೦೧೩-೧೪ | ೧೦೯೮.೪೫ | ೧೦೫೪೦.೯೩ | ೬೧೬೮.೮೫ | ೧೭೮೦೮.೨೩ | ೨೭.೨೩ |
| ೨೦೧೪-೧೫ | ೧೯೯೪.೬೪ | ೧೧೮೫೯.೮೮ | ೯೪೪೮೭೦೮ | ೨೩೩೦೧.೬೦ | ೩೧.೩೪ |
| ೨೦೧೫-೧೬ | ೨೩೦೦.೨೦ | ೧೩೬೭೭೬೧ | ೧೦೮೯೩.೭೨ | ೨೬೮೭೧.೫೩ | ೩೨.೦೪ |
| ೨೦೧೬-೧೭ | ೪೭೪೭.೫೯ | ೧೫೧೭೭೬೦ | ೯೬೩೩.೧೨ | ೨೯೫೫೮.೩೧ | ೩೪.೭೮ |
| ಮೂಲ: ದತ್ತಾಂಶ ವಿಶ್ಲೇಷಣ ಕೋಶ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ. | | | | | |

ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯಿತಿಗಳಿಗೆ ಯೋಜನೆ ಹಾಗೂ ಯೋಜನೇತರ ಹಂಚಿಕೆಗಳು ಅನುಕ್ರಮವಾಗಿ ೨೦೦೧-೦೨ ರಲ್ಲಿದ್ದ ರೂ. ೨೨೦.೦೭ ಕೋಟಿ ರೂ. ೨೪೩೦.೭೦ ಕೋಟಿ ಹಾಗೂ ರೂ. ೧೬೮೬.೯೦ ಕೋಟಿಗಳಷ್ಟಿದ್ದುದು ೨೦೧೬-೧೭ರಲ್ಲಿ ರೂ. ೪೭೪೭.೫೯ ಕೋಟಿ ರೂ. ೧೫೧೭೭.೬೦ ಕೋಟಿ ಹಾಗೂ ರೂ. ೯೬೩೩.೧೨ ಕೋಟಿಗಳಿಗೆ ಏರಿಕೆಯಾಗಿರುವುದನ್ನು ಕೋಷ್ಟಕದ ದತ್ತಾಂಶವು ತೋರಿಸುತ್ತದೆ. ಕಳೆದ ೧೫ ವರ್ಷಗಳಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಎಲ್ಲ ಮೂರು ಹಂತಗಳಿಗೆ ಮಾಡಿರುವ ಹಂಚಿಕೆಯಲ್ಲಿ ಗಣನೀಯ ಹೆಚ್ಚಳವಾಗಿದೆ. ಪಂಚಾಯತ್ ರಾಜ್ ಸಂಸ್ಥೆಗಳಿಗೆ ಹಂಚಿಕೆಯನ್ನು ಉದ್ದರಿಯೇತರ ಸ್ವಂತ ನಿವ್ವಳ ರಾಜಸ್ವ ಸಂಪನ್ಮೂಲಗಳಿಂದ ಮಾಡಲಾಗಿದೆ ಎಂಬುದು ಕೋಷ್ಟಕದಿಂದ ಸ್ಪಷ್ಟವಾಗುತ್ತದೆ. ಒಟ್ಟು

ಹಂಚಿಕೆಯು ೨೦೦೧-೦೨ರಲ್ಲಿ ಉದ್ದರಿಯೇತರ ಸ್ವಂತ ನಿವ್ವಳ ರಾಜಸ್ವ ಸಂಪನ್ಮೂಲದ ಶೇಕಡಾ ೩೯.೬.೩ರಷ್ಟು ಇದ್ದಿತು ಮತ್ತು ಇದು ೨೦೧೦-೧೧ರಲ್ಲಿ ಶೇಕಡ ೩೧.೯೫ರಷ್ಟಾಗಿತ್ತು. ಆದರೆ ೨೦೧೬-೧೭ರಲ್ಲಿ ಅದು ಶೇಕಡ ೩೪.೭೮ಕ್ಕೆ ಏರಿಕೆಯಾಯಿತು. ಶೇಕಡಾವಾರು ಹಾಗೂ ಒಟ್ಟು ಮೊತ್ತದ ದೃಷ್ಟಿಯಿಂದ ವರ್ಗಾವಣೆಯು ಗಣನೀಯವಾಗಿದೆ.

ಪಂಚಾಯತ್ ರಾಜ್ ಸಂಸ್ಥೆಗಳು ತಮ್ಮ ವೆಚ್ಚವನ್ನು ಕೆಳಕಂಡ ಶೀರ್ಷಿಕೆಗಳ ಪ್ರಕಾರ ವರ್ಗೀಕರಿಸಬೇಕು: ರಾಜಸ್ವ ಬಂಡವಾಳ ಹಾಗೂ ಋಣ. ಆದರೆ ಅವರ ವಾರ್ಷಿಕ ಲೆಕ್ಕಪತ್ರಗಳಲ್ಲಿ ಈ ವರ್ಗೀಕರಣಗಳು ವಿವರವಾಗಿ ಕಂಡುಬರುತ್ತಿಲ್ಲ. ರಾಜ್ಯ ಸರ್ಕಾರದ ನಿರ್ದಿಷ್ಟ ಅನುಮೋದನೆ ಇಲ್ಲದೆ ಪಂಚಾಯತ್‌ರಾಜ್ ಸಂಸ್ಥೆಗಳು ಸಾಲ ಎತ್ತುವುದಕ್ಕೆ ಅವಕಾಶವಿಲ್ಲ.

ವಿವಿಧ ಶೀರ್ಷಿಕೆಗಳ ಲೆಕ್ಕಗಳ ಮೇಲಿನ ವೆಚ್ಚವನ್ನು ಇಲಾಖೆಗಳ ಸಂಬಂಧಪಟ್ಟ ಅಧಿಕಾರಿಗಳು ನಿರ್ಧರಿಸುತ್ತಾರೆ ಮತ್ತು ಅದನ್ನು ಜಿಲ್ಲಾ ಪಂಚಾಯಿತಿ ಹಾಗೂ ತಾಲ್ಲೂಕು ಪಂಚಾಯಿತಿಗಳ ಇಲಾಖಾ ಲೆಕ್ಕಗಳ ಶೀರ್ಷಿಕೆಗಳಡಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಕಾರ್ಯಾಚರಣೆ ಮತ್ತು ನಿರ್ವಹಣೆ, ನಿಯಂತ್ರಣ ವೆಚ್ಚ, ಮುಂತಾದ ಶೀರ್ಷಿಕೆಗಳ ಕೆಳಗಿನ ವೆಚ್ಚಗಳನ್ನು ಅಥವಾ ದುರ್ಬಲ ವರ್ಗಗಳ ಕಲ್ಯಾಣಕ್ಕಾಗಿ ಮತ್ತು ಸಮುದಾಯದ ಸ್ವತ್ತುಗಳು ಇತ್ಯಾದಿಗಾಗಿ ಖರ್ಚುಮಾಡಿದ ಮೊಬಲಗುಗಳನ್ನು ಪ್ರತ್ಯೇಕವಾಗಿ ತೋರಿಸಲಾಗುವುದಿಲ್ಲ. ಇದಕ್ಕೆ ಸಂಬಂಧಿಸಿದ ಬಹಳಷ್ಟು ವೆಚ್ಚವು ಇಲಾಖೆಗಳ ಯೋಜನೆಗಳಿಗೆ ಸಂಬಂಧಿಸಿರುತ್ತದೆ. (ರಾಜ್ಯ/ಕೇಂದ್ರ ಸರ್ಕಾರವು ವಹಿಸಿರುವ ಯೋಜನೆಗಳು). ಆದ್ದರಿಂದ ಈ ಎಲ್ಲ ವೆಚ್ಚಗಳನ್ನು ಕೃಷಿ, ತೋಟಗಾರಿಕೆ, ಸಮಾಜ ಕಲ್ಯಾಣ, ಶಿಕ್ಷಣ, ಆರೋಗ್ಯ ಇತ್ಯಾದಿ ಸರ್ಕಾರದ ಲೆಕ್ಕಗಳ ವರ್ಗೀಕರಣದ ರೀತಿಯಲ್ಲಿಯೇ ವರ್ಗೀಕರಿಸಲಾಗುತ್ತದೆ. ಆದರೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯು ನಿರ್ವಹಣೆ, ಕಲ್ಯಾಣ, ಕಟ್ಟಡಗಳು, ರಸ್ತೆಗಳು, ನೀರಿನ ಸರಬರಾಜು, ಶಿಕ್ಷಣ ಮುಂತಾದವುಗಳ ಮೇಲಿನ ವೆಚ್ಚದ ಒಂದು ಸ್ಥೂಲ ಅಂದಾಜನ್ನು ಸಿದ್ಧಪಡಿಸಿ ಹದಿನಾಲ್ಕನೆಯ ಹಣಕಾಸು ಆಯೋಗಕ್ಕೆ ಸಲ್ಲಿಸಿದೆ. ವ್ಯವಸ್ಥಾಪನೆ, ನಿರ್ವಹಣೆ, ಬಂಡವಾಳ, ಕಲ್ಯಾಣ ಮತ್ತು ಇತರೆ ಚಟುವಟಿಕೆಗಳಿಗಾಗಿ ೨೦೧೦-೧೧ರಲ್ಲಿ ಅಂದಾಜು ಮಾಡಿದ ಒಟ್ಟು ವೆಚ್ಚವು ರೂ.೭೯೯.೧೧ ಕೋಟಿ ಆಗಿತ್ತು ಮತ್ತು ೨೦೧೯-೨೦ಕ್ಕೆ ವಿವಿಧ ಶೀರ್ಷಿಕೆಗಳ ಅಡಿಯಲ್ಲಿ ಕಲ್ಪಿಸಲಾದ ಮೊಬಲಗು ರೂ.೪೬೦೬.೫೯ ಕೋಟಿ ಆಗಿದ್ದು ಇದು ಶೇಕಡಾ ೧೬೭.೮೬ ರಷ್ಟು ಹೆಚ್ಚಳವನ್ನು ತೋರಿಸುತ್ತಿದೆ. ಹಂಚಿಕೆ ಮಾಡಿರುವ ನಿಧಿಗಳು ಸಾಕಷ್ಟು ಇಲ್ಲದಿರುವುದರಿಂದ ಕಟ್ಟಡಗಳು, ರಸ್ತೆಗಳು ಮುಂತಾದ ಸ್ವತ್ತುಗಳ ನಿರ್ವಹಣೆಗಾಗಿ ಪ್ರಮಾಣಕ ಮಾನದಂಡಗಳನ್ನು ತಿಳಿಸಿಲ್ಲ ಎಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ಆಯೋಗದೊಂದಿಗೆ

ಮಾತುಕತೆ ನಡೆಸಿದಾಗ ತಿಳಿಸಿರುತ್ತಾರೆ. ಆದ್ದರಿಂದ, ಈ ಸಂಸ್ಥೆಗಳಿಗೆ ಹೆಚ್ಚುವರಿ ಶಾಸನಬದ್ಧ ಅನುದಾನಗಳನ್ನು ಗಣನೀಯವಾಗಿ ಹೆಚ್ಚಿಸಬೇಕಾಗಿದೆ ಎಂದು ಕೋರಿದರು.

೧. **ಕುಡಿಯುವ ನೀರು:** ಗ್ರಾಮ ಪಂಚಾಯಿತಿಯ ಬಹು ಮುಖ್ಯವಾದ ಸೇವಾ ಚಟುವಟಿಕೆಯೆಂದರೆ ಕುಡಿಯುವ ನೀರಿನ ಸರಬರಾಜು, ನೈರ್ಮಲ್ಯ, ಗ್ರಾಮ ರಸ್ತೆಗಳು ಹಾಗೂ ಬೀದಿದೀಪಗಳ ನಿರ್ವಹಣೆ. ಗ್ರಾಮ ಪಂಚಾಯಿತಿಗಳ ಹೆಚ್ಚಿನ ಭಾಗದ ವೆಚ್ಚಗಳು ಸದರಿ ಚಟುವಟಿಕೆಗಳಿಗೆ ಸಂಬಂಧಿಸಿವೆ. ಕುಡಿಯುವ ನೀರಿನ ಮೂಲಸೌಕರ್ಯ ಒದಗಿಸುವ ಮುಖ್ಯ ಜವಾಬ್ದಾರಿಯು ರಾಜ್ಯ ಸರ್ಕಾರದ ಕರ್ನಾಟಕ ಗ್ರಾಮೀಣ ಕುಡಿಯುವ ನೀರು ಹಾಗೂ ನೈರ್ಮಲ್ಯ ಇಲಾಖೆಗೆ ಸೇರಿದೆ. ಆದರೆ ಈ ವ್ಯವಸ್ಥೆಗಳ ದುರಸ್ತಿ ಮತ್ತು ನಿರ್ವಹಣೆ ಹಾಗೂ ಮನೆಗಳಿಗೆ ಕುಡಿಯುವ ನೀರು ಲಭ್ಯವಾಗುವಂತೆ ನೋಡಿಕೊಳ್ಳುವ ಜವಾಬ್ದಾರಿ ಗ್ರಾಮ ಪಂಚಾಯಿತಿಗಳಿಗೆ ಸೇರಿದೆ.

ಭವಿಷ್ಯದಲ್ಲಿ ಕುಡಿಯುವ ನೀರಿನ ಸರಬರಾಜಿಗಾಗಿ ಕರ್ನಾಟಕ ಗ್ರಾಮೀಣ ಕುಡಿಯುವ ನೀರು ಹಾಗೂ ನೈರ್ಮಲ್ಯ ಇಲಾಖೆಯು ಹೊಸದೊಂದು ಕ್ರಮವನ್ನು ಯೋಜಿಸಿದೆ. ಕೊಳವೆ ಬಾವಿಗಳಿಗೆ ಬದಲಾಗಿ ನದಿಗಳ ಅಥವಾ ದೊಡ್ಡ ಕೆರೆಗಳ ನೀರನ್ನು ಬಳಸಿಕೊಳ್ಳುವುದು ಸದ್ಯದ ಆಲೋಚನೆಯಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ದಿನಕ್ಕೆ ತಲಾ ೮೫ ಲೀಟರ್ ನೀರನ್ನು ಒದಗಿಸುವುದನ್ನು ಮತ್ತು ನದಿ ನೀರನ್ನು ಬಳಸಿ ಕರ್ನಾಟಕದ ಎಲ್ಲ ಗ್ರಾಮಗಳಿಗೂ ಉತ್ತಮ ಗುಣಮಟ್ಟದ ನೀರನ್ನು ಸರಬರಾಜು ಮಾಡುವ ಸುಮಾರು ರೂ.೫೩೫೦೦ ಕೋಟಿ ವೆಚ್ಚದ ಮಹತ್ವಾಕಾಂಕ್ಷಿ ಯೋಜನೆಯೊಂದನ್ನು ಸಿದ್ಧಗೊಳಿಸಲಾಗುತ್ತಿದೆ. ಕರಾವಳಿ ಜಿಲ್ಲೆಗಳಲ್ಲಿ ನೀರಿನಲ್ಲಿರುವ ಲವಣಾಂಶವನ್ನು ಹೊರತೆಗೆದ ಜಲಾಶಯಗಳು ಕುಡಿಯುವ ನೀರಿನ ಮೂಲಗಳಾಗುತ್ತದೆ.

ಈ ಯೋಜನೆಗಳು ಕಾರ್ಯಾರಂಭ ಮಾಡಿದರೆ ಗ್ರಾಮ ಪಂಚಾಯಿತಿಗಳ ಜವಾಬ್ದಾರಿಯು ತಮ್ಮ ಪ್ರದೇಶದಲ್ಲಿರುವ ನೀರಿನ ಕೊಳವೆಗಳು ಹಾಗೂ ಕೆಲವು ಪಂಪುಗಳ ನಿರ್ವಹಣೆಗಷ್ಟೆ ಸೀಮಿತವಾಗಿರುತ್ತದೆ. ಉಳಿದ ಮೂಲಸೌಕರ್ಯ ವ್ಯವಸ್ಥೆಯನ್ನು ಒಂದಕ್ಕಿಂತ ಅಧಿಕ ಗ್ರಾಮ ಪಂಚಾಯಿತಿಗಳ ಪ್ರದೇಶವನ್ನು ಒಳಗೊಳ್ಳುವುದರಿಂದ ಗ್ರಾಮ ಪಂಚಾಯತಿಗಳು ಅವುಗಳನ್ನು ನಿರ್ವಹಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಯೋಜನೆಗಳು ಪೂರ್ಣಗೊಂಡ ನಂತರ ಅಂತಹ ಅಂತರ್ ಗ್ರಾಮ ಪಂಚಾಯಿತಿ ನಿರ್ವಹಣೆಯನ್ನು ಜಿಲ್ಲಾ ಪಂಚಾಯಿತಿಗಳು ಅಥವಾ ತಾಲ್ಲೂಕು ಪಂಚಾಯಿತಿಗಳು ವಹಿಸಿಕೊಳ್ಳಬೇಕಾಗಬಹುದು.

೨. **ಬೀದಿದೀಪಗಳು:** ಗ್ರಾಮ ಪಂಚಾಯಿತಿಯು ವಿದ್ಯುಚ್ಛಕ್ತಿ ಶುಲ್ಕಗಳು ಮತ್ತು ಇನ್ನಿತರ ಸಂಬಂಧಿತ ವೆಚ್ಚಗಳ ಹೊರೆಯನ್ನು ವಹಿಸಿಕೊಳ್ಳಬೇಕಾದ ಇನ್ನೊಂದು ಕ್ಷೇತ್ರವೆಂದರೆ ಬೀದಿ ದೀಪಗಳ ನಿರ್ವಹಣೆ. ಬೀದಿ ದೀಪಗಳಿಗೆ ಮಾಪಕ ವ್ಯವಸ್ಥೆ ಇಲ್ಲದಿರುವುದರಿಂದ

ಬಿಲ್ ವ್ಯವಸ್ಥೆಯು ಸರಿಯಾದ ನಿಯಂತ್ರಣದಲ್ಲಿ ಇರುವುದಿಲ್ಲ ಮತ್ತು ಇದರಿಂದಾಗಿ ವಿದ್ಯುತ್ ಶುಲ್ಕಗಳ ಸಂದಾಯವೂ ಸಹ ಸೂಕ್ತ ನಿಯಂತ್ರಣದಲ್ಲಿ ಇರುವುದಿಲ್ಲ. ಹೀಗಾಗಿ ಗ್ರಾಮ ಪಂಚಾಯತಿಗಳಿಂದ ಬಹಳಷ್ಟು ಮೊಬಲಗು ಪಾವತಿಯಾಗದೆ ಬಾಕಿ ಉಳಿದಿದೆ. ಆದ್ದರಿಂದ ಸಂದಾಯವನ್ನು ಖಚಿತಪಡಿಸಲು ಈಎಸ್‌ಸಿಆರ್‌ಇಡಬ್ಲು ಎಂಬ ಖಾತೆ ವ್ಯವಸ್ಥೆಯನ್ನು ಜಾರಿಗೆ ತರಲಾಗಿದೆ. ರಾಜ್ಯ ಸರ್ಕಾರವು ೨೦೧೬-೧೭ರಲ್ಲಿ ಒಂದು ಸಲಕ್ಕೆ ಮಾತ್ರ ಪರಿಹಾರ ರೂಪದಲ್ಲಿ ಈ ಸಂಬಂಧವಾಗಿ, ೩೧.೩.೨೦೧೫ ರವರೆಗೆ ಒಟ್ಟುಗೂಡಿದ ಬಾಕಿ ಮೊತ್ತ ರೂ. ೩೭೬೬ ಕೋಟಿಗಳನ್ನು ತಾನೇವಹಿಸಿಕೊಳ್ಳಲು ಸಮ್ಮತಿಸಿದೆ. ಈ ಕ್ರಮದಿಂದಾಗಿ ಸಂಚಿತವಾಗಿದ್ದ ಬಾಕಿ ಮುಗಿದಿರುವುದರಿಂದ ಗ್ರಾಮ ಪಂಚಾಯಿತಿಗಳಿಗೆ ನೆರವಾಗಿದೆ. ಪ್ರಸ್ತುತದಲ್ಲಿ ಕೊಡಬೇಕಾದ ವಿದ್ಯುತ್ ಶುಲ್ಕಗಳನ್ನು ಗ್ರಾಮ ಪಂಚಾಯಿತಿಗಳು ತಪ್ಪದೆ ಪಾವತಿಸುವುದಾಗಿ ಖಚಿತಪಡಿಸಿದರೆ ಮಾತ್ರ ಈ ಬಾಕಿಗಳ ಹೊರೆಯನ್ನು ತಾನು ವಹಿಸಿಕೊಳ್ಳುತ್ತೇನೆ ಎಂಬ ಷರತ್ತಿನ ಮೇಲೆ ರಾಜ್ಯ ಸರ್ಕಾರವು ಈ ನಿರ್ಣಯವನ್ನು ಕೈಗೊಂಡಿತು. ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳ ಪ್ರಕಾರ ಪ್ರತಿಯೊಂದು ಗ್ರಾಮ ಪಂಚಾಯಿತಿಗೂ ಶಾಸನಬದ್ಧ ಅನುದಾನಗಳನ್ನು ಬಿಡುಗಡೆ ಮಾಡಲಾಗಿದೆ. ಇದರಲ್ಲಿ ಶೇಕಡಾ ೬೦ನ್ನು ವಿದ್ಯುಚ್ಛಕ್ತಿ ಶುಲ್ಕಗಳಿಗಾಗಿ ಶೇಕಡಾ ೪೦ನ್ನು ಹೊರಗುತ್ತಿಗೆ ಉದ್ಯೋಗಿಗಳ ಮಂಜೂರಿಗಾಗಿ ನಿಗದಿಪಡಿಸಲಾಗಿದೆ. ರಾಜ್ಯ ಸರ್ಕಾರವು ತನ್ನ ೨೦೧೭-೧೮ರ ಆಯವ್ಯಯದಲ್ಲಿ ಶೇಕಡಾ ೬೦ನ್ನು ವಿದ್ಯುಚ್ಛಕ್ತಿ ಶುಲ್ಕಗಳಿಗಾಗಿ ಶೇಕಡಾ ೪೦ನ್ನು ಹೊರಗುತ್ತಿಗೆ ಉದ್ಯೋಗಿಗಳ ಮಜೂರಿಗಾಗಿ ನಿಗದಿಸಲಾಗಿದೆ. ಈ ಕ್ರಮದಿಂದ ಗ್ರಾಮ ಪಂಚಾಯಿತಿಗಳಿಗೆ ಸಂಚಿತ ಬಾಕಿಗೆ ಸಂಬಂಧಿಸಿದಂತೆ ಸಹಾಯವಾಗಬಹುದು.

**೩. ಗ್ರಾಮೀಣ ರಸ್ತೆಗಳು:** ಗ್ರಾಮೀಣ ರಸ್ತೆಗಳ ನಿರ್ಮಾಣದ ಕೆಲಸವನ್ನು ಪ್ರಧಾನಮಂತ್ರಿ ಗ್ರಾಮಸಡಕ್ ಯೋಜನಾ ಎಂಬ ಪ್ರಮುಖ ಕಾರ್ಯಕ್ರಮದನ್ವಯ ಕೇಂದ್ರ ಸರ್ಕಾರದಿಂದ ನಿಧಿಗಳನ್ನು ಪಡೆದು ಕೈಗೊಳ್ಳಲಾಗಿದೆ. ರಾಜ್ಯ ಸರ್ಕಾರವು ಮುಖ್ಯಮಂತ್ರಿಗಳ ಗ್ರಾಮರಸ್ತೆ ಯೋಜನೆ' ಎಂಬ ಪ್ರಮುಖ ಕಾರ್ಯಕ್ರಮವನ್ನು ಕೈಗೊಂಡಿದೆ. ಈ ಎರಡು ಕಾರ್ಯಕ್ರಮದ ಮಾರ್ಗದರ್ಶಿ ಸೂತ್ರಗಳು ಒಂದೇ ರೀತಿಯಲ್ಲಿವೆ. ಕರ್ನಾಟಕ ಗ್ರಾಮೀಣ ರಸ್ತೆಗಳ ಅಭಿವೃದ್ಧಿ ಸಂಸ್ಥೆಯು ಗ್ರಾಮೀಣ ರಸ್ತೆಗಳನ್ನು ನಿರ್ಮಿಸುವ ಕೆಲಸಗಳನ್ನು ಕೈಗೊಳ್ಳುತ್ತದೆ. ಈ ರಸ್ತೆಗಳ ನಿರ್ವಹಣೆಯು ಜಿಲ್ಲಾ ಪಂಚಾಯತಿಗಳ ಜವಾಬ್ದಾರಿಯಾಗಿದ್ದು ಇದಕ್ಕಾಗಿ ಬಹಳ ಹಣ ಬೇಕಾಗುವುದರಿಂದ ಇದಕ್ಕೆ ಪ್ರತ್ಯೇಕ ಅನುದಾನವನ್ನು ಒದಗಿಸಲಾಗಿದೆ. ಇದನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಭಾಗವಾಗಿರುವ ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆಯು ಕಾರ್ಯಗತಗೊಳಿಸುತ್ತದೆ. ಕರ್ನಾಟಕ ಗ್ರಾಮೀಣ ರಸ್ತೆಗಳ ಅಭಿವೃದ್ಧಿ ಸಂಸ್ಥೆಯು ನೀಡಿರುವ ಮಾಹಿತಿಯ ಪ್ರಕಾರ ಗ್ರಾಮೀಣ

ರಸ್ತೆಗಳ ಒಟ್ಟು ಉದ್ದವು ೧೭೭೫೪೨ ಕಿ.ಮೀ. ಆಗಿದೆ. ಇದರಲ್ಲಿ ಡಾಂಬರು ರಸ್ತೆಗಳ ಉದ್ದ ೬೩೩೭೪ ಕಿ.ಮೀಟರಾಗಿದೆ, ೨೩೦೬೯ ಕಿ.ಮೀ. ಜಲ್ಲಿ ರಸ್ತೆಗಳು ಹಾಗೂ ಕಲ್ಲು ಅಥವಾ ಮಣ್ಣಿನ ರಸ್ತೆಗಳ ಉದ್ದ ೯೧೧೦೯ ಕಿ. ಮೀ. ರಾಜ್ಯದಲ್ಲಿ ೨೦೧೮-೧೯ ರಿಂದ ೨೦೨೨-೨೩ರ (ಐದು ವರ್ಷಗಳು) ಅವಧಿಯಲ್ಲಿ ಒಟ್ಟು ೪೬,೦೦೦ ಕಿ.ಮೀ.ಗಳಷ್ಟು ಗ್ರಾಮೀಣ ರಸ್ತೆಗಳನ್ನು ಕೈಗೊಳ್ಳಲು ಕರ್ನಾಟಕ ಗ್ರಾಮೀಣ ರಸ್ತೆಗಳ ಅಭಿವೃದ್ಧಿ ಸಂಸ್ಥೆಯು ಕಾರ್ಯಕ್ರಮ ಹಮ್ಮಿಕೊಂಡಿದೆ ಮತ್ತು ಈ ರಸ್ತೆಗಳಿಗಾಗಿ ರೂ. ೨೨೧೨೦ ಕೋಟಿ ಅಗತ್ಯವಿದೆಯೆಂದು ಅಂದಾಜು ಮಾಡಲಾಗಿದೆ.

**ಹದಿನಾಲ್ಕನೇ ಹಣಕಾಸು ಆಯೋಗ ಮತ್ತು ನಾಲ್ಕನೇ ರಾಜ್ಯ ಹಣಕಾಸು ಆಯೋಗಗಳ ಸುಧಾರಣಾ ಕ್ರಮಗಳು**

ಸಾಮಾನ್ಯವಾಗಿ ಪಂಚಾಯತ್ ರಾಜ್ ಸಂಸ್ಥೆಗಳ ಮತ್ತು ನಿರ್ದಿಷ್ಟವಾಗಿ ಗ್ರಾಮ ಪಂಚಾಯತಿಗಳ ವಿತ್ತೀಯ ಪರಿಸ್ಥಿತಿಯು ಸುಸ್ಥಿತಿಯಲ್ಲಿಲ್ಲ. ಅವುಗಳ ಸಂಪನ್ಮೂಲಗಳ ಉತ್ಪಾದಕತೆ ಉತ್ತಮವಾಗಿಲ್ಲ. ಜಿಲ್ಲಾ ಪಂಚಾಯತಿ ಹಾಗೂ ತಾಲ್ಲೂಕು ಪಂಚಾಯತಿಗಳಿಗೆ ರಾಜಸ್ವದ ಸ್ವಂತ ಮೂಲಗಳಿಲ್ಲ. ಗ್ರಾಮ ಪಂಚಾಯತಿಗಳು ಸ್ವೀಕೃತಿಗಳನ್ನು ಬಿಟ್ಟು ವಸೂಲಾತಿಯ ದರವನ್ನು ಸುಧಾರಿಸಲು ಗಮನಾರ್ಹವಾದ ಪ್ರಯತ್ನಗಳನ್ನು ಮಾಡುತ್ತಿಲ್ಲ. ಪಂಚಾಯತ್‌ರಾಜ್ ಸಂಸ್ಥೆಗಳು ಎದುರಿಸುತ್ತಿರುವ ಸಮಸ್ಯೆಗಳ ಪರಿಹಾರಕ್ಕಾಗಿ ಕೆಳಕಂಡ ಕ್ರಮಗಳನ್ನು ಗುರುತಿಸಲಾಗಿದೆ:

ಅ) ಹದಿನಾಲ್ಕನೆಯ ಹಣಕಾಸು ಆಯೋಗವು ಜಿಲ್ಲಾ ಪಂಚಾಯತಿ ಹಾಗೂ ತಾಲ್ಲೂಕು ಪಂಚಾಯತಿಗಳಿಗೆ ಅನುದಾನದ ಬಿಡುಗಡೆಯನ್ನು ನಿಲ್ಲಿಸಿದೆ. ಆದ್ದರಿಂದ ಅವುಗಳಿಗೆ ಪರಿಹಾರ ನೀಡುವುದು ಅಗತ್ಯ ರಾಜ್ಯ ಹಣಕಾಸು ಆಯೋಗಗಳು ಅದಕ್ಕೆ ಸೂಕ್ತ ಶಿಫಾರಸ್ಸುಗಳನ್ನು ಮಾಡಬಹುದು ಎಂದು ಹಣಕಾಸು ಆಯೋಗವು ಸೂಚಿಸಿದೆ.

ಆ) ಈಗಿರುವ ಶೇಕಡವಾರು ಹಂಚಿಕೆಗಳ ಪ್ರಮಾಣವನ್ನು ಹಾಗೇ ಕಾಯ್ದುಕೊಂಡು ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಹಾಗೂ ಜಿಲ್ಲಾ ಪಂಚಾಯತಿಗಳಿಗೆ ಅನುದಾನಗಳ ಹಂಚಿಕೆಯನ್ನು ಜನಸಂಖ್ಯೆ ಮತ್ತು ಪ್ರದೇಶವನ್ನು ಆಧಾರ ಮಾಡಿಕೊಂಡು ಒದಗಿಸಬೇಕು.

ಇ) ಹೊಸದಾಗಿ ರಚಿಸಲಾಗಿರುವ ೪೯ ತಾಲ್ಲೂಕು ಪಂಚಾಯತಿಗಳಿಗೆ ಕಚೇರಿ, ವ್ಯವಸ್ಥಾಪನೆ ಹಾಗೂ ವಾಹನ ಮುಂತಾದವುಗಳಿಗಾಗಿ ಹೆಚ್ಚುವರಿ ನಿಧಿಗಳನ್ನು ಒದಗಿಸಬೇಕು.

ಈ) ಸಾರ್ವಜನಿಕ ಶೌಚಾಲಯಗಳು, ಅಂಗನವಾಡಿ ಮತ್ತು ಶಾಲಾ ಶೌಚಾಲಯಗಳು, ಗ್ರಾಮೀಣ ಪ್ರದೇಶದಲ್ಲಿ ಆರೋಗ್ಯಕರ ನೈರ್ಮಲ್ಯ ಮತ್ತು ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆ ಮುಂತಾದವುಗಳಿಗೆ ಸಂಬಂಧಿಸಿದ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ನಿರ್ವಹಿಸಲು ಮತ್ತು ಕಾಯ್ದುಕೊಳ್ಳಲು ಹೆಚ್ಚುವರಿ ಅನುದಾನದ ಅಗತ್ಯವಿದೆ.

ಉ)        ಗ್ರಾಮಗಳ ಗುಂಪುಗಳ ಹಂತದಲ್ಲಿ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆಗಾಗಿ ಎಲ್ಲ ಮತ ಕ್ಷೇತ್ರಗಳಲ್ಲಿಯೂ ತಾಲ್ಲೂಕು ಪಂಚಾಯತಿಗಳ ನಾಯಕತ್ವದಲ್ಲಿ ಅಗತ್ಯವಿರುವ ಭೂಮಿಯನ್ನು ಖರೀದಿಸಬೇಕಾಗಿದ್ದು ಇದಕ್ಕೆ ಹೆಚ್ಚುವರಿ ಅನುದಾನದ ಅಗತ್ಯವಿದೆ.

ಒಟ್ಟಾರೆಯಾಗಿ ರಾಜ್ಯ ನಾಲ್ಕು ಹಣಕಾಸು ಆಯೋಗಗಳು ಪಂಚಾಯತ್‌ರಾಜ್ ಸಂಸ್ಥೆಗಳ ಹಣಕಾಸು ಸ್ಥಿತಿಗತಿಯನ್ನು ವಿಶ್ಲೇಷಣೆ ಮಾಡಲು ಪ್ರಯತ್ನಿಸಲಾಗಿದೆ. ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿಗಳು ಸಂಪನ್ಮೂಲಕ್ಕಾಗಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಅನುದಾನವನ್ನು ಅವಲಂಬಿಸಿವೆ. ಏಕೆಂದರೆ ಅವುಗಳಿಗೆ ಸ್ವಂತ ರಾಜಸ್ವ ಮೂಲಗಳಿಲ್ಲ. ಆದರೆ ಗ್ರಾಮ ಪಂಚಾಯತಿಗಳಿಗೆ ಸ್ವಂತ ರಾಜಸ್ವ ಮೂಲಗಳಿವೆ ಮತ್ತು ಅವು ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಂದಲೂ ಅನುದಾನ ಪಡೆಯುತ್ತವೆ. ಈ ಅಧ್ಯಾಯದಲ್ಲಿ ಗಮನವು ಮುಖ್ಯವಾಗಿ ಗ್ರಾಮ ಪಂಚಾಯತಿಗಳ ಹಣಕಾಸು ಸ್ಥಿತಿಗತಿಗೆ ನೀಡಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಗ್ರಾಮ ಪಂಚಾಯತಿಗಳ ರಾಜಸ್ವದ ಒಟ್ಟು ಬೇಡಿಕೆಯಲ್ಲಿ ಸಂಗ್ರಹದ ಪ್ರಮಾಣ ಕೇವಲ ಶೇ. ೧೮.೧೩. ರಾಜಸ್ವಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಗಳ ಸ್ಥಿತಿ ಮತ್ತು ಸಂಪನ್ಮೂಲ ಅಡಿಪಾಯ ಎಷ್ಟು ದುರ್ಬಲವಾಗಿದೆ ಎಂಬುದು ಇದರಿಂದ ತಿಳಿಯುತ್ತದೆ. ಮೂಲ ಸೇವೆಗಳನ್ನು ಒದಗಿಸುವಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತಂತೆ ಆಯೋಗವು ಪ್ರಾಯೋಜಿಸಿದ್ದ ಅಧ್ಯಯನವು ಗುರುತಿಸಿರುವ ತೊಡಕುಗಳನ್ನು ಮತ್ತು ಅದು ಮಂಡಿಸಿರುವ ಸಲಹೆಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇವುಗಳಲ್ಲದೆ ಪಂಚಾಯತ್‌ರಾಜ್ ಸಂಸ್ಥೆಗಳ ಯೋಜನೆ ಮತ್ತು ಯೋಜನೇತರ ವೆಚ್ಚಗಳನ್ನು ಮೂರು ಹಂತಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಚರ್ಚೆ ಮಾಡಲಾಗಿದೆ. ರಾಜ್ಯದ ಉದ್ದರಿಯೇತರ ನಿವ್ವಳ ಸ್ವಂತ ರಾಜಸ್ವ ಸ್ವೀಕೃತಿಯಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ೨೦೦೧-೦೨ರಲ್ಲಿ ವರ್ಗಾವಣೆ ಮಾಡಿದ್ದ ಪ್ರಮಾಣ ಶೇ.೩೯.೬೩. ಇದು ೨೦೧೬-೧೭ರಲ್ಲಿ ಶೇ ೩೪.೭೮ಕ್ಕಿಳಿದಿದೆ. ರಾಜ್ಯದಲ್ಲಿರುವ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ನಿಧಿಗಳನ್ನು ಬಿಡುಗಡೆ ಮಾಡುವ ಪ್ರಚಲಿತ ಪದ್ಧತಿಯನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ರಾಜಸ್ವದ ಮಟ್ಟವನ್ನು ಉತ್ತಮಪಡಿಸಲು ಅಗತ್ಯವಾದ ಕ್ರಮಗಳು, ವೆಚ್ಚದ ಮಾದರಿ ಹಾಗೂ ಹದಿಮೂರು ಮತ್ತು ಹದಿನಾಲ್ಕನೆಯ ಹಣಕಾಸು ಆಯೋಗಗಳು ಮಾಡಿದ ಅನುದಾನ ಸ್ವರೂಪದಲ್ಲಿನ ಬದಲಾವಣೆಗಳನ್ನು ಇಲ್ಲಿ ದಾಖಲಿಸಲಾಗಿದೆ. ಪಂಚಾಯತ್‌ರಾಜ್ ಸಂಸ್ಥೆಗಳ ಸಿಬ್ಬಂದಿಯ ವೇತನ ವೆಚ್ಚದ ಪ್ರಮಾಣವು ೨೦೦೪-೦೫ರಲ್ಲಿ ಶೇ೭೭.೦೪ರಿಂದ ೨೦೧೬-೧೭ರಲ್ಲಿ ಅದು ಶೇ.೭೧.೧೬ಕ್ಕಿಳಿಯಿತು. ಪಂಚಾಯತ್‌ರಾಜ್ ಸಂಸ್ಥೆಗಳ ಸ್ವಾಯತ್ತತೆಯ ಸ್ಥಿತಿಗೆ ಇರುವ ಪ್ರಮುಖ ಅಡ್ಡಿಯೆಂದರೆ ಅವುಗಳ ಕಾರ್ಯಗಳನ್ನು ಸಮಾನಾಂತರ ಅರೆ ಸರ್ಕಾರಿ ಸಂಸ್ಥೆಗಳು ಹಲವಾರು ಅಭಿವೃದ್ಧಿ ಕಾರ್ಯಗಳನ್ನು ನಿರ್ವಹಿಸುತ್ತಿರುವುದು. ಇದು ಅವುಗಳ ಸ್ವಾಯತ್ತತೆಯ ಮೇಲೆ ಪರಿಣಾಮ ಬೀರಿದ್ದು ಇದರಿಂದ ವಿಕೇಂದ್ರೀಕರಣ ತತ್ವವನ್ನು ದುರ್ಬಲಗೊಳಿಸಿದೆ.

ಅಧ್ಯಾಯ : ಏಳು

**ಪಂಚಾಯತ್ ರಾಜ್ ಸಂಸ್ಥೆಗಳ ಬಲವರ್ಧನೆಯಲ್ಲಿ ರಾಜ್ಯ ಚುನಾವಣಾ ಆಯೋಗದ ಪಾತ್ರ**

೭.೧. ಕರ್ನಾಟಕ ಚುನಾವಣಾ ಆಯೋಗದ ರಚನೆ ಮತ್ತು ಪ್ರಮುಖ ಕಾರ್ಯಗಳು

೭.೨. ಚುನಾವಣಾ ಆಯೋಗದ ಪಾತ್ರ ಮತ್ತು ಸ್ಥಾನಮಾನ

೭.೩. ಗ್ರಾಮ ಪಂಚಾಯಿತಿಗಳ ಚುನಾವಣೆಗಳಲ್ಲಿ ಚುನಾವಣಾ ಆಯೋಗದ ಕ್ರಮಗಳು.

## ಅಧ್ಯಾಯ-ಏಳು

# ಪಂಚಾಯತ್ ರಾಜ್ಯ ಸಂಸ್ಥೆಗಳ ಬಲವರ್ಧನೆಯಲ್ಲಿ ಕರ್ನಾಟಕ ಚುನಾವಣೆ ಆಯೋಗದ ಪಾತ್ರ

**ಪ್ರಸ್ತಾವನೆ:-**

ಪಂಚಾಯತ್ ರಾಜ್ ವ್ಯವಸ್ಥಾಯ ಅನುಷ್ಠಾನ ಆಯಾ ರಾಜ್ಯ ಸರ್ಕಾರಗಳ ಇಚ್ಛೆಗೆ ಒಳಪಡಿಸಲಾಗಿದ್ದು, ಈ ಹಿನ್ನೆಲೆಯಲ್ಲಿ ಕೆಲವು ರಾಜ್ಯಗಳು ಸಮಯಕ್ಕೆ ಸರಿಯಾಗಿ ಚುನಾವಣೆಗಳನ್ನು ನಡೆಸದೆ ಆಡಳಿತ ಅಧಿಕಾರಿಗಳನ್ನು ನೇಮಿಸಿ ಸ್ಥಳೀಯ ಸರ್ಕಾರಗಳ ಅಧಿಕಾರಿಗಳನ್ನು ಮೊಟ್ಟಕುಗೊಳಿಸಲಾಗಿತ್ತು. ಕಾಲಕಾಲಕ್ಕೆ ನಡೆದ ನಾಮನಿರ್ದೇಶಿತ ಸದಸ್ಯರು ಅನಿರ್ದಿಷ್ಟಾವದಿಯವರೆಗೆ ಮುಂದುವರಿಯುತ್ತಿದ್ದರು, ಸರ್ಕಾರವು ತನ್ನ ಮನಸೋ ಇಚ್ಛೆ ಚುನಾಯಿತರಿರುವ ಸಂಸ್ಥೆಗಳನ್ನು ವಿನಾಕಾರಣ ವಿಸರ್ಜನೆ ಮಾಡುವುದು ಆ ಸಂಸ್ಥೆಗಳಿಗೆ ಆಡಳಿತಾಧಿಕಾರಿಗಳನ್ನು ನೇಮಕಮಾಡಿ ಚುನಾವಣೆಗಳನ್ನು ಮುಂದುಡಲಾಗುತ್ತಿದ್ದು, ಇದನ್ನು ತಪ್ಪಿಸಲು ಮತ್ತು ಚುನಾಯಿತ ಸಂಸ್ಥೆಗಳಿಗೆ ಸಂವಿಧಾನತ್ಮಾಕ ಸ್ಥಾನಮಾನ ನೀಡಿ ಅಧಿಕಾರ ನೀಡಲು ಸಂವಿಧಾನಕ್ಕೆ ೭೩ನೇ ತಿದ್ದುಪಡಿ ಕಾಯ್ದೆ ತಂದು ಪಂಚಾಯಿತಿಗಳಿಗೆ ೫ ವರ್ಷಗಳೊಮ್ಮೆ ಚುನಾವಣೆಗಳನ್ನು ನಡೆಸುವುದು ಕಡ್ಡಾಯ ಮಾಡಲಾಯಿತು. ಚುನಾವಣ ಆಯೋಗದ ಪ್ರಕಾರ ಗ್ರಾಮ ಪಂಚಾಯಿತಿಗಳಿಗೆ ೪೦೦ ಜನಸಂಖ್ಯೆಗೆ ಒಬ್ಬ ಚುನಾಯಿತ ಪ್ರತಿನಿಧಿ, ತಾಲೂಕು ಪಂಚಾಯಿತಿಗೆ ೧೦೦೦೦ ಸಾವಿರ ಜನಸಂಖ್ಯೆಗೆ ಒಬ್ಬ ಚುನಾಯಿತ ಪ್ರತಿನಿಧಿಯಂತೆ ಹಾಗೂ ಜಿಲ್ಲಾ ಪಂಚಾಯಿತಿಗೆ ೪೦೦೦೦ ಜನಸಂಖ್ಯೆಗೆ ಒಬ್ಬ ಚುನಾಯಿತ ಪ್ರತಿನಿಧಿಯನ್ನು ಆಯ್ಕೆ ಮಾಡಬಹುದೆಂದು ತಿಳಿಸಿತು.

ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯನ್ನು ೧೯೫೧ ರಿಂದ ಭಾರತದ ಸಂವಿಧಾನ ಜಾರಿಗೆ ತಂದಿದೆ ಮತ್ತು ಇದು ನಮ್ಮ ಪ್ರಜಾತಾಂತ್ರಿಕ ವ್ಯವಸ್ಥೆಯ ಮೂಲ ಮಂತ್ರ ಆಗಿದೆ. ಏಕೆಂದರೆ, ಸಾತಂತ್ರ್ಯ ಪೂರ್ವದಲ್ಲಿ ಚುನಾವಣೆಗಳು ವ್ಯಾಪಕವಾಗಿ ಸಾರ್ವತ್ರಿಕವಾಗಿರದೆ ಸೀಮಿತ ಮತದಾನವಾಗಿತ್ತು. ಇದು ಕೆಲವು ಅರ್ಹತೆಗಳನ್ನು ಹೊಂದಿದವರಿಗೆ ಮಾತ್ರ

ದೊರಕುತ್ತಿತ್ತು(ಆಸ್ತಿ, ಅಂತಸ್ತು, ಶಿಕ್ಷಣ ಮುಂತಾದ ಸಮಾಜದ ಗಣ್ಯ ವ್ಯಕ್ತಿಗಳು ಇತ್ಯಾದಿ) ಅಂದರೆ ಚುನಾವಣೆ ಅಥವಾ ಮತದಾನವು ಹೆಚ್ಚಾಗಿ ಗಣ್ಯ ವರ್ಗದವರಿಗೆ ಮೀಸಲಿರಿಸಿದಂತಿತ್ತು.

ಆದರೆ ಸಾರ್ವತ್ರಿಕ ವಯಸ್ಕ ಮತದಾನದಿಂದಾಗಿ ಈ ಅನಿಷ್ಟಗಳು ಕಳೆದು ಸರ್ವರಿಗೂ ಕೆಲವೊಂದು ಅನರ್ಹತೆಗಳನ್ನು ಹೊರತುಪಡಿಸಿ ಉಳಿದಂತೆ ಮತದಾನದ ಹಕ್ಕನ್ನು ನೀಡಲಾಯಿತು. ಮೊದಲಿಗೆ ಮತದಾನದ ವಯಸ್ಸು ೨೧ ಇದ್ದಿದ್ದು. ಕೇಂದ್ರ ಸರ್ಕಾರವು ಸಂವಿಧಾನದ ೬೧ನೇ ತಿದ್ದುಪಡಿಯನ್ನು ೧೯೮೮ರಲ್ಲಿ ಸಂವಿಧಾನದ ೩೨೬ನೇ ವಿಧಿಗೆ ತಿದ್ದುಪಡಿಯನ್ನು ತರುವುದುರ ಮೂಲಕ ಮತದಾನದ ವಯಸ್ಸನ್ನು ೧೮ಕ್ಕೆ ಇಳಿಸಿ ಯುವಜನಾಂಗಕ್ಕೆ ಮತದಾನದ ಹಕ್ಕನ್ನು ಇನ್ನಷ್ಟು ವಿಸ್ತರಿಸಲಾಯಿತು.

ಈ ತಿದ್ದುಪಡಿಗೆ ಅನುಗುಣವಾಗಿ ಕರ್ನಾಟಕ ಸರ್ಕಾರವು ದೇಶದಲ್ಲಿ ಪ್ರಥಮ ಭಾರಿಗೆ ೧೯೮೩ರಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಯುವಾಗ ಮತದಾನದ ವಯಸ್ಸನ್ನು ೨೧ ರಿಂದ ೧೮ಕ್ಕೆ ಇಳಿಸಿ ಮತದಾನಕ್ಕೆ ಅವಕಾಶ ಮಾಡಿಕೊಟ್ಟ ಹೆಗ್ಗಳಿಕೆಗೆ ಕರ್ನಾಟಕ ಸರ್ಕಾರದಾಗಿದೆ.

ಸಂವಿಧಾನದ ಈ ತಿದ್ದುಪಡಿ ಮತ್ತು ಸ್ಥಳೀಯ ಸಂಸ್ಥೆಗಳ ಚುನಾವಣೆ ಇವೆರಡು ಕರ್ನಾಟಕದಲ್ಲಿ ಏಕಕಾಲಕ್ಕೆ ವರದಾನವದಂತಾಯಿತು ಎಂಬುವುದು ತಜ್ಞರ ಅಭಿಪ್ರಾಯವಾಗಿದೆ. ೧೯೯೩ರ ಕರ್ನಾಟಕ ಪಂಚಾಯತ್ ಕಾಯ್ದೆಯ ಅನುಗುಣವಾಗಿ ೨೦೦೦ನೇ ಸಾಲಿನ ಪಂಚಾಯತ್ ಚುನಾವಣೆಗಳು ಸಹ ಬಹಳಷ್ಟು ಆಸಕ್ತಿಯಿಂದ ಕೂಡಿದ್ದವು ಇಲ್ಲಿ ಬಹಳ ಆಶ್ಚರ್ಯಕರ ಬೆಳವಣಿಗೆಯೆಂದರೆ ಅಭ್ಯರ್ಥಿಗಳ ಅವಿರೋಧ ಆಯ್ಕೆಯಾಗಿರುವುದು ಕಂಡುಬರುತ್ತದೆ.

ಇದರಿಂದ ಗ್ರಾಮಸ್ಥರ ರಾಜಕೀಯ ಹಕ್ಕನ್ನು ಮೊಟಕುಗೊಳಿಸಿದಂತಾಗುತ್ತದೆ, ಪ್ರಜಾತಾಂತ್ರಿಕವಾದ ಮತದಾನದ ಹಕ್ಕು ಗ್ರಾಮಸ್ಥರ ಬರೀ ರಾಜಕೀಯ ಹಕ್ಕು ಮಾತ್ರವಲ್ಲ ಅದು ಜನಾಭಿಪ್ರಾಯ ಒಂದು ಸಾದನವಾಗಿದೆ.

ಸಂವಿಧಾನದ ೭೩ನೇ ತಿದ್ದುಪಡಿಯಿಂದಾಗಿ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ ಹಾಗೂ ಮಹಿಳೆಯರಿಗೆ ಸ್ಥಳೀಯವಾಗಿ ಚುನಾವಣೆ ಸ್ಪರ್ಧಿಸಲು ಶೇಕಡಾ ೫೦% ಮೀಸಲಾತಿ ನೀಡಿದ್ದು, ಇದರಿಂದ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಸದಸತ್ವ ಮತ್ತು ಹುದ್ದೆಗಳಲ್ಲಿ ಮೀಸಲಾತಿಯನ್ನು ವಿಸ್ತರಿಸಿದೆ. ಅದರೆ ಗ್ರಾಮ ಮಟ್ಟದಲ್ಲಿ ಇವುಗಳು ಹೇಗೆ ಅನುಷ್ಠಾಗೊನಳ್ಳುತ್ತಿವೆ. ಇಲ್ಲಿಯವರೆಗೆ ತಮ್ಮ ಹಿಡಿತದಲ್ಲಿದ್ದ ಅಧಿಕಾರದ ದ್ರುವೀಕರಣವನ್ನು ಬಲಾಡ್ಯ ಜಾತಿಗಳು ಕಾಯ್ದೆ ಕಟ್ಟಳೆಗಳು ತಿಳಿಸಿರುವಂತೆ ಸುಲಭವಾಗಿ ಬಿಟ್ಟುಕೊಡದಿರುವುದು ಪ್ರಸ್ತುತ ರಾಜಕೀಯ ಪರಿಸ್ಥಿತಿಯಲ್ಲಿ ಬಹುದೊಡ್ಡ

ಸಮಸ್ಯೆಯಾಗಿದೆ. ರಾಜಕೀಯ ವಿಕೇಂದ್ರಿಕರಣಕ್ಕೆ ಅರ್ಥ ಸಿಗಬೇಕಾದರೆ ಪಂಚಾಯತ್ ಸಂಸ್ಥೆಗಳಲ್ಲಿ ಕಾಯ್ದೆ ಅನುಸಾರವಾಗಿ ಜಾರಿಗೆ ತಂದರು ಇವು ವಿಕೇಂದ್ರಿಕರಣದ ಮೂಲ ಆಶಯಕ್ಕೆ ಧಕ್ಕೆ ಬರುವಂತಾಗಿದೆ. ವಂಚಿತ ವರ್ಗಗಳಿಗೆ ಈ ಪ್ರಾತಿನಿಧ್ಯ ಸಂಸ್ಥೆಗಳಲ್ಲಿ ನಿರ್ಣಾಯಕ ಪಾತ್ರ ನಿರ್ವಹಿಸುವ ವಾತಾವರಣ ನಿರ್ಮಾಣವಾಗಿರುವುದಿಲ್ಲ. ೧೯೯೦ರ ದಶಕದಿಂದೀಚೆಗೆ ಜಾಗತೀಕರಣ ಪ್ರಕ್ರಿಯೆಯ ಸಂದರ್ಭದಲ್ಲಿ ವಿಕೇಂದ್ರೀಕರಣವು ಜೊತೆ ಜೊತೆಗೆ ಸಾಗುತ್ತಿದೆ.

**೭.೧. ರಾಜ್ಯ ಚುನಾವಣಾ ಆಯೋಗ ರಚನೆ ಮತ್ತು ಪ್ರಮುಖ ಕಾರ್ಯಗಳು**

ಚುನಾವಣೆ ಆಯೋಗವು ಸಂವಿಧಾನವು ೧೫ನೇ ಭಾಗದಲ್ಲಿ ೩೨೪ ರಿಂದ ೩೨೯ನೇ ವಿಧಿಗಳು ವಿವರಣೆಯನ್ನು ನಿಡುತ್ತವೆ. ಸಂವಿಧಾನದ ೨೪೩ಕೆ ಮತ್ತು ೨೪೩ಎ ವಿಧಿಯ ಪ್ರಕಾರ ೨೦.೦೫.೧೯೯೩ ರಿಂದ ಕಾರ್ಯಾರಂಭಮಾಡಿ ಪಂಚಾಯತ್ ರಾಜ್ ಅಧಿನಿಯಮದ ೩೦೮ನೇ ಪ್ರಕರಣದ ಪ್ರಕಾರ ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ಚುನಾವಣೆಗಳನ್ನು ನಡೆಸಲು ವ್ಯವಸ್ಥೆ ಮಾಡಲು ರಾಜ್ಯದಲ್ಲಿ ಚುನಾವಣೆ ಆಯೋಗದ ರಚನೆ ಮಾಡಲಾಗಿದೆ.

ಪಂಚಾಯಿತಿ ರಾಜ್ಯ ವ್ಯವಸ್ಥೆಯ ಅನುಷ್ಠಾನ ಆಯಾ ರಾಜ್ಯ ಸರ್ಕಾರಗಳು ಇಚ್ಚೆಗೆ ಒಳಪಡಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಕೆಲವು ರಾಜ್ಯಗಳು ಸಮಯಕ್ಕೆ ಸರಿಯಾಗಿ ಚುನಾವಣೆಗಳನ್ನು ನಡೆಸದೆ ಆಡಳಿತಾಧಿಕಾರಿಗಳನ್ನು ನೇಮಿಸಿ ಸ್ಥಳೀಯ ಸರ್ಕಾರಗಳ ಅಧಿಕಾರಗಳನ್ನು ಮೊಟಕುಗೊಳಿಸಲಾಗಿತ್ತು. ಚುನಾವಣೆಗಳು ಕಾಲಕಾಲಕ್ಕೆ ನಡೆಯದೆ ನಾಮನಿರ್ದೇಶಿತ ಸದಸ್ಯರು ಅನಿರ್ದಿಷ್ಟಾವಧಿಗೆ ಮುಂದುವರೆಯುತ್ತಿದ್ದರು. ಸರ್ಕಾರವು ತನ್ನ ಮನಸೋ ಇಚ್ಚೆ ಚುನಾಯಿತಿರುವ ಸಂಸ್ಥೆಗಳನ್ನು ವಿನಾಕಾರಣ ವಿಸರ್ಜನೆ ಮಾಡುವುದು ಆ ಸಂಸ್ಥೆಗಳಿಗೆ ಆಡಳಿತಾಧಿಕಾರಿಗಳನ್ನು ನೇಮಕ ಮಾಡಿ ಚುನಾವಣೆಗಳನ್ನು ಮುಂದೂಡಲಾಗುತ್ತಿತ್ತು. ಇದನ್ನು ತಪ್ಪಿಸಲು ಮತ್ತು ಚುನಾಯಿತ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಸ್ಥಾನ ನೀಡಿ ಅಧಿಕಾರ ನೀಡಲು ಸಂವಿಧಾನಕ್ಕೆ ೭೩ನೇ ತಿದ್ದುಪಡಿ ತಂದು ೫ವರ್ಷಗಳಿಗೊಮ್ಮೆ ಚುನಾವಣೆಗಳನ್ನು ನಡೆಸುವುದು ಕಡ್ಡಾಯ ಮಾಡಲಾಯಿತು.

ಸಂವಿಧಾನಕ್ಕೆ ತಂದಿರುವ ೭೩ನೇ ತಿದ್ದುಪಡಿಯ ಪ್ರಮುಖ ಲಕ್ಷಣಗಳಲ್ಲಿ ಒಂದಾಗಿರುವ ರಾಜ್ಯ ಚುನಾವಣಾ ಆಯೋಗ್ಯದ ರಚನೆಯಾಗಿದೆ.

ಚುನಾವಣಾ ಆಯೋಗ ಸಂವಿಧಾನದ ೧೫ನೇ ಭಾಗದಲ್ಲಿ ೩೨೪ ರಿಂದ ೩೨೯ನೇ ವಿಧಿಗಳು ಚುನಾವಣಾ ಆಯೋಗದ ವಿವರ ಹೊಂದಿದೆ. ಸಂವಿಧಾನದ ೨೪೩ಎ ಮತ್ತು ೨೪೩ಕೆ ಪ್ರಕಾರ ೨೦.೦೯.೧೯೯೩ ರಿಂದ ಕಾರ್ಯರಂಭಮಾಡಿ ಪಂಚಾಯಿತಿ ರಾಜ್ ಅಧಿನಿಯಮದ ೩೦೮ನೇ ಪ್ರಕರಣದ ಪ್ರಕಾರ ಗ್ರಾಮ ಪಂಚಾಯಿತಿ ಚುನಾವಣೆಗಳಿಗಾಗಿ

ವ್ಯವಸ್ಥೆ ಮಾಡಲು ರಾಜ್ಯದಲ್ಲಿ ಚುನಾವಣೆ ಆಯೋಗದ ರಚನೆ ಮಾಡಲಾಗಿದೆ. ನಿರ್ದೇಶನಗಳನ್ನು ಪಾಲಿಸತಕ್ಕದ್ದಾಗಿರುತ್ತದೆ. ಭಾಗ-೯ ಮತ್ತು ಭಾಗ-೯ಎ ಪ್ರಕಾರ ಪಂಚಾಯತಿಗಳಿಗೆ ಚುನಾವಣೆಗಳನ್ನು ನಡೆಸುವಲ್ಲಿ ರಾಜ್ಯ ಚುನಾವಣಾ ಆಯೋಗವು ಭಾರತ ಚುನಾವಣಾ ಆಯೋಗ ಹೊಂದಿರುವ ಅಧಿಕಾರವನೇ ಹೊಂದಿರುತ್ತದೆ.

ರಾಜ್ಯ ಚುನಾವಣಾ ಆಯೋಗದ ಆಯುಕ್ತರನ್ನು ರಾಜ್ಯಪಾಲರು ನೇಮಕ ಮಾಡುತ್ತಾರೆ. ಉಚ್ಚ ನ್ಯಾಯಾಲಯದ ನ್ಯಾಯಧೀಶರಿಗೆ ಸರಿಸಮಾನವಾದ ಅಧಿಕಾರಗಳು, ಸವಲತ್ತುಗಳು ಹಾಗೂ ಸೇವಾ ಷರತ್ತುಗಳು ರಾಜ್ಯ ಚುನಾವಣಾ ಆಯುಕ್ತರಿಂದ. ರಾಜ್ಯ ಚುನಾವಣಾ ಆಯುಕ್ತರನ್ನು ತೆಗೆದುಹಾಕುವ ಅಧಿಕಾರ ಅಥವಾ ಆಯುಕ್ತ ಸೇವಾ ಅವಧಿಯನ್ನು ಮೊಟಕುಗೊಳಿಸುವುದಾಗಲೀ ಮಾಡಲು ರಾಜ್ಯ ಸರ್ಕಾರಕ್ಕೆ ಅಧಿಕಾರವಿಲ್ಲ. ಮುಖ್ಯವಾಗಿ ಈ ಪಂಚಾಯಿತಿಗಳು ಮತದಾರರ ಪಟ್ಟಿಗಳ ತಯಾರಿಕೆ ನಡೆಸುವುದು ಮೇಲ್ವಿಚಾರಣೆ ನಿರ್ದೇಶನ ಹಾಗೂ ನಿಯಂತ್ರಣ ಅಧಿಕಾರವನ್ನು ಹೊಂದಿರುತ್ತದೆ. ಆಯೋಗವು ಕರ್ತವ್ಯ ನಿರ್ವಹಿಸಲು ಅನುಕೂಲವಾಗುವಂತೆ ಅಗತ್ಯ ಅಧಿಕಾರ ಮತ್ತು ಸಿಬ್ಬಂದಿಯನ್ನು ಒದಗಿಸಲು ಸರ್ಕಾರವು ವ್ಯವಸ್ಥೆ ಮಾಡಬೇಕಾಗುತ್ತದೆ.

**೭.೨.ರಾಜ್ಯ ಚುನಾವಣಾ ಆಯೋಗದ ಪಾತ್ರ ಮತ್ತು ಸ್ಥಾನಮಾನ**

ಕರ್ನಾಟಕ ಸರ್ಕಾರವು ಪಂಚಾಯಿತಿಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩ರನ್ನು ಹೊಸದಾಗಿ ರಚಿಸಿ ಜಾರಿಗೆ ತಂದಿದೆ. ಈ ಅಧಿನಿಯಮದ ಅಡಿಯಲ್ಲಿ ಅನೇಕ ನಿಯಮಗಳನ್ನು ರಚಿಸಿದ್ದು ಅವುಗಳಲ್ಲಿ ಚುನಾವಣೆಗೆ ಸಂಬಂಧಿಸಿದಂತೆ ನಿಯಮಗಳಿರುತ್ತವೆ.

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು-೧೯೯೩.

ಗ್ರಾಮ ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಚುನಾವಣೆ ನಿಯಮಗಳು-೧೯೯೫

ಜಿಲ್ಲಾ ಪಂಚಾಯತ್ ಅಧ್ಯಕ್ಷ, ಉಪಾಧ್ಯಕ್ಷ ಚುನಾವಣೆ ನಿಯಮಗಳು-೧೯೯೪.

ತಾಲೂಕು ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಚುನಾವಣೆ ನಿಯಮಗಳು-೧೯೯೪

ಗ್ರಾಮ ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ವಿರುದ್ಧ ಅವಿಶ್ವಾಸ ಸೂಚನೆ ಮಂಡನೆ ನಿಯಮಗಳು-೧೯೯೪.

ಅದೇ ರೀತಿ ಸರ್ಕಾರವು ಪುರಸಭೆ (ನಗರ ಸ್ಥಳೀಯ ಸರ್ಕಾರಗಳು)ಗಳಿಗೆ ಸಂಬಂಧಿಸಿದಂತೆ ಇರುವ ಕರ್ನಾಟಕ ಮುನಿಸಿಪಲ್ ಅಧಿನಿಯಮ ೧೯೭೬ಗಳಲ್ಲಿ ಭಾರತ ಸಂವಿಧಾನಕ್ಕೆ ತಂದಿರುವ ೭೪ನೇ ತಿದ್ದುಪಡಿಯನ್ನು ಅನುಸರಿಸಿ ಮಾರ್ಪಾಡಿನೊಂದಿಗೆ ಜಾರಿಗೆಗೊಳಿಸಲಾಗಿದೆ.

ಕರ್ನಾಟಕ ಮುನ್ಸಿಪಾಲಿಟಿಸ್ (ಎಲೆಕ್ಷನ್ ಕೌನ್ಸಿಲರ್ಸ್) ರೂಲ್ಸ್ ೧೯೭೭.

ಕರ್ನಾಟಕ ಮುನ್ಸಿಪಾಲ್ ಕಾರ್ಪೋರೇಷನ್ (ಎಲೆಕ್ಷನ್) ರೂಲ್ಸ್ ೧೯೭೯.

ಈ ಮೇಲ್ಕಂಡ ಕಾಯ್ದೆ ಮತ್ತು ನಿಯಮಗಳಂತೆ ಗ್ರಾಮೀಣ/ನಗರ ಸ್ಥಳೀಯ ಸಂಸ್ಥೆಗಳು ಚುನಾವಣೆ ನಡೆಸಲಾಗುತ್ತದೆ.

**ಕಾರ್ಯಗಳು:–** ಪಂಚಾಯಿತಿ ರಾಜ್ ಸಂಸ್ಥೆಗಳು ಚುನಾವಣೆಗಳ ವೇಳೆಪಟ್ಟಿ ಸಿದ್ಧತೆ ಮೇಲಿಚಾರಣೆ, ನಿರ್ದೇಶನ ನಿಯಂತ್ರಣ, ಚುನಾವಣೆಗಳನ್ನು ನಡೆಸುವುದು.

ಈ ಕೆಲಸಗಳನ್ನು ನಿರ್ವಹಿಸಲು ರಾಜ್ಯಪಾಲರಿಂದ ನೇಮಿತವಾದ ಚುನಾವಣಾ ಆಯುಕ್ತರನ್ನು ಒಳಗೊಂಡು ಚುನಾವಣಾ ಆಯೋಗದ ನೇಮಿತ ಚುನಾವಣಾ ಆಯೋಗದ ಆಯುಕ್ತರ ಸೇವಾ ಷರತ್ತುಗಳನ್ನು ರಾಜ್ಯಪಾಲರು ನಿರ್ಧರಿಸುತ್ತಾರೆ.

**ಜಯಪ್ರಕಾಶ್ ನಾರಾಯಣರವರು** ತಮ್ಮ **"ಜನರಿಗಾಗಿಸ್ವರಾಜ್ಯ"**ಎಂಬ ಪುಸ್ತಕದಲ್ಲಿ ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಚುನಾವಣೆಗಳು ನಡೆಸುವುದು ಜನರಿಗೆ ಮತ ಚಲಾಯಿಸುವ ಅಧಿಕಾರವನ್ನು ಮಾತ್ರ ನೀಡಿಲ್ಲ, ಬದಲಾಗಿ ಸ್ಥಳೀಯ ಜನರ ಕರ್ತವ್ಯಗಳ ಅರಿವು, ಹಕ್ಕು ಹಾಗೂ ಆಡಳಿತದಲ್ಲಿ ಪಾಲ್ಗೊಳ್ಳುವಂತೆ ಮಾಡುವುದು,ಸ'ಕಾ೯ರ'ದ' ಯೋಜನೆಗಳ ಯಾರಿಗೆ ಮುಟ್ಟಿಸಲು ಉದ್ದೇಶಿಸಿದ್ದೇವೆಯೇ ಆ ಪ್ರಕ್ರಿಯೆಯಲ್ಲಿ ಜನರನ್ನು ಭಾಗಿಗಳನ್ನಾಗಿಸಿಕೊಳ್ಳುವುದಕ್ಕೆ ಎಂದಿದ್ದಾರೆ.

**ರಾಜ್ಯ ಚುನಾವಣಾ ಆಯೋಗದ ಸ್ಥಾನಮಾನ**

ರಾಜ್ಯ ಚುನಾವಣಾ ಆಯೋಗವು ಸಂವಿಧಾನಿಕ ಸಂಸ್ಥೆಯಾಗಿದ್ದು ಕೇಂದ್ರ ಚುನಾವಣಾ ಆಯೋಗವು ಹೊಂದಿರುತ್ತದೆ. ರಾಜ್ಯ ಚುನಾವಣಾ ಆಯೋಗವು ಚುನಾವಣೆಗಳನ್ನು ನಡೆಸಲು ಹೊಂದಿರುವ ಅಧಿಕಾರಗಳು ಕೇಂದ್ರ ಚುನಾವಣಾ ಆಯೋಗವು ಹೊಂದಿರುವ ಅಧಿಕಾರಕ್ಕಿಂತ ಕಡಿಮೆ ಇರುವುದಿಲ್ಲ. ಕೇಂದ್ರ ಚುನಾವಣಾ ಆಯೋಗವು ವಿಧಾನಸಭಾ ಹಾಗೂ ಲೋಕಸಭಾ ಚುನಾವಣೆಗಳನ್ನು ನಡೆಸುವ ಸಂದರ್ಭದಲ್ಲಿ ಹೊಂದಿರುವ ಅಧಿಕಾರವನ್ನೇ ರಾಜ್ಯ ಚುನಾವಣಾ ಆಯೋಗವು ಗ್ರಾಮ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಚುನಾವಣೆಗಳನ್ನು ನಡೆಸುವಾಗ ಹೊಂದಿರುತ್ತದೆ. ಆದುದರಿಂದ ರಾಜ್ಯ ಸರ್ಕಾರಗಳು ಸಂವಿಧಾನಿಕ ಸಂಸ್ಥೆಯಾದ ರಾಜ್ಯ ಚುನಾವಣಾ ಆಯೋಗದ ಸ್ಥಾನಮಾನವನ್ನು ಅರಿತು ಲೋಕಸಭಾ ಮತ್ತು ವಿಧಾನಸಭಾ ಚುನಾವಣೆಗಳ ಸಮಯದಲ್ಲಿ ಭಾರತ ಚುನಾವಣಾ ಆಯೋಗದ ನಿರ್ದೇಶನಗಳನ್ನು ಪಾಲಿಸುವಂತೆ ರಾಜ್ಯ ಚುನಾವಣಾ ಆಯೋಗಕ್ಕೆ ಸೂಚಿಸಲಾಗಿದೆ.

**ಚುನಾಯಿತ ಸದಸ್ಯರು:–**

ಪ್ರತಿ ನಾಲ್ಕು ನೂರು ಜನಸಂಖ್ಯೆಗೆ ಒಬ್ಬರಂತೆ ಚುನಾಯಿತರಾದ ಸದಸ್ಯರನ್ನು ಗ್ರಾಮ ಪಂಚಾಯಿತಿ ಒಳಗೊಂಡಿರತಕ್ಕದ್ದು. ರಾಜ್ಯ ಚುನಾವಣೆ ಆಯೋಗದ ಸಾಮಾನ್ಯ

ಆದೇಶಗಳಿಗೆ ಒಳಪಟ್ಟ ಚುನಾಯಿತರಾಗಬೇಕಾದ ಸದಸ್ಯರ ಸಂಖ್ಯೆ ಎಷ್ಟು ಎಂಬುವುದರ ಬಗೆಗಿನ ನಿರ್ಧಾರವನ್ನು ತಿಳಿಸುತ್ತದೆ.

**ಮೀಸಲಾತಿ:-**

ಗ್ರಾಮ ಪಂಚಾಯಿತಿಯಲ್ಲಿ

ಅ) ಅನುಸೂಚಿತ ಜಾತಿಗಳಿಗೆ;

ಆ) ಅನುಸೂಚಿತ ಬುಡಕಟ್ಟುಗಳಿಗೆ;

ಇ) ಹಿಂದುಳಿದ ವರ್ಗಗಳಿಗೆ

ಈ) ಮಹಿಳೆಯರಿಗೆ

ಹೀಗೆ ಆಯೋಗವು ಮೀಸಲಾತಿಯನ್ನು ನಿರ್ಧರಿಸಿರುತ್ತದೆ.

**ಚುನಾವಣೆ ಕ್ಷೇತ್ರಗಳು :-**

ಸದಸ್ಯರ ಚುನಾವಣೆಯ ಉದ್ದೇಶಕ್ಕಾಗಿ ಪಂಚಾಯಿತಿ ಕ್ಷೇತ್ರವನ್ನು ಚುನಾವಣೆ ಕ್ಷೇತ್ರಗಳಾಗಿ ವಿಭಜಿಸತಕ್ಕದ್ದು. ರಾಜ್ಯ ಚುನಾವಣೆ ಆಯೋಗದ ಆದೇಶಗಳಿಗೆ ಒಳಪಟ್ಟು ಜಿಲ್ಲಾಧಿಕಾರಿಗಳು ಕ್ಷೇತ್ರಗಳಲ್ಲಿ ಅನುಸೂಚಿತ ಜಾತಿಗಳು, ಬುಡಕಟ್ಟುಗಳು 'ಎ' ಪ್ರವರ್ಗದ ಹಿಂದುಳಿದ ವರ್ಗಗಳು 'ಬಿ' ವರ್ಗದ ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ ಸ್ಥಾನಗಳನ್ನು ಮೀಸಲಿಡುವುದು.

**ಚುನಾವಣೆ :-**

ಅಗತ್ಯವಾಗಿರುವಷ್ಟು ಸಂಖ್ಯೆಯ ಸದಸ್ಯರನ್ನು ಚುನಾಯಿಸುವ ಸಲುವಾಗಿ ಗ್ರಾಮ ಪಂಚಾಯಿತಿಗೆ ಚುನಾವಣೆಗಳನ್ನು ನಡೆಸತಕ್ಕದ್ದು ರಾಜ್ಯ ಚುನಾವಣಾ ಆಯೋಗ ಚುನಾಯಿತ ಸದಸ್ಯರ ಹೆಸರುಗಳನ್ನು ಪ್ರಕಟಿಸತಕ್ಕದ್ದು ಅಗತ್ಯವಾಗಿರುವಷ್ಟು ಸಂಖ್ಯೆಯ ಸದಸ್ಯರು ಚುನಾಯಿತರಾಗಿ ಬರೆದ ಹೋದ ಸಂದರ್ಭದಲ್ಲಿ ಚುನಾಯಿತ ಸದಸ್ಯರುಗಳ ಹೆಸರುಗಳನ್ನು ಪ್ರಕಟಿಸಿದ ದಿನಾಂಕದಿಂದ ಹಿಡಿದು ಒಂದು ತಿಂಗಳ ಒಳಗಾಗಿ ರಾಜ್ಯದ ಚುನಾವಣಾ ಆಯೋಗ ಮತ್ತೆ ಚುನವಣೆಯನ್ನು ನಡೆಸತಕ್ಕದ್ದು. ಒಟ್ಟಾರೆ ಸದಸ್ಯರ ಸಂಖ್ಯೆಯು ಮೂರನೆಯ ಎರಡರಷ್ಟು ಸಂಖ್ಯೆಯು ಸದಸ್ಯರು ಚುನಾಯಿತರಾಗಿ ಬಂದಿದ್ದಲ್ಲಿ ಗ್ರಾಮ ಪಂಚಾಯಿತಿ ವಿಧ್ಯುಕ್ತವಾಗಿ ರಚಿತವಾಗಿದೆ ಎಂದು ಪರಿಗಣಿಸತಕ್ಕದ್ದು, ಜಿಲ್ಲಾಧಿಕಾರಿಗಳು ಚುನಾಯಿತ ಸದಸ್ಯರ ಹೆಸರುಗಳನ್ನು ಪ್ರಕಟಿಸತಕ್ಕದ್ದು ಎಂದು ಆಯೋಗವು ತಿಳಿಸುತ್ತದೆ.

**ಅಧಿಕಾರಾವಧಿ:**

ಚುನಾಯಿತ ಸದಸ್ಯರು ಐದು ವರ್ಷಗಳ ಅವಧಿಯವರೆಗೆ ಸದಸ್ಯತ್ವದ ಅಧಿಕಾರವನ್ನು ಹೊಂದಿರುತ್ತಾರೆ. ಪ್ರಕರಣ ೪೯ ಮತ್ತು ೪೨ರ ಪ್ರಕಾರ ಸಾರ್ವತ್ರಿಕ ಚುನಾವಣೆಯ ಬಳಿಕ,

ಗ್ರಾಮ ಪಂಚಾಯಿತಿಯ ಮೊದಲು ಸಭೆಗೆ ನಿಗದಿಪಡಿಸಲಾದ ದಿನಾಂಕದಿಂದ ಹಿಡಿದು ಸದಸ್ಯರ ಅಧಿಕಾರಾವಧಿ ಆರಂಭಗೊಳ್ಳತಕ್ಕದ್ದು.

**ಆಡಳಿತಾಧಿಕಾರಿಗಳ ನೇಮಕ**– ಜಿಲ್ಲಾಧಿಕಾರಿಗಳು ಗ್ರಾಮ ಪಂಚಾಯಿತಿಯನ್ನು ಸ್ಥಾಪಿಸಿದ ನಂತರ ಗ್ರಾಮ ಪಂಚಾಯಿತಿ ಚುನಾವಣೆ ನಡೆಸುವುದಕ್ಕೆ ಯಾವುದೇ ತೊಂದರೆ ಇದ್ದರೆ ನಡೆಸಿದ ೨ ಅನುಕ್ರಮ ಚುನಾವಣೆಗಳಲ್ಲಿ ಚುನಾಯಿತ ಸದಸ್ಯರನ್ನು ಚುನಾಯಿಸಲು ವಿಫಲರಾದರೆ ಸಾರ್ವತ್ರಿಕ ಚುನಾವಣೆಯಲ್ಲಿ ೨/೩ಕ್ಕಿಂತ ಕಡಿಮೆ ಸದಸ್ಯರು ಚುನಾಯಿತರಾಗಿದ್ದರೆ, ಜಿಲ್ಲಾಧಿಕಾರಿಗಳು ಅಧಿಸೂಚನೆಯ ಮೂಲಕ ಚುನಾಯಿತರಾಗಲು ಅರ್ಹರಾದ ವ್ಯಕ್ತಿಗಳನ್ನು ಒಳಗೊಂಡ ಆಡಳಿತ ಸಮಿತಿಯನ್ನು ರಚಿಸತಕ್ಕದ್ದು, ಅಂಥ ವ್ಯಕ್ತಿಗಳ ಸಂಖ್ಯೆಯು ಗ್ರಾಮ ಪಂಚಾಯಿತಿಯ ಸದಸ್ಯರ ಸಂಖ್ಯೆಗೆ ಸಮವಾಗಿರತಕ್ಕದ್ದು, ಆಡಳಿತ ಸಮಿತಿಯ ಸದಸ್ಯರ ಅವಧಿ ಜಿಲ್ಲಾಧಿಕಾರಿಗಳು ಸೂಚಿಸುವಂತೆ ೬ ತಿಂಗಳು ಮೀರದಂತೆ ಅವಧಿಯವರೆಗೆ ಹುದ್ದೆಯನ್ನು ಅಲಂಕರಿಸತಕ್ಕದ್ದು.

ಆಡಳಿತ ಅಧಿಕಾರಿಗಳ ನೇಮಕ ಮಾಡಿದ ನಂತರ ಜಿಲ್ಲಾಧಿಕಾರಿಗಳಿಗೆ ಸದಸ್ಯರ ಚುನಾವಣೆಯ ಮೂಲಕ ಗ್ರಾಂಮ ಪಂಚಾಯಿತಿಯನ್ನು ಕ್ರಮಬದ್ಧವಾಗಿ ರಚಿಸಲು ಯಾವುದೇ ಯಾವುದೇ ತೊಂದರೆ ಇಲ್ಲ ಎಂದು ಮನದಟ್ಟಾದರೆ ಆಡಳಿತಾಧಿಕಾರಿಗಳ ಅವಧಿ ಮುಕ್ತಾಯವಾಗುವುದಕ್ಕಿಂತ ಮೊದಲೇ ಅಧಿಸೂಚನೆಯ ಮೂಲಕ ಆಡಳಿತಾಧಿಕಾರಿಗಳ ಅಧಿಕಾರ ಅವಧಿ ನಿಂತು ಹೋಗುವುದೆಂದು ನಿರ್ದೇಶಿಸಬಹುದು.

**ಮತಾದರ ಪಟ್ಟಿ:**– ಗ್ರಾಮ ಪಂಚಾಯಿತಿಯ ಚುನಾವಣಾ ಕ್ಷೇತ್ರಕ್ಕಾಗಿ ಮತದಾರರ ಪಟ್ಟಿಯನ್ನು ತಹಶೀಲ್ದಾರರು ತಯಾರಿಸತಕ್ಕದ್ದು, ಕಾರ್ಯದರ್ಶಿ ಅದನ್ನು ಇಟ್ಟುಕೊಂಡಿರತಕ್ಕದ್ದು, ಈ ಮತದಾರ ಪಟ್ಟಿಯಲ್ಲಿ ಹೆಸರಿರುವ ಪ್ರತಿಯೊಬ್ಬರು ಒಂದು ಮತ ಚಲಾಯಿಸಲು ಅರ್ಹರಾಗಿರುತ್ತಾರೆ. ಹಾಗೂ ಕಾನೂನಿನ ಅಡಿಯಲ್ಲಿ ಅನರ್ಹಗೊಳ್ಳದ ಹೊರತು ಗ್ರಾಮ ಪಂಚಾಯಿತಿ ಸದಸ್ಯನಾಗಿ ಆಯ್ಕೆಯಾಗಲು ಅರ್ಹನಾಗಿರುತ್ತಾರೆ.

**ಅನರ್ಹತೆ:**

೧. ರಾಜ್ಯ ವಿಧಾನ ಮಂಡಲ ಚುನಾವಣೆಗಳಿಗೆ ನಡೆಯುವ ಚುನಾವಣೆಯ ಉದ್ದೇಶಕ್ಕಾಗಿ ಕಾನೂನಿನ ಮೂಲಕ ಅನರ್ಹಗೊಳಿಸಿದ್ದರೆ(ಆದರೆ ೨೫ ವರ್ಷ ಆಗಿಲ್ಲವೆಂದು ಅನರ್ಹಗೊಳಿಸಬಾರದು)

೨. ಅಪರಾಧ ಸಂಬಂಧದಲ್ಲಿ ಕ್ರಿಮಿನಲ್ ನ್ಯಾಯಾಲಯವು ೩ ತಿಂಗಳನ್ನು ಮೀರಿ ಕಾರಾಗೃಹ ಶಿಕ್ಷೆ ವಿಧಿಸಿದ್ದರೆ ಅಥವಾ ಅದನ್ನು ರದ್ದುಗೊಳಿಸದಿದ್ದರೆ

೩. ಯಾವುದೇ ಸ್ಥಳಿಯ ಪ್ರಾಧಿಕಾರದಲ್ಲಿ ಇರುವ ಸೇವೆಯಿಂದ ವಜಾ ಮಾಡಿದ್ದರೆ

೪. ಲೀಗಲ್ ಅಥವಾ ಮೆಡಿಕಲ್ ಪ್ರಾಕ್ಟೀಷನರ್ ಆಗಿ ಸಕ್ಷಮ ಪ್ರಾಧಿಕಾರಿಯು ಆದೇಶದ ಮೂಲಕ ಅವನನ್ನು ಪಟ್ಟಿಯಿಂದ ತೆಗೆದು ಹಾಕಿದ್ದರೆ.
೫. ಕೇಂದ್ರ ರಾಜ್ಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೆ ಒಳಪಟ್ಟಿರುವ ಯಾವುದೇ ಪ್ರಾಧಿಕಾರದಲ್ಲಿ ಲಾಭದಾಯಕ ಹುದ್ದೆ ಹೊಂದಿದ್ದರೆ.
೬. ಗ್ರಾಮ ಪಂಚಾಯಿತಿಗೆ ಅವನಿಂದ ಯಾವುದೇ ಬಗೆಯ ಬಾಕಿ ಇದ್ದರೆ

**ಸ್ಥಾನಖಾಲಿ :-**

ಪ್ರಕರಣ ೧೩ರ ಪ್ರಕಾರ ಗ್ರಾಮ ಪಂಚಾಯಿತಿ ಅನುಮತಿ ಇಲ್ಲದೆ ಗ್ರಾಮ ಪಂಚಾಯಿತಿಯ ೩ ಕ್ಕಿಂತ ಹೆಚ್ಚು (ಅನುಕ್ರಮ) ಸಾಮಾನ್ಯ ಸಭೆಗಳಿಗೆ ಗೈರು ಹಾಜರಾದರೆ ಅಥವಾ ೪ ತಿಂಗಳಿಗಿಂತ ಹೆಚ್ಚುಕಾಲ ಪಂಚಾಯಿತಿ ಪ್ರದೇಶದಲ್ಲಿ ಇಲ್ಲದಿದ್ದರೆ ಸ್ಥಾನವು ಖಾಲಿಯಾಗಿದೆ ಎಂದು ಭಾವಿಸುವುದು. ಆದರೆ ಗೈರು ಹಾಜರಿಗಾಗಿ ಗ್ರಾಮಪಂಚಾಯಿತಿಗೆ ಅರ್ಜಿ ಸಲ್ಲಿಸಿದಲ್ಲಿ ಅರ್ಜಿಸಲ್ಲಿಸಿದ ದಿನದಿಂದ ೧ ತಿಂಗಳೊಳಗೆ ಗ್ರಾಮ ಪಂಚಾಯಿತಿ ಅನುಮತಿ ನೀಡಬೇಕು. ತಪ್ಪಿದ್ದಲ್ಲಿ ಗ್ರಾಮ ಪಂಚಾಯಿತಿ ಮಂಜೂರು ಮಾಡಿರುವುದಾಗಿ ಭಾವಿಸತಕ್ಕದ್ದು.

**ಸದಸ್ಯರ ರಾಜೀನಾಮೆ:**

ಗ್ರಾಮ ಪಂಚಾಯಿತಿ ಸದಸ್ಯರು ತನ್ನ ಸದಸ್ಯತ್ವಕ್ಕೆ ತನ್ನ ಸಹಿತ ಅಧ್ಯಕ್ಷರಿಗೆ ರಾಜೀನಾಮೆ ನೀಡಬಹುದು. ಕೊಟ್ಟ ೧೫ ದಿನಗಳಲ್ಲಿ ವಾಪಸ್ ಪಡೆಯಬಹುದು. ೧೫ ದಿನಗಳ ಒಳಗಡೆ ವಾಪಸ್ ಪಡೆಯದಿದ್ದರೆ ಸ್ಥಾನವು ತೆರವಾಗುತ್ತದೆ. ಆ ರಾಜೀನಾಮೆ ಪತ್ರವನ್ನು ಮುಂದಿನ ಸಭೆಯಲ್ಲಿ ಅಧ್ಯಕ್ಷರು ಮಾಡಿಸುವಂತೆ ಮಾಡುವುದು.

**ಸದಸ್ಯತ್ವದಿಂದ ತೆಗೆದುಹಾಕುವುದು:**

ಸದಸ್ಯರು ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೆ ದುರ್ನಡತೆಯಿಂದ ನಡೆದುಕೊಂಡರೆ ಸದಸ್ಯನಾಗಿಕರ್ತವ್ಯ ನಿರ್ವಹಿಸಲು ಅಸಮರ್ಥನಾದರೆ ಸರ್ಕಾರವು ಗ್ರಾಮ ಪಂಚಾಯಿತಿಯ ಶಿಫಾರಸಿನ ಮೇರೆಗೆ (ಅವನು ತನ್ನ ಅಹವಾಲು ಹೇಳಿಕೊಳ್ಳಲು ಅವಕಾಶ ನೀಡಿ ವಿಚಾರಣೆ ನಡೆಸಿದ ನಂತರ) ಸದಸ್ಯತ್ವದಿಂದ ತೆಗೆದುಹಾಕಬಹುದು.

**ಪಂಚಾಯತಿಯ ಕ್ಷೇತ್ರದ ಸಂಯೋಜನೆ ಅಥವಾ ವಿಭಜನೆ ಪಂಚಾಯಿತಿಯ ಕ್ಷೇತ್ರದಲ್ಲಿ ಬದಲಾವಣೆ:**

ಪಂಚಾಯಿತಿಯ ಕ್ಷೇತ್ರದ ಬಗೆಗಿನ ಘೋಷಣೆ ಮಾಡಿದ ಬಳಿಕ ಯಾವುದೇ ಸಮಯದಲ್ಲಿ ಈ ಕೆಳಗೆ ಕಾಣಿಸಲಾಗಿರುವ ವರ್ಗಗಳ ಬದಲಾವಣೆಗಳು ಉಂಟಾಗುವ ಸಂಭವ ಇರುತ್ತವೆ ಅವು ಯಾವುವೆಂದರೆ:

ಎ) ಪಂಚಾಯಿತಿಯ ಕ್ಷೇತ್ರಗಳ ಸಂಯೋಜನೆ ; ಅಥವಾ

ಬಿ) ಪಂಚಾಯಿತಿಯ ಕ್ಷೇತ್ರಗಳ ವಿಭಜನೆ; ಅಥವಾ

ಸಿ) ಒಂಚು ಪಂಚಾಯಿತಿಯ ಕ್ಷೇತ್ರದ ಒಂದು ಭಾಗವನ್ನು ಇನ್ನೊಂದು ಪಂಚಾಯಿತಿಯ ಕ್ಷೇತ್ರದಲ್ಲಿ ವಿಲೀನಗೊಳಿಸುವುದು. ಅಧಿನಿಯಮದ (೪)ನೇಯ ಪ್ರಕರಣದ ಮೇರೆಗೆ ಸಂಯೋಜನೆ, ವಿಭಜನೆ ಮತ್ತು ವೀಲಿನೀಕರಣವನ್ನು ಘೋಷಿಸಲಾಗುತ್ತದೆ.

**ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆ ತೆರವಾದಲ್ಲಿ :**

ಎ) ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆ ಆಕಸ್ಮಿಕವಾಗಿ ಖಾಲಿಯಾಗಿರುವ ಹುದ್ದೆಯಾಗಿದ್ದಲ್ಲಿ, ಮೇಲಿನ ಮಾರ್ಗದರ್ಶಕ ಸೂತ್ರಗಳನ್ನು ದೃಷ್ಟಿಯಲ್ಲಿ ಇರಿಸಿಕೊಂಡು ಗ್ರಾಮ ಪಂಚಾಯಿತಿಯ ಸದಸ್ಯರು ಪ್ರಕರಣ ೪೪ರ ಪ್ರಕಾರ ತಮ್ಮಲ್ಲಿಯೇ ಒಬ್ಬರನ್ನು ಚುನಾವಣೆಯ ಮೂಲಕ ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನಾಗಿ ಆಯ್ದುಕೊಳ್ಳತಕ್ಕದ್ದು.

ಏ) ಪ್ರಕರಣ ೪೭ರ ಪ್ರಕಾರ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳೆರಡೂ ಖಾಲಿ ಇದ್ದಲ್ಲಿ ವಿಧ್ಯುಕ್ತವಾಗಿ ಅಧ್ಯಕ್ಷರ ಆಯ್ಕೆಯಾಗುವವರೆಗೆ, ಜಿಲ್ಲಾಧಿಕಾರಿಗಳು ನೇಮಿಸಿದ ಯಾವುದೇ ಅಧಿಕಾರಿ ಅಧ್ಯಕ್ಷರ ಅಧಿಕಾರಿಗಳನ್ನು ಚಲಾಯಿಸತಕ್ಕದ್ದು ಹಾಗೂ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

ಹುದ್ದೆ ಖಾಲಿಯಾಗಿರುವುದು ಎಂದರೆ ಪದಾಧಿಕಾರಿಗಳು ಕಛೇರಿಗೆ ಗೈರುಹಾಜರಾಗಿರುವುದು ಎಂದು ಅರ್ಥ ಅದ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗೆ ಚುನಾವಣೆ ನಡೆಯದೆ ಇದ್ದಲ್ಲಿ, ಈ ಹುದ್ದೆ ವಾಸ್ತವವಾಗಿ ಖಾಲಿಯಾಗಿದೆ ಎಂದೇ ಅರ್ಥ, ಆ ಸಂದರ್ಭದಲ್ಲಿ ಅಧಿನಿಯಮದ ೪೭ನೆಯ ಪ್ರಕರಣದ ಮೇರೆಗೆ ತಮ್ಮ ಅಧಿಕಾರಗಳನ್ನು ಚಲಾಯಿಸಲು ಜಿಲ್ಲಾಧಿಕಾರಿಗಳು ಸ್ವತಂತ್ರರಾಗಿರುತ್ತಾರೆ.

**ಚುನಾವಣೆಗಳನ್ನು ನಡೆಸುವುದು**

ಎ) ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ) ನಿಯಮಗಳು, ೧೯೯೫ರ ಉಪಬಂಧಗಳಿಗೆ ಅನುಗುಣವಾಗಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಚುನಾವಣೆಗಳನ್ನು ನಡೆಸತಕ್ಕದ್ದು ಹೊಸದಾಗಿ ರಚಿತವಾದ ಗ್ರಾಮ ಪಂಚಾಯಿತಿಯ ಮೊದಲ ಸಭೆಯ ದಿನಾಂಕದಂದು ಅಥವಾ ಸಂದರ್ಭಾನುಗುಣವಾಗಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾಣೆಯ ಉದ್ದೇಶಕ್ಕಾಗಿಯೇ ಸಮಾವೇಶಗೊಳಿಸಲಾಗುವ ಮುಂದಿನ ಸಭೆಯ ದಿನಾಂಕದಂದು ಈ ಚುನಾವಣೆಗಳನ್ನು ನಡೆಸಲು ನಿಗದಿಪಡಿಸಲಾದ ಅಧಿಕಾರಿಗಳು ಅಂದರೆ ತಹಶೀಲ್ದಾರ ಅವರು ಅಥವಾ ಜಿಲ್ಲಾಧಿಕಾರಿಗಳಿಂದ ಈ ಉದ್ದೇಶಕ್ಕಾಗಿ ನಾಮನಿರ್ದೇಶಿತರಾದ ತಹಶೀಲ್ದಾರರ ದರ್ಜೆಗಿಂತ ಕೆಳಗಿನವರಲ್ಲದ ಯಾವುನೇ ಅಧಿಕಾರಿ-ಗೊತ್ತುಪಡಿಸಿದ ದಿನಾಂಕದಂದು ಈ ಚುನಾಣೆಗಳನ್ನು

ನಡೆಸತಕ್ಕದ್ದು ಗ್ರಾಮ ಪಂಚಾಯಿತಿಯ ಎಲ್ಲ ಸದಸ್ಯರಿಗೂ ವಿಧ್ಯುಕ್ತವಾಗಿ ಮುನ್ಸೂಚನೆ ನೀಡಿದ ಒಳಿಕ ಈ ಚುನಾವಣೆಗಳನ್ನು ನಡೆಸತಕ್ಕದ್ದು. ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಚುನಾವಣೆ ನಡೆಸಲಾಗುವ ಸಭೆಗೆ ಗೊತ್ತುಪಡಿಸಲಾಗಿರುವ ಕೋರಂ ಅಥವಾ ಕನಿಷ್ಠ ಸದಸ್ಯ ಸಂಖ್ಯೆ ಗ್ರಾಮ ಪಂಚಾಯಿತಿಯ ಇತರ ಸಭೆಗಳಿಗೆ ಗೊತ್ತುಪಡಿಸಿರುವುದೇ ಆಗಿರುತ್ತದೆ.

**ಅಧಿಕಾರಾವಧಿ:-**

ಪ್ರಕರಣ ೪೬ರ ಪ್ರಕಾರ ಗ್ರಾಮಪಂಚಾಯಿತಿಯ ಪ್ರತಿಯೊಬ್ಬ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಅಧಿಕಾರಾವಧಿ ಈ ಅಧಿನಿಯಮದಲ್ಲಿ ಬೇರೆ ಕಡೆ ಹೇಳಿರುವುದನ್ನು ಹೊರತುಪಡಿಸಿ ಅವರು ಚುನಾಯಿತರಾದ ದಿನದಿಂದ ಮೂವತ್ತು ತಿಂಗಳವರೆಗೆ ಅಥವಾ ಗ್ರಾಮ ಪಂಚಾಯಿತಿಯ ಸದಸ್ಯರಾಗಿ ಅವರ ಅಧಿಕಾರಾವಧಿ-ಕೊನೆಗೊಳ್ಳುವ ವರೆಗೆ ಇರತಕ್ಕದ್ದು (ಪ್ರಕರಣ ೪೮) ಆಕಸ್ಮಿಕವಾಗಿ ಖಾಲಿಬಿದ್ದ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಯನ್ನು ತುಂಬಲು ಅಧ್ಯಕ್ಷ ಮತ್ತು ಉಪಾಧ್ಯಕ್ಷರಾಗಿ ಚುನಾಯಿತರಾದ ಸದಸ್ಯರು ಈ ಹುದ್ದೆ ಖಾಲಿ ಬೀಳದೆ ಇದ್ದಲ್ಲಿ, ಯಾವ ವ್ಯಕ್ತಿಯ ಸ್ಥಾನಕ್ಕೆ ಅವರು ಚುನಾಯಿತರಾಗಿದ್ದರೋ ಆ ವ್ಯಕ್ತಿ ಎಲ್ಲಿಯವರೆಗೆ ಈ ಹುದ್ದೆಯನ್ನು ಹೊಂದಿರಬಹುದಾಗಿತ್ತೋ ಅಲ್ಲಿಯವರೆಗೆ ಮಾತ್ರವೇ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಯನ್ನು ಹೊಂದಿರತಕ್ಕದ್ದು, ಆದರೆ ಕರ್ನಾಟಕ ಪಂಚಾಯಿತಿ ರಾಜ್ ತಿದ್ದುಪಡಿ ೨೦೦೨ ಪ್ರಕಾರ ಪ್ರಾರಂಭದಲ್ಲಿ ೩೩ ತಿಂಗಳ ನಂತರ ೨೭ ತಿಂಗಳು ಆಗಿರತಕ್ಕದ್ದು.

**ಸಂಬಳ ಮತ್ತು ಭತ್ಯೆಗಳು ;**

ಕರ್ನಾಟಕ ಪಂಚಾಯತ್ ರಾಜ್ ಗ್ರಾಮ ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸಂಭಾವನೆ) ನಿಯಮಗಳು ೧೯೯೪ರ ಉಪಬಂಧಗಳ ಪ್ರಕಾರ ದಿನಾಂಕ: ೦೧.೦೮.೨೦೦೩ ರಿಂದ ಜಾರಿಗೆ ಬರುವಂತೆ ಅಧ್ಯಕ್ಷ ಮತ್ತು ಉಪಾದ್ಯಕ್ಷರು ಗ್ರಾಮ ಪಂಚಾಯಿತಿಯ ನಿಧಿಯಿಂದ ಮಾಹೆಯಾನಾ ಕ್ರಮಶಃ ೫೦೦ ರೂಪಾಯಿಗಳು ಮತ್ತು ೩೦೦ ರೂಪಾಯಿಗಳು ಸಂಭಾವನೆಯನ್ನು ಪಡೆಯಲು ಅರ್ಹರಾಗಿರುತ್ತಾರೆ ಮತ್ತು ಉಪವೇಶನಾ ಶುಲ್ಕ (ಸಭಾಭತ್ಯೆ) ೧೦೦ ಪಡೆಯಲು ಅರ್ಹರಾಗಿರುತ್ತಾರೆ.

ಅಧ್ಯಕ್ಷ ಮತ್ತು ಉಪಾಧ್ಯಕ್ಷರಿಗೆ ಪ್ರಯಾಣ ಭತ್ಯೆ ಮತ್ತು ದಿನ ಭತ್ಯೆ ಪಾವತಿ ಕರ್ನಾಟಕ ಪಂಚಾಯತ್ ರಾಜ್ (ಗ್ರಾಮಪಂಚಾಯತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರು ಮತ್ತು ಸದಸ್ಯರುಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ) ನಿಯಮಗಳು ೧೯೯೪ರ ಉಪಬಂಧಗಳ ಪ್ರಕಾರ ನಿಯಂತ್ರಿತವಾಗಿರುತ್ತದೆ.

## ೭.೩. ಗ್ರಾಮ ಪಂಚಾಯತ್ ಚುನಾವಣೆಗಳಲ್ಲಿ ಚುನಾವಣೆ ಆಯೋಗದ ಕ್ರಮಗಳು:-

ಸಂವಿಧಾನದ ೭೩ನೇ ತಿದ್ದುಪಡಿಯ ಆಧಾರದಲ್ಲಿ ಕರ್ನಾಟಕ ಪಂಚಾಯಿತಿ ರಾಜ್ ಕಾಯ್ದೆ ಜಾರಿಗೆ ಬಂತ ನಂತರ ಕರ್ನಾಟಕದಲ್ಲಿ ಗ್ರಾಮ ಪಂಚಾಯಿತಿಗಳಿಗೆ ಐದು(೫) ಅವಧಿಗೆ ಚುನಾವಣೆಗಳು ನಡೆದಿವೆ. ಐದನೆ ಅವಧಿಯ ಚುನಾಯಿತ ಪ್ರತಿನಿಧಿಗಳು ಪ್ರಸಕ್ತ ಗ್ರಾಮಪಂಚಾಯಿತಿಗಳ ಆಡಳಿತದ ಚುಕ್ಕಾಣಿ ಹಿಡಿದಿದ್ದಾರೆ. ಅಧಿಕಾರ ವಿಕೇಂದ್ರೀಕರಣದ ರಾಜಕೀಯ ಆಶಯಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪ್ರಯತ್ನಗಳನ್ನು ಮಾಡುತ್ತಿವೆ, ಗ್ರಾಮ ಪಂಚಾಯಿತಿಗಳಿಗೆ ಹೆಚ್ಚಿನ ಅಧಿಕಾರಿಗಳು ಮತ್ತು ಕಾರ್ಯಕ್ರಮಗಳನ್ನು ವರ್ಗಾಯಿಸಲಾಗುತ್ತಿದೆ, ಕಾರ್ಯಕ್ರಮಗಳು ಅನುಷ್ಠಾನದ ಹೊಣೆಯನ್ನು ಗ್ರಾಮ ಪಂಚಾಯಿತಿಗೆ ನೀಡಲಾಗಿದೆ. ಗ್ರಾಮ ಪಂಚಾಯಿತಿಗಳನ್ನು ನಡೆಸುತ್ತಿರುವ ಅಧ್ಯಕ್ಷ, ಉಪಾಧ್ಯಕ್ಷ ಹಾಗೂ ಸದಸ್ಯರುಗಳಿಗೆ ರಾಜ್ಯ ಚುನಾವಣೆ ಆಯೋಗವು ಕೆಲವೊಂದು ಕ್ರಮಗಳನ್ನು ಜರಿಗಿಸುತ್ತಿದೆ.

೧) ಅಭ್ಯರ್ಥಿಯು ಆಯಾಯ ಗ್ರಾಮ ಪಂಚಾಯಿತಿಯಡಿಯಲ್ಲಿ ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ವ್ಯಕ್ತಿಯಿಂದ ಯಾವುದೇ ನಾಮಪತ್ರವು ಬಾರದೆ ಇದ್ದಲ್ಲಿ ಅನುಸೂಚಿತ ಜಾತಿಗಳಿಗೆ ಸೇರಿದ ಅಭ್ಯರ್ಥಿಯು ಸಲ್ಲಿಸಿದ (Statistical Report on Karnataka Rural Development.

೨) ನಾಮಪತ್ರ ಸಲ್ಲಿಸಲು ನಿಗದಿಪಡಿಸಿದ ದಿನಾಂಕ ಮತ್ತು ಸಮಯಕ್ಕೆ ಮೊದಲು ಅಭ್ಯರ್ಥಿಯು ನಾಮಪತ್ರವನ್ನು ಸಲ್ಲಿಸತಕ್ಕದ್ದು.

೩) ಒಬ್ಬ ವ್ಯಕ್ತಿಯು ಬೇರೆ-ಬೇರೆ ಕ್ಷೇತ್ರಗಳಿಗೆ ಸ್ಪರ್ಧಿಸಿದಾಗ ಪ್ರತಿ ಕ್ಷೇತ್ರಕ್ಕೂ ಬೇರೆ-ಬೇರೆಯಾಗಿ ಠೇವಣಿ ಕಟ್ಟಬೇಕು. (ನಿಯಮ ೮೦(೫)

೪) ಅಭ್ಯರ್ಥಿಯು ಹಿಂದೆ ಯಾವುದೇ ಪ್ರಕರಣದಲ್ಲಿ ಅಪರಾದಿ ಎಂದು ಶಿಕ್ಷೆ ಅನುಭವಿಸಿದ್ದರೆ ಆ ಪ್ರಕಾರದ ಎಲ್ಲಾ ದಾಖಲೆಗಳನ್ನು ಮತ್ತು ಅಪರಾದ ವಿವರಗಳನ್ನು ನಮೂದಿಸ ಬೇಕಾಗುತ್ತದೆ.

೫) ಅಭ್ಯರ್ಥಿಯ ಚರಾಸ್ತಿ ಮತ್ತು ಸ್ಥಿರಾಸ್ತಿ ವಿಸ್ತೀರ್ಣ, ಜಂಟಿ ಒಡೆತನ ಇತ್ಯಾದಿ ವಿವರಗಳನ್ನು ನೀಡಬೇಕಾಗುತ್ತದೆ.

೬) ನಾಮಪತ್ರ ಮತ್ತು ಆದರ ಭಾಗವಾಗಿ ಸಲ್ಲಿಸಲ್ಪಟ್ಟ ಘೋಷಣಾ ಪತ್ರಗಳನ್ನು ಚುನಾವಣಾಧಿಕಾರಿಗಳು ಪರಿಶೀಲಿಸುವುದು ಮತ್ತು ವ್ಯತ್ಯಾಸಗಳನ್ನು ಕಂಡುಬಂದರೆ ಅಭ್ಯರ್ಥಿಯ ವಿರುದ್ಧ ಕ್ರಮ ಜರುಗಿಸುವುದು.

೭) ಯಾವುದೇ ಅಭ್ಯರ್ಥಿಯ ನಾಮಪತ್ರ ಅಸಿಂಧೂ ಎಂದು ನೀವು ಪರಿಗಣಿಸುವಾಗ ಅದಕ್ಕೆ ಸ್ಪಷ್ಟಕಾರಣಗಳನ್ನು ಬರೆವಣಿಗೆ ರೂಪದಲ್ಲಿ ನೀಡಬೇಕಾಗುತ್ತದೆ.

೮) ಚುನಾವಣಾ ಕ್ಷೇತ್ರವು ಯಾವುದೇ ಜಾತಿ/ವರ್ಗ/ಪಂಗಡಕ್ಕೆ ಮೀಸಲಿಟ್ಟಿದ್ದಲ್ಲಿ ಅಂತಹ

ಚುನಾವಣಾ ಕ್ಷೇತ್ರಕ್ಕೆ ನಿಯಮಗಳ ಪ್ರಕಾರ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಒಪ್ಪಿಕೊಳ್ಳುವುದು.

೯) ಅಭ್ಯರ್ಥಿಗಳಿಗೆ ಚುನಾವನಾ ಚಿಹ್ನೆಯು ಹಂಚಿಕೆ ಮಾಡಬೇಕಾದರೆ ಚುನಾವಣಾ ಅಧಿಕಾರಿಗಳು ಚೀಟಿ ಎತ್ತುವುದರ ಮೂಲಕ ಚಿಹ್ನೆಗಳನ್ನು ನೀಡುತ್ತಾರೆ.

೧೦)ಪತ್ರಿಕಾ ವರದಿಗಾರರು ಮತ್ತು ಫೋಟೋಗ್ರಾಫರ್‌ಗಳು ರಾಜ್ಯ ಚುನಾವಣಾ ಆಯೋಗ ಅಥವಾ ಜಿಲ್ಲಾಧಿಕಾರಿಯಿಂದ ಅನುಮತಿಸಲ್ಪಟ್ಟರು ಮಾತ್ರ ಮತದಾನ ಕೊಠಡಿಗೆ ಮತ್ತು ಮತ ಏಣಿಕೆ ಮಾಡುವ ಕೊಠಡಿಗೆ ಪ್ರವೇಶ ಮಾಡಬಹುದು.

೧೧)ಅಂಚೆ ಮತ ಪತ್ರಗಳ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವುದು ಅವುಗಳನ್ನು ರಹಸ್ಯವಾಗಿಡುವುದು.

೧೨)ಮಹಿಳೆಯರಿಗಾಗಿ ಮೀಸಲಿರುವ ಸ್ಥಾನಗಳಿಗೆ ಮಹಿಳೆಯರು ಸ್ಪರ್ಧಿಸಬೇಕು (ಮೀಸಲಿರಿಸಿದ ಜಾತಿ, ಪಂಗಡ, ವರ್ಗ ಇತ್ಯಾದಿ)

೧೩)ಚುನಾವಣೆಗೆ ಸ್ಪರ್ಧಿಸಿರುವ ಅಭ್ಯರ್ಥಿಯು ಪ್ರಕರಣ ೨೩, ೨೨ ರಲ್ಲಿ ಉಲ್ಲೇಖಿಸಿರುವ ಭಷ್ಟಚಾರಗಳು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ದಡಿಯಲ್ಲಿ ಅಥ ಭ್ರಷ್ಟಾಚಾರ ನಡೆದಿರುವ ಬಗೆಗಿನ ಸಿವಿಲ್ ನ್ಯಾಯಾಧೀಶರ ನಿರ್ಣಯದ ದಿನಾಂಕದಿಂದ ೫ ವರ್ಷಗಳ ಅವಧಿಯವರೆಗೆ ಯಾವುದೇ ಸ್ಥಳೀಯ ಪ್ರಾಧಿಕಾರದ ಸದಸ್ಯತ್ವಕ್ಕೆ ಅನರ್ಹರನ್ನಾಗಿ ಮಾಡುವುದು.

(ಉಲ್ಲೇಖ:- ಟಿ.ಆರ್. ರಘುನಂದನ ರವರ ೩೦ ಸೆಪ್ಟೆಂಬರ್ ೨೦೧೩ "ಡಿಸೆಂಟ್ರಲೇಜೇಶನ್ ಅಂಡ್ ಲೋಕಲ್ ಗವರ್ನಮೆಂಟ್‌ಪ ದ ಇಂಡಿಯನ್ ಎಕ್ಸ್ ಪಿಲಿಯನ್ಸ್,

ಉಲ್ಲೇಖ:- ಗ್ರಾಮ ಪಂಚಾಯತ್ ಚುನಾವಣೆಗಳು ರಿಟರ್ನಿಂಗ್ ಅಧಿಕಾರಿಗಳ ಕೈಪಿಡಿ ರಾಜ್ಯ ಚುನಾವಣಾ ಆಯೋಗ ಕರ್ನಾಟಕ ಬೆಂಗಳೂರು-೨೦೧೫.)

ಕ್ಷೇತ್ರಕಾರ್ಯ ಕೈಗೊಂಡ ಬಳ್ಳಾರಿ ಜಿಲ್ಲೆಯ ಎರಡು ತಾಲೂಕುಗಳಲ್ಲಿನ ನಾಲ್ಕು ಗ್ರಾಮ ಪಂಚಾಯಿತಿಗಳಿಗೆ ನಡೆದ ಚುನಾವಣೆಗಳನ್ನು ನೋಡಿದಾಗ ಅಲ್ಲಿರುವ ಜನಾಭಿಪ್ರಾಯದಂತೆ ೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ ಬರುವ ಮುಂಚೆಯೇ ಪಂಚಾಯಿತಿಗಳಿಗೆ ಚುನಾವಣೆ ನಡೆದಿದ್ದವು ಎಂದು ಗ್ರಾಮಸ್ಥರು ಹೇಳಿಕೊಂಡಿದ್ದಾರೆ, ಅದರೆ ಅಲ್ಲಿ ಯಾವುದೇ ರೀತಿಯ ಅಧಿಕೃತವಾಗಿ ಮತದ ಮೂಲಕ ಆಗಿರಲಿಲ್ಲ, ತಮ್ಮಲಿಯೇ ಅವಿರೋಧವಾಗಿ ಆಯ್ಕೆಯಾಗಿರುವುದು ಮತ್ತು ಚುನಾವಣೆಗಳ ಮೂಲಕ ಆಯ್ಕೆಯಾಗಿರುವ ಸದಸ್ಯರು ಕಡಿಮೆ ಇದ್ದಾರೆಂದು ಹೇಳಿಕೊಂಡಿದ್ದಾರೆ, ಅದರೆ ಇತ್ತಿಚೀಗೆ ನಡೆದ ೨೦೧೫ರ ಗ್ರಾಮ ಪಂಚಾಯಿತಿ ಚುನಾವಣೆಗಳಲ್ಲಿ ಎಲ್ಲಾ ಅಭ್ಯರ್ಥಿಗಳು ಮತದಾನದ ಮೂಲಕ ಸದಸ್ಯರಾಗಿ ಆಯ್ಕೆಯಾಗಿರುವುದು ಕಂಡುಬರುತ್ತದೆ.

ಅಧ್ಯಾಯ : ಎಂಟು

**ಉಪಸಂಹಾರ**

೮.೧. ಅಧ್ಯಯನದ ಫಲಿತಗಳು

೮.೨. ಅಧ್ಯಯನದ ಸಲಹೆಗಳು

# ಅಧ್ಯಾಯ – ಎಂಟು

# ಉಪಸಂಹಾರ

ಉತ್ತಮ ಆಡಳಿತ ಮತ್ತು ಉತ್ತಮ ಮಾನವ ಅಭಿವೃದ್ಧಿಗಳು ಒಂದೇ ನಾಣ್ಯದ ಎರಡು ಮುಖಗಳು ಇದ್ದಂತೆ. ಒಂದು ದೇಶದ ಆರ್ಥಿಕ ಮತ್ತು ಸಾಮಾಜಿಕ ಸಂಪನ್ಮೂಲಗಳನ್ನು ನಿರ್ವಹಿಸಲು ಚಲಾಯಿಸುವ ಅಧಿಕಾರವನ್ನೇ ಆಡಳಿತವೆಂದು ವಿಶ್ವಬ್ಯಾಂಕ್ ನಿರ್ವಹಿಸಿದೆ. ಆಡಳಿತವು ಎರಡು ಮೂಲ ಅಂಶಗಳನ್ನು ಒಳಗೊಂಡಿದೆ. ಒಂದು ರಾಜ್ಯದ ಆರ್ಥಿಕ ಪಾತ್ರ ಇದು ಒಳಗೊಳ್ಳುವ ಸಂಗತಿಗಳೆಂದರೆ ಸುಭದ್ರವಾದ ಮತ್ತು ಸುಸ್ಥಿರವಾದ ರಾಷ್ಟ್ರಮಟ್ಟದ ಸನ್ನಿವೇಶ. ಜನರಿಗೆ ಅಗತ್ಯ ಸೇವೆಗಳಾದ ಆರೋಗ್ಯ, ರಕ್ಷಣೆ, ಶಿಕ್ಷಣ ಮತ್ತು ಮೂಲಭೂತ ಸೌಲಭ್ಯಗಳು, ದುರ್ಬಲರ ಸಂರಕ್ಷಣೆ, ಪರಿಸರ ಸಂರಕ್ಷಣೆಗಾಗಿ ಮತ್ತು ಅಭಿವೃದ್ಧಿಗಾಗಿ ಕಾನೂನಿನ ಚೌಕಟ್ಟು ಇತ್ಯಾದಿ ಮತ್ತು ಎರಡನೆಯದಾಗಿ, ಆಡಳಿತದಲ್ಲಿ ಸಾಮಾಜಿಕ ನ್ಯಾಯ, ಪಾರದರ್ಶಕತೆ, ಉತ್ತರದಾಯಿತ್ವ, ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಜನರ ಸಹಭಾಗಿತ್ವ ಮತ್ತು ನಾಗರೀಕರ ಅಗತ್ಯಗಳಿಗೆ ಪ್ರತಿಸ್ಪಂದಿಸುವ ಸರಕಾರ ಇತ್ಯಾದಿ. ಉತ್ತಮ ಆಡಳಿತ ಅನ್ನುವುದು ಸಮರ್ಥವಾದ ಮತ್ತು ಸಮರ್ಪಕವಾದ ಅರ್ಪಣಾ ಭಾವದಿಂದ ಜನರ ಬದುಕನ್ನು ಉತ್ತಮಗೊಳಿಸುವ ಪ್ರಕ್ರಿಯೆಯಾಗಿದೆ.

ಕರ್ನಾಟಕದಲ್ಲಿ ಸ್ಥಳೀಯ ಸ್ವಯಂ ಆಡಳಿತ ಸರಕಾರಗಳ ಇತಿಹಾಸ ತುಂಬಾ ಸ್ವಾರಸ್ಯಕರವಾದುದಾಗಿದೆ ಮತ್ತು ಸುದೀರ್ಘವಾದುದಾಗಿದೆ. ದೇಶದಲ್ಲಿ ಪಂಚಾಯಿತಿರಾಜ್ ಸಂಸ್ಥೆಗಳನ್ನು ಬಹಳ ಹಿಂದೆಯೇ ಆಚರಣೆಗೆ ತಂದ ಕೀರ್ತಿ ಕರ್ನಾಟಕಕ್ಕೆ ಸಲ್ಲುತ್ತದೆ. ಕರ್ನಾಟಕ ಜಿಲ್ಲಾ ಪರಿಷತ್ತು, ತಾಲೂಕು ಪಂಚಾಯಿತಿ ಸಮಿತಿಗಳು, ಮಂಡಲ ಪಂಚಾಯಿತಿ ಮತ್ತು ನ್ಯಾಯ ಪಂಚಾಯಿತಿ ಕಾಯಿದೆಗಳನ್ನು ೧೯೮೩ರಲ್ಲಿಯೇ ವಿನೂತನವಾದ ಪಂಚಾಯಿತಿ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರಲಾಯಿತು. ಅದರಲ್ಲಿ ಗ್ರಾಮ ಮಟ್ಟದಲ್ಲಿ ಮಂಡಲ ಪಂಚಾಯಿತಿಗಳನ್ನು, ತಾಲೂಕು ಮಟ್ಟದಲ್ಲಿ ತಾಲೂಕು ಸಮಿತಿಗಳನ್ನು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪರಿಷತ್ತುಗಳನ್ನು ಸ್ಥಾಪಿಸುವ ಕ್ರಮವಿತ್ತು. ಸ್ಥಳೀಯ ಸ್ವಯಂ ಆಡಳಿತ ಸಮಸ್ಯೆಗಳಿಗೆ ಅಧಿಕಾರವನ್ನು ಮತ್ತು ಹಣಕಾಸನ್ನು ಒದಗಿಸುವ ವಿಷಯದಲ್ಲಿ ಸದರಿ ಮಸೂದೆಯನ್ನು ನಿರ್ಣಾಯಕವಾದುದೆಂದು ಗುರುತಿಸಲಾಗುತ್ತದೆ. ಈ ಮಾದರಿಯನ್ನು

ಇನ್ನಿತರ ರಾಜ್ಯಗಳು ಅನುಕರಣೆ ಮಾಡಿದವು. ಈ ಕಾಯಿದೆಯು ಮುಂದೆ ೭೩ನೇ ಯ ಸಂವಿಧಾನ ತಿದ್ದುಪಡಿಗೆ ಅಗತ್ಯವಾದ ಬುನಾದಿಯನ್ನು ಹಾಕಿಕೊಟ್ಟಿತು. ಇದರಿಂದ ಎಲ್ಲಾ ರಾಜ್ಯಗಳಲ್ಲಿ ಸ್ಥಳೀಯ ಸರಕಾರಗಳಿಗೆ ಶಕ್ತಿ ಒದಗಿದಂತಾಯಿತು.

ಸಂವಿಧಾನದ ೭೩ನೇ ತಿದ್ದುಪಡಿಯಿಂದ ಮೊದಲ ಬಾರಿಗೆ ಸಂವಿಧಾನಾತ್ಮಕ ರಕ್ಷಣೆಯು ಒದಗಿಬಂತು. ಅದರ ಜೊತೆಯಲ್ಲಿಯೇ ಅವುಗಳಿಗೆ ಹಣಕಾಸು ಸಂಪನ್ಮೂಲ ಒದಗುವಂತಾಯಿತು. ದುರ್ಬಲ ವರ್ಗಕ್ಕೆ ಸ್ಥಾನವನ್ನು ಮತ್ತು ಹುದ್ದೆಗಳ ಮೀಸಲಾತಿ ಒದಗಿ ಬಂದಿತು. ಅದೇ ರೀತಿ ಕರ್ನಾಟಕ ರಾಜ್ಯವು ಹೊಸ ಪಂಚಾಯಿತಿ ರಾಜ್ ಕಾಯಿದೆಯನ್ನು ೧೯೯೩ರಲ್ಲಿ ಅನುಷ್ಠಾನಗೊಳಿಸಿ, ಸಂವಿಧಾನಾತ್ಮಕ ನಿಯಮಕ್ಕೆ ಒಂದು ಅಧಿಕೃತ ರೂಪವನ್ನು ನೀಡಲಾಯಿತು. ಇದಕ್ಕೆ ಪೂರಕವಾಗಿ ಮೂರು ಹಂತದ ಪಂಚಾಯತಿರಾಜ್ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರಲಾಯಿತು. ಅವುಗಳು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯಿತಿ, ತಾಲೂಕು ಮಟ್ಟದಲ್ಲಿ ತಾಲೂಕು ಪಂಚಾಯಿತಿ, ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯಿತಿಗಳು. ಈ ಹಿನ್ನಲೆಯಲ್ಲಿ ಉತ್ತಮ ಆಡಳಿತಕ್ಕೆ ಪೂರಕವಾಗಿ ಉತ್ತರದಾಯಿತ್ವದ ಮೂಲಕ ಅಭಿವೃದ್ಧಿಯಲ್ಲಿ ಜನರ ಪಾಲ್ಗೊಳ್ಳುವಿಕೆ, ನಾಗರೀಕ ಪ್ರಜ್ಞೆ, ಜವಾಬ್ದಾರಿ, ಸೇವಾ ಸೌಲಭ್ಯಗಳ ವಿತರಣೆಯಲ್ಲಿ ಸುಧಾರಣೆ, ಹಣಕಾಸಿನ ನಿರ್ವಹಣೆಯಲ್ಲಿ ಸುಧಾರಣೆ ಮತ್ತು ತಳಮಟ್ಟದಿಂದಲೂ ಉತ್ತಮ ಜವಾಬ್ದಾರಿ ಮುಂತಾದವು ೧೯೯೩ ರ ಕರ್ನಾಟಕ ಪಂಚಾಯಿತಿ ರಾಜ್ ಅಧಿನಿಯಮದ ಮುಖಾಂತರ ಲಭಿಸಿತು. ಈ ಅಧಿನಿಯಮವನ್ನು ಅಕ್ಟೋಬರ್ ೨೦೦೩ರಂದು ಕಾಯಿದೆಯಾಗಿ ಅಧಿಕೃತಗೊಳಿಸಲಾಯಿತು.

ಗ್ರಾಮಗಳ ಅಭಿವೃದ್ಧಿ ವಿಧಾನಸೌದದಿಂದಲೇ ಆಗಬೇಕಿಲ್ಲ ಅದರ ಪರಿಪೂರ್ಣತೆ ಅಲ್ಲಿಯ ನಿವಾಸಿಗಳಿಂದಲೇ ಸಾಧ್ಯ ಎಂಬುದನ್ನು ಮನದಟ್ಟು ಮಾಡಿಕೊಟ್ಟವರು ಅಬ್ದುಲ್ ನಜೀರ್ ಸಾಬ್ ಅವರು, ಗ್ರಾಮ ಪ್ರಂಚಾಯಿತಿಗಳನೇ ಮಿನಿ ಸರ್ಕಾರವನ್ನಾಗಿ ಪರಿಗಣಿಸುವುದು ಅವರ ಗ್ರಾಮೀಣಾಭಿವೃದ್ಧಿಯ ಕನಸನ್ನು ಕಾಯಿದೆಗಳಲ್ಲಿ ರೂಪಿಸಿದನು ಮೂರು ನಾಲ್ಕು ಗ್ರಾಮಗಳಿಗೆ ಒಂದು ಮಂಡಲ ಪಂಚಾಯಿತಿಯನ್ನು ನಿರೂಪಿಸುವುದರ ಮೂಲಕ ಕರ್ನಾಟಕದಲ್ಲಿ ಬಹಳಷ್ಟು ಅಭಿವೃದ್ದಿಗೆ ಅವರು ಕಾರಣರಾದರು.

ಅನಂತರ ಬಂದ ಸರಕಾರಗಳು ಮತ್ತೆ ಪ್ರತಿಯೊಂದು ಗ್ರಾಮಕ್ಕೊಂದು ಪಂಚಾಯಿತಿ ಎಂಬ ಕಾಯ್ದೆ ತಿದ್ದುಪಡಿಯ ಮೂಲಕ ಹೆಚ್ಚು ಜನರಿಗೆ ಅಧಿಕಾರದ ಸವಿ ಉಣ್ಣಲು ಕಾರಣರಾದರು, ಎಂ.ವೈ.ಘೋಪರ್ಡೆಯವರು ಇನ್ನಷ್ಟು ಸುಧಾರಣೆಗಳನ್ನು ಸೇರಿಸಿದ್ದಾರೆ ಏನಿದ್ದರೂ ಗ್ರಾಮ ಪಂಚಾಯಿತಿಗಳು ಕೇವಲ ಅಧಿಕಾರದ ದೃಷ್ಟಿಯಿಂದ ಜೀವಂತವಾಗಿಯೇ ಏನಃ, ಸರಕಾರದ ಕಡತದಲ್ಲಿರುವ ಸಾಧನೆಗಳ ಉಲ್ಲೇಖವನ್ನು ಬದಿಗಿರಿಸಿ ನೋಡಿದರೆ ಪ್ರಾಮಾಣಿಕವಾಗಿ ವಿಶ್ಲೇಷಿಸಿದರೆ ಎರಡು ದಶಕಗಳ ಹಿಂದೆ ಇರುವಂತೆಯೇ ಗ್ರಾಮಗಳ ಅಭಿವೃದ್ಧಿ ಸ್ಥಿರವಾಗಿ ನಿಂತಿವೆ.

ಈಗ ರೂಪಿಸಿರುವ ಕಾಯ್ದೆಗಳು ಚುನಾಯಿತ ಪ್ರತಿನಿಧಿಗಳಿಗೆ ಸಾಕಷ್ಟು ಅಧಿಕಾರ ನೀಡಿವೆ. ಆದರೆ ರಾಜಕೀಯ ಕಾರಣಗಳಿಂದಾಗಿ ಅವುಗಳ ಜಾರಿ ಮಾತ್ರ ಸಮರ್ಪಕವಾಗಿ ನಡೆದಿಲ್ಲ. ಗ್ರಾಮವನ್ನು ಕೆಲವು ವಿಭಾಗಳನ್ನಾಗಿ ಪ್ರತ್ಯೇಕಿಸಿ ಅಲ್ಲಿ ನೆಲಸಿದ ಬಹುಸಂಖ್ಯಾತರ ಜಾತಿಗೆ ಹೊಂದಿಕೊಂಡು ಮೀಸಲಾತಿ ನೀಡಿ ಅಭ್ಯರ್ಥಿಯ ಆಯ್ಕೆಯನ್ನು ಮಾಡಲಾಗುತ್ತದೆ. ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೂ ಮೀಸಲಾತಿ ಹೇರಿಕೆ ಇದೆ. ಆದರೆ ಗ್ರಾಮಗಳಲ್ಲಿ ಬಹುತೇಕರಿಗೆ ವಿದ್ಯಾಭ್ಯಾಸದ ಮಟ್ಟ ವ್ಯವಹಾರಕ್ಕೆ ಅಗತ್ಯದಷ್ಟು ಇರುವುದಿಲ್ಲ ಇಲ್ಲ ಜಾತಿ ಮೀಸಲಾತಿ ಮಾಡುವಾಗ ಕನಿಷ್ಠ ವಿದ್ಯಾಭ್ಯಾಸವನ್ನು ಪರಿಗಣಿಸಲು ಅವಕಾಶವಿಲ್ಲ ಇದರಿಂದ ಏನಾಗುತ್ತದೆಂದರೆ ಸರ್ಕಾರದಿಂದ ಬರುವ ಆದೇಶಗಳನ್ನು ತಿಳಿಸಲು, ಸ್ವಯಂ ನಿರ್ಧಾರ ತೆಗೆದುಕೊಳ್ಳಲು ಅನೇಕ ಸದಸ್ಯರಿಗೆ ಸಾಧ್ಯವಾಗದೆ ತಮ್ಮನ್ನು ಪ್ರತಿನಿಧಿಯನ್ನಾಗಿ ಮಾಡಿದ ಜನರ, ಋಣ ಸಂದಾಯ ಮಾಡಲು ಅವರಿಂದಾಗದೆ ಅಭಿವೃದ್ಧಿ ಸವಲತ್ತುಗಳನ್ನು ಗ್ರಾಮ ಪಂಚಾಯಿತಿಯಲ್ಲಿನ ಬುದ್ಧಿವಂತ ಸದಸ್ಯರ ವಿಭಾಗದಲ್ಲಿ ಮಾತ್ರ ಅಳವಡಿಕೆಯಾಗಿ ಇತರರು ನಿರುಪಯುಕ್ತರೆಂದು ಜನ ತೀರ್ಮಾನಿಸುವಂತಾಗಿದೆ.

**ಅಧ್ಯಯನದ ಫಲಿತಗಳು ಮತ್ತು ಸಲಹೆಗಳು**

ಬಳ್ಳಾರಿ ಜಿಲ್ಲೆಯ ಆಯ್ಕೆ ಮಾಡಲ್ಪಟ್ಟ ತಾಲೂಕಿನ ಗ್ರಾಮ ಪಂಚಾಯಿತಿಗಳ ಚುನಾಯಿತ ಸದಸ್ಯರ ತುಲನಾತ್ಮಕ ವಿಶ್ಲೇಷಣೆ: ಅಧ್ಯಯನದಿಂದ ಕಂಡುಕೊಳ್ಳಲಾದ ಪ್ರಮುಖ ಫಲಿತಗಳನ್ನು ಈ ಕೆಳಗಿನಂತೆ ನೀಡಲಾಗಿರುತ್ತದೆ:

**೮.೧. ಅಧ್ಯಯನದ ಫಲಿತಗಳು :-**

೧) ಬಳ್ಳಾರಿ ತಾಲೂಕು ಮತ್ತು ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ-ಗತಿಯನ್ನು ಗಮನಿಸಿದಾಗ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಗ್ರಾಮ ಪಂಚಾಯಿತಿಯ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರು, ಒಣಭೂಮಿಯನ್ನು ಹೊಂದಿದ್ದು ಜೀವನಾಧಾರಕ್ಕೆ ಕೂಲಿಯನ್ನು ಮಾಡುತ್ತಾ ಹೆಚ್ಚಿನ ವರಮಾನವನ್ನು ಹೊಂದದೆ ವೈಯಕ್ತಿಕ ಜೀವನವನ್ನು ಗುಣಮಟ್ಟ ಜೀವನದಿಂದ ನಡೆಸಿಕೊಂಡು ಹೋಗುವಲ್ಲಿ ವಿಫಲವಾಗಿದ್ದು ಗ್ರಾಮದ ಅಭಿವೃದ್ಧಿಯನ್ನು ಸಾಧಿಸಲು ವಿಫಲವಾಗಿರುವುದರಿಂದ ಹಿಂದುಳಿದಿದೆ ಎನ್ನಬಹುದು.

೨) ಗ್ರಾಮ ಪಂಚಾಯಿತಿಗಳ ಚುನಾಯಿತ ಪ್ರತಿನಿಧಿಗಳ ಆಯ್ಕೆ, ಶಿಕ್ಷಣ ಸ್ಪರ್ಧೆ ಮತ್ತು ಗೆಲುವಿನ ಅಂಶಗಳನ್ನು ಗಮನಿಸಿದಾಗ ಮುಂದುವರಿದ ಬಳ್ಳಾರಿ ಗ್ರಾಮ ಪಂಚಾಯಿತಿಗಳಿಗಿಂತ ಹಿಂದುಳಿದ ಗ್ರಾಮ ಪಂಚಾಯಿತಿಯ ಸದಸ್ಯರು ಹೆಚ್ಚಿನ ಸಂಖ್ಯೆಯ ಬೆಂಬಲವನ್ನು ಪಡೆದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜಾತಿಯ ಸಾಧನದಿಂದ ಗೆದ್ದು ಹಾಗೂ ಶಿಕ್ಷಣದಿಂದ ಹೆಚ್ಚಿನ ಸಂಖ್ಯೆಯಲ್ಲಿ ವಂಚಿತಗೊಂಡಿದ್ದರಿಂದ ವಾರ್ಡಿನ ಅಭಿವೃದ್ಧಿಯನ್ನು ಮಾಡದೆ ಹಿಂದುಳಿದಿದೆ ಎನ್ನಬಹುದು.

೩) ಎರಡು ತಾಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಮುಂದುವರಿದ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಸದಸ್ಯರು ತಮ್ಮ ಚುನಾವಣೆಗೆ ಸ್ಪರ್ಧಿಸಲು ವಾರ್ಡಿನ ಉದ್ಧಾರಕ್ಕಾಗಿಯೇ ಎಂಬ ಅಂಶವು ಕೆಳಮಟ್ಟದಲ್ಲಿದ್ದು ಅದರಂತೆ ಕ್ಷೇತ್ರ ಮೀಸಲು ಹಿರಿಯರು ರಾಜಕೀಯದಲ್ಲಿದ್ದುದ್ದರಿಂದ ಹೆಚ್ಚಿನ ಸಂಖ್ಯೆಯನ್ನು ಹೇಳಿಕೊಂಡಿರುತ್ತಾರೆ.

೪) ಹಾಗೆಯೇ ಹಿಂದುಳಿದ ಪ್ರದೇಶದಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿ ಕಾರಣದಿಂದ ಮಹಿಳೆಯು ರಾಜಕೀಯದಲ್ಲಿ ಭಾಗವಹಿಸಿ ಅವರ ನಿರ್ಣಯವು ಇರದೇ ಎಲ್ಲಾ ವಿಚಾರದ ತೀರ್ಮಾನದಲ್ಲಿ ಗಂಡಂದಿರ ಹಸ್ತಕ್ಷೇಪ ಹೆಚ್ಚಾಗಿರುವುದು ತಿಳಿದುಬಂದಿದೆ. ಅಂದರೆ ಹಿಂದುಳಿದ ಗ್ರಾಮ ಪಂಚಾಯಿತಿಯಲ್ಲಿ ಮೀಸಲಾತಿಯ ಅನುಗುಣವಾಗಿ

೫) ಮಹಿಳೆಯ ಆಯ್ಕೆಯಾಗಿ ರಾಜಕೀಯದಲ್ಲಿ ಸಮರ್ಥವಾಗಿ ಭಾಗವಹಿಸದೆ ಮಹಿಳಾ ಸಬಲೀಕರಣ ಪರಿಕಲ್ಪನೆಯನ್ನು ಸ್ಥಳೀಯ ಸಂಸ್ಥೆಯಿಂದ ಈಡೇರಿಸುವುದರಲ್ಲಿ ಕೂಡ ವಿಫಲತೆಯಿಂದ ಕೂಡ್ಲಿಗಿ ಗ್ರಾಮ ಪಂಚಾಯಿತಿಗಳು ಹಿಂದುಳಿದಿವೆ ಎನ್ನಬಹುದು.

೬)ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿ ಮತ್ತು ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿ ಸದಸ್ಯರ ಚುನಾವಣೆಯ/ರಾಜಕೀಯದ ಅನುಭವಗಳನ್ನು ನೋಡಿದಾಗ ಇಲ್ಲಿಯೂ ಕೂಡ ಬಳ್ಳಾರಿ ತಾಲೂಕಿನ ಗ್ರಾಮ ಪಂಚಾಯಿತಿಗಳಿಗಿಂತ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವೈಯಕ್ತಿಕವಾಗಿ ಹೆಚ್ಚಿನ ಜನರ ಸಂಪರ್ಕ ಹೊಂದದಿರುವುದು,

೭) ಚುನಾವಣೆಯಲ್ಲಿ ಗೆಲ್ಲಲು ಸದಸ್ಯರು ಹಣ-ಮದ್ಯಪಾನವು ಹೆಚ್ಚಿನ ಪ್ರಮಾಣದಲ್ಲಿರುವುದು, ಚುನಾವಣೆಗಾಗಿ ಆದಾಯವನ್ನು ಹೆಚ್ಚಿನ ಪ್ರಮಾಣವನ್ನು ಹೊಂದದೆ ಸಾಲವನ್ನು ಮಾಡಿ ಗೆಲ್ಲಲು ಹಣ ಖರ್ಚು ಮಾಡಿದ್ದಾಗಿಯು ಮತ್ತು ಅಭಿವೃದ್ಧಿಗಾಗಿ ಚುನಾವಣಾ ಪೂರ್ವದಲ್ಲಿ ನೀಡಿದಂತಹ ಆಶ್ವಾಸನೆಗಳನ್ನು ಈಡೇರಿಸದೆ ಯಾವ ಅಭಿವೃದ್ಧಿಯನ್ನು ಸಾಧಿಸದೆ ವಿಫಲವಾಗಿರುವುದದ್ದರಿಂದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ.

೮) ಎರಡು ಗ್ರಾಮ ಪಂಚಾಯಿತಿಗಳ ಚುನಾಯಿತ ಪ್ರತಿನಿಧಿಗಳ ರಾಜಕೀಯ ತಿಳುವಳಿಕೆ ಮತ್ತು ಭಾಗವಹಿಸುವಿಕೆಯ ಅಂಶಗಳನ್ನು ನೋಡಿದಾಗ ಮುಂದುವರಿದ ಬಳ್ಳಾರಿ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮ ಪಂಚಾಯಿತಿಯ ಸದಸ್ಯರು ಕಡಿಮೆ ಸಂಖ್ಯೆ ಜನರ ಸಮಸ್ಯೆಗಳಿಗೆ ಪರಿಹಾರಕ್ಕಾಗಿ, ಫಲಾನುಭವಿಗಳ ಆಯ್ಕೆಯಿರಬಹುದು ಕಾರಣಗಳಿಗಾಗಿ ಸ್ಥಳೀಯ ಸಂಸ್ಥೆಗಳಿಗೆ ದಿನಾಲು ಹೋಗದೇ ಇರುವುದು, ಸಾಮಾನ್ಯ ಸಭೆಯ ಬಗ್ಗೆ ತಿಳುವಳಿಕೆ ಮತ್ತು ಅದರಲ್ಲಿ ಭಾಗವಹಿಸದೇ ಇರುವುದು ಹಾಗೂ ಅಧಿಕಾರಿಗಳೊಂದಿಗೆ ಹೆಚ್ಚಿನ ಪ್ರಮಾಣದಲ್ಲಿ ಚರ್ಚಿಸದೇ, ಸ್ಥಾಯಿ ಸಮಿತಿಗಳ ಬಗ್ಗೆಯಾಗಲಿ

ಮತ್ತು ಸ್ಥಳೀಯ ಸಂಸ್ಥೆಗಳ ನಿಯಮಿತವಾಗಿ ಜವಾಬ್ದಾರಿಗಳನ್ನು ನಿರ್ವಹಿಸದೆ ಆಡಳಿತವನ್ನು ಸಮರ್ಥವಾಗಿ ನಿರ್ವಹಿಸದೆ ಇಂತಹ ಹಲವು ಕಾರಣಗಳಿಂದ ಮುಂದುವರಿದ ಗ್ರಾಮ ಪಂಚಾಯಿತಿ ಸದಸ್ಯರಿಗಿಂತ ಹಿಂದುಳಿದ ಗ್ರಾಮ ಪಂಚಾಯಿತಿಯ ಸದಸ್ಯರು ಹೆಚ್ಚಿನ ರೀತಿಯಲ್ಲಿ ವಿಫಲಗೊಂಡಿರುವುದ್ದರಿಂದ ಕೂಡ್ಲಿಗಿ ಗ್ರಾಮ ಪಂಚಾಯಿತಿಗಳು ಹಿಂದುಳಿದಿವೆ ಎನ್ನಬಹುದಾಗಿದೆ.

೯) ಗ್ರಾಮಗಳ ಅಭಿವೃದ್ಧಿಗೆ ಗ್ರಾಮ ಪಂಚಾಯಿತಿಗಳಿಂದ ನೇರವಾದ ಪ್ರಮುಖ ಅಭಿವೃದ್ಧಿ ಕಾರ್ಯಗಳನ್ನು ಮಾಡದಿದ್ದರೂ ಸಹ ಚರಂಡಿ ನಿರ್ಮಾಣ, ಸಮರ್ಪಕ ಕುಡಿಯುವ ನೀರಿನ ಪೂರೈಕೆ, ಬೀದಿ ದೀಪಗಳ ವ್ಯವಸ್ಥೆ, ನಿಯಮಿತವಾಗಿ ಸ್ವಚ್ಛತೆಯನ್ನು ಕೈಗೊಳ್ಳುವುದು ಮತ್ತು ಶೌಚಾಲಯ ನಿರ್ಮಾಣ ಕೆಲವು ಗ್ರಾಮಗಳಲ್ಲಿ ಕಾಣಬಹುದಾಗಿದೆ.

೧೦) ಗ್ರಾಮ ಪಂಚಾಯಿತಿಗಳು ಸಮರ್ಪಕ ರೀತಿಯಲ್ಲಿ ಅಭಿವೃದ್ಧಿ ಕಾರ್ಯವನ್ನು ಕೈಗೊಳ್ಳುತ್ತವೆಯೋ ಎಂಬುದನ್ನು ವಾರ್ಡಿನ ಜನರು ರೋಸಿ ಹೋಗಿದ್ದಾರೆ. ನಿರಂತರ ಮೇಲೆ ಹೇಳಿದ ಕೆಲವು ಕೆಲಸ-ಕಾರ್ಯಗಳನ್ನು ಕೈಗೊಳ್ಳಲಾಗುತ್ತದೆ ಎಂದು ಗ್ರಹಿಸಲಾಗಿದೆ. ಹೀಗೆ ಗ್ರಾಮ ಪಂಚಾಯಿತಿಗಳು ವಾರ್ಡಿನ ಅಭಿವೃದ್ಧಿಗಾಗಿ ಶ್ರಮವಹಿಸುತ್ತಿವೆ. ಆದರೆ ಚುನಾಯಿತ ಪ್ರತಿನಿಧಿಗಳು ಮತ್ತು ವಾರ್ಡಿನ ಜನರು ಪರಸ್ಪರ ಸ್ಥಳೀಯ ಆಡಳಿತದಲ್ಲಿ ಹೆಚ್ಚು-ಹೆಚ್ಚು ತಿಳುವಳಿಕೆ ಹೊಂದುವುದರ ಜೊತೆಯಲ್ಲಿ ಭಾಗವಹಿಸುವುದೊಂದಿಗೆ ಅಭಿವೃದ್ಧಿಯನ್ನು ಹೊಂದಬಹುದಾಗಿದೆ.

೧೧) ಪಂಚಾಯತ್ ಸಂಸ್ಥೆಗಳ ನಡುವೆ ಸಮನ್ವಯತೆ ಇಲ್ಲದೆ ಇರುವುದು

೧೨) ಚುನಾಯಿತ ಸದಸ್ಯರು ಮತ್ತು ಅಧಿಕಾರಿಗಳ ನಡುವೆ ಸೌಹಾರ್ದಯುತವಾದ ಮನೋಭಾವನೆಯ ಕೊರತೆಯಿಂದ ಎಂಬುವುದು ನನ್ನ ಅಧ್ಯಯನ ಗುರುತಿಸಿದೆ.

೧೩) ಮೇಲಿನ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಮೇಲಿಂದ ಹೇರುವುದು ಮತ್ತೊಂದು ಬೇಸರದ ಸಂಗತಿಯಾಗಿದೆ ಇದು ಪಂಚಾಯತ್ ರಾಜ್ ಸಂಸ್ಥೆಗಳ ಕಾರ್ಯಕ್ಷಮತೆಗೆ ಮತ್ತು ಸ್ವಾಯತ್ತತೆಗೆ ಧಕ್ಕೆಯನ್ನುಂಟುಮಾಡುತ್ತದೆ.

೧೪) ಪಂಚಾಯತ್ ಸಂಸ್ಥೆಗಳು ತಮ್ಮ ಅಭಿವೃದ್ಧಿ ಯೋಜನೆಗಳನ್ನು ರೂಪಿಸುವಲ್ಲಿ ಸಹಕಾರಿಯಾಗಿರುವ ಮಾಹಿತಿ ಮತ್ತು ದತ್ತಾಂಶಗಳು ನಿಖರವಾಗಿರುವುದಿಲ್ಲ. ಮತ್ತು ಪೂರ್ಣವಾಗಿರುವುದಿಲ್ಲ.

೧೫) ಜನರು/ಗ್ರಾಮಸ್ಥರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಚುನಾಯಿತ ಸದಸ್ಯರಿಗೆ ತಿಳುವಳಿಕೆ ಇಲ್ಲದಿರುವುದು ಮತ್ತು ಕರ್ತವ್ಯಗಳ ಬೇಜವಾಬ್ದಾರಿತನದಿಂದ ಇದ್ದದ್ದು ಕಂಡುಬರುತ್ತದೆ.

೧೬) ಜಿಲ್ಲಾ ಪಂಚಾಯಿತಿ ಮತ್ತು ತಾಲೂಕು ಪಂಚಾಯಿತಿಗಳ ನಡುವೆ ಇರುವ ತಾಲೂಕು ಪಂಚಾಯಿತಿಗಳ ಪಾತ್ರ ಕಡಿಮೆ ಇದೆ ಎಂದು ಹಣಕಾಸು ಆಯೋಗವು ವರದಿ

ಮಾಡಿತ್ತು.

೧೭) ಪಂಚಾಯತ್ ರಾಜ್ ಸಂಸ್ಥೆಗಳಿಗೆ ಒದಗಿಸುತ್ತಿರುವ ಸಾಮಾನ್ಯ ವರ್ಗಾವಣೆಯನ್ನು ಪರಿಶೀಲಿಸಬೇಕು.

೧೮) ಪಂಚಾಯಿತಿಗಳು ಬೀದಿದೀಪಗಳ ಬಗ್ಗೆ ಗ್ರಾಮೀಣ ರಸ್ತೆಗಳ ಬಗ್ಗೆ, ಶಿಕ್ಷಣ ಇನ್ನಿತರ ವಿಷಯಗಳ ಬಗ್ಗೆ ಸೇವೆಗಳ ಸಿಬ್ಬಂದಿಗಳು, ಕೊರತೆ ಕಂಡುಬರುತ್ತದೆಂದು.

೧೯) ಜಿಲ್ಲಾ ಯೋಜನಾ ಸಮಿತಿಯು ಸಭೆಗಳಲ್ಲಿ ಪಂಚಾಯಿತಿ ಅಧಿಕಾರಿಗಳು, ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಭಾಗವಹಿಸಿದೆ ಇರುವುದು ಕಂಡಬಂದಿದೆ.

**೮.೨. ಸಲಹೆಗಳು :-**

ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳಿಗೆ ಅನುಗುಣವಾಗಿ ೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ: "ರಾಜಕೀಯ ಆಶಯಗಳ ಅನುಷ್ಠಾನದ ಅಧ್ಯಯನ"-(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಸಂಶೋಧನಾ ಯೋಜನೆಯ ಆಧಾರದ ಮೇಲೆ ಪಂಚಾಯಿತಿ ರಾಜ್ ಸಂಸ್ಥೆಗಳ ಅದರಲ್ಲಿಯೂ ಮುಖ್ಯವಾಗಿ ಗ್ರಾಮ ಪಂಚಾಯಿತಿಗಳ ಕಾರ್ಯನಿರ್ವಹಣೆಯಲ್ಲಿ ಸುಧಾರಣೆಯನ್ನು ತರಲು ಈ ಕೆಳಗಿನ ಕೆಲವು ಮಹತ್ವದ ಸಲಹೆಗಳನ್ನು ಈ ಕೆಳಗೆ ನೀಡಲಾಗಿರುತ್ತದೆ.

೧) ರಾಜ್ಯ ಸರಕಾರವು ಪಂಚಾಯಿತಿಗಳಿಗೆ ನೀಡುವ ಹಣಕಾಸಿನ ಪ್ರಮಾಣವನ್ನು ಹೆಚ್ಚಿಸಬೇಕು. ಇದರಿಂದ ಪಂಚಾಯಿತಿಗಳು ತಮಗೆ ವಹಿಸಲಾದ ಹಲವಾರು ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಳ್ಳುವುದು ಸಾಧ್ಯವಾಗುತ್ತದೆ.

೨) ಜಿಲ್ಲಾ ಯೋಜನಾ ಸಮಿತಿಗಳಿಗೆ ಹೆಚ್ಚುವರಿಯಾಗಿ ಅಧಿಕಾರ ಮತ್ತು ಹಕ್ಕುಗಳನ್ನು ನೀಡಿ, ಅವುಗಳನ್ನು ಬಲಿಷ್ಟಗೊಳಿಸಬೇಕಾಗಿದೆ. ಸರಕಾರವು ಸಂಬಂಧಿಸಿದ ಜಿಲ್ಲಾ ಪಂಚಾಯತಿ ಮತ್ತು ಗ್ರಾಮ ಪಂಚಾಯಿತಿಗಳಿಗೆ ಅಗತ್ಯ ಹಣವನ್ನು ವಿತರಿಸುವ ಸಂದರ್ಭದಲ್ಲಿ ಜಿಲ್ಲಾ ಯೋಜನಾ ಸಮಿತಿಗಳು ಸಿದ್ದಪಡಿಸಿದ ಯೋಜನೆಗಳನ್ನು ಗಂಭೀರವಾಗಿ ಪರಿಗಣಿಸಬೇಕು.

೩) ಪಂಚಾಯಿತಿಗಳಿಗೆ ನಿರ್ದಿಷ್ಟ ಅನುದಾನವನ್ನು ನೀಡುವುದರ ಜೊತೆಯಲ್ಲಿಯೇ ಅವು ಸ್ಥಳೀಯ ಸಂಪನ್ಮೂಲವನ್ನು ಹೆಚ್ಚಿಸಿಕೊಳ್ಳುವಂತೆ ಅವುಗಳನ್ನು ಸದೃಢಗೊಳಿಸಬೇಕು. ಪಂಚಾಯಿತಿಗಳು ತಮ್ಮ ಸಂಪನ್ಮೂಲಗಳನ್ನು ಹೆಚ್ಚಿಸುವ ಸಲುವಾಗಿ ಪಂಚಾಯಿತಿಗಳ ಆಸ್ತಿಗಳ ಮೌಲ್ಯವನ್ನು ಉನ್ನತೀಕರಿಸಬೇಕು.

೪) ಗ್ರಾಮ ಸಭೆಗಳನ್ನು ಬಲಿಷ್ಟಗೊಳಿಸಬೇಕು. ಪಂಚಾಯಿತಿಗಳು ಗ್ರಾಮ ಸಭೆಗಳನ್ನು ಗಂಭೀರವಾಗಿ ಪರಿಗಣಿಸುವಂತೆ ನಿರ್ದೇಶನ ನೀಡಬೇಕು. ಮತದಾರರು, ಜನ ಪ್ರತಿನಿಧಿಗಳು

ಮತ್ತು ಸರಕಾರಿ ಅಧಿಕಾರಿಗಳು ಹಾಜರಾಗುವಂತೆ ಗ್ರಾಮ ಸಭೆಗಳನ್ನು ಸಂಘಟಿಸಬೇಕು. ಉನ್ನತ ಮಟ್ಟದ ಪಂಚಾಯಿತಿ ಸಂಸ್ಥೆಗಳು ಗ್ರಾಮ ಸಭೆಗಳು ನಿಯಮದಂತೆ ನಡೆದುಕೊಂಡು ಹೋಗುವಂತೆ ನೋಡಿಕೊಳ್ಳಬೇಕು.

೫) ಮತದಾರರಿಗೆ ಜಾಗೃತಿ ಶಿಬಿರ, ತರಬೇತಿ ಕಾರ್ಯಕ್ರಮಗಳು, ವೀಡಿಯೋ ಚಿತ್ರ, ಗುಂಪುಚರ್ಚೆ ಮುಂತಾದವುಗಳ ಮೂಲಕ ಗ್ರಾಮಸಭೆಯ ಪ್ರಾಮುಖ್ಯತೆಯ ಬಗ್ಗೆ ಅರಿವು ಮೂಡಿಸಬೇಕು.

೬) ಯುವಕ ಯುವತಿಯರು ಪಂಚಾಯಿತಿಗಳಿಗೆ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಚುನಾಯಿತರಾಗಿ ಪ್ರಜಾಪ್ರತಿನಿಧಿಗಳಾಗುವಂತೆ ಯುವಕ, ಯುವತಿಯರನ್ನು ಪಂಚಾಯಿತಿಗಳಿಗೆ ಆಕರ್ಷಿಸಲು ಪ್ರಯತ್ನಗಳನ್ನು ಮಾಡಬೇಕು.

೭) ಅಭಿವೃದ್ಧಿ ಯೋಜನೆಗಳ ಉತ್ತಮ ನಿರ್ವಹಣೆಗಾಗಿ ವಿವಿಧ ಅಭಿವೃದ್ಧಿ ಇಲಾಖೆಗಳು ಮತ್ತು ಪಂಚಾಯಿತಿಗಳ ನಡುವಿನ ಸಂಬಂಧ ಸಂಯೋಜನೆಯನ್ನು ಸುಧಾರಿಸಬೇಕು.

೮) ಮಹಿಳಾ ಸದಸ್ಯರು ಚರ್ಚೆಗಳಲ್ಲಿ ಕ್ರಿಯಾಶೀಲರಾಗಿ ಭಾಗವಹಿಸುವಂತೆ ಮಾಡಲು ಜಾಗೃತಿ ಕಾರ್ಯಕ್ರಮಗಳು, ಪ್ರೇರಣಾತ್ಮಕ ಚರ್ಚೆಗಳ ಮೂಲಕ ಅವರನ್ನು ಪ್ರೋತ್ಸಾಹಿಸಬೇಕು. ಪಂಚಾಯಿತಿಯ ಚಟುವಟಿಕೆಗಳಲ್ಲಿ ಮಹಿಳಾ ಸದಸ್ಯರು ಭಾಗವಹಿಸಲು, ಪುರುಷ ಸದಸ್ಯರುಗಳು ಅವರುಗಳಿಗೆ ಪ್ರೋತ್ಸಾಹವನ್ನು ನೀಡಬೇಕು ಮತ್ತು ಅಂಥಹ ವಾತಾವರಣವನ್ನು ನಿರ್ಮಾಣ ಮಾಡಲು ಸಹಕರಿಸಬೇಕು.

೯) ಎಲ್ಲಾ ಚುನಾಯಿತ ಪ್ರತಿನಿಧಿಗಳಿಗೆ ೭೩ನೇ ಸಂವಿಧಾನದ ತಿದ್ದುಪಡಿ, ಕರ್ನಾಟಕ ರಾಜ್ಯ ಪಂಚಾಯತ್ ರಾಜ್ ಕಾಯ್ದೆ, ಪಂಚಾಯಿತಿಗಳ ಕಾರ್ಯಾಚರಣೆಗೆ ಸಂಬಂಧಿಸಿದ ನೀತಿ, ನಿಯಮಗಳು, ಪಾರ್ಲಿಮೆಂಟರಿ ನೀತಿಗಳು ಮುಂತಾದುವುಗಳ ಕುರಿತು ಮಾಹಿತಿ ನೀಡಬೇಕು.ಚುನಾಯಿತ ಪ್ರತಿನಿಧಿಗಳಿಗೆ ಈ ಜ್ಞಾನವನ್ನು ನೀಡಿದರೆ ಅವರುಗಳು ತಮಗೆ ವಹಿಸಲಾದ ಕಾರ್ಯಗಳನ್ನು ನಿರ್ವಹಿಸುವಲ್ಲಿ ಹೆಚ್ಚು ಸಫಲರಾಗುತ್ತಾರೆ.

೧೦) ಪಂಚಾಯತಿಗಳು ಹೆಚ್ಚು ಹೆಚ್ಚು ಸ್ವಾಯತ್ತ ಮತ್ತು ಸ್ವತಂತ್ರ ಸಂಸ್ಥೆಗಳಾಗಬೇಕು. ಮೇಲ್ ಸ್ತರದ ಇತರ ಪಂಚಾಯತಿ ಸಂಸ್ಥೆಗಳು ಪಂಚಾಯತಿಗಳ ಕಾರ್ಯಾಚರಣೆಗಳನ್ನು ಗಮನಿಸುತ್ತಿರಬೇಕು. ಅವು ಪಂಚಾಯಿತಿಯ ದಿನನಿತ್ಯದ ಚಟುವಟಿಕೆಗಳಲ್ಲಿ ಮಧ್ಯಸ್ಥಿಕೆ ವಹಿಸಬಾರದು. ಮೇಲ್ ಸ್ಥರದ ಪಂಚಾಯಿತಿಗಳ ಅತಿ ಹೆಚ್ಚಿನ ಮಧ್ಯಸ್ಥಿಕೆ/ ಹಸ್ತಕ್ಷೇಪವು ಪ್ರಜಾಪ್ರಭುತ್ವ ಮತ್ತು ವಿಕೇಂದ್ರೀಕರಣಗಳ ಸ್ಫೂರ್ತಿಯನ್ನು ಹಾಳುಗೆಡವಬಲ್ಲದು.

೧೧) ಗ್ರಾಮಸ್ಥರು ತಮ್ಮ ಪಂಚಾಯಿತಿಗಳ ಬಗ್ಗೆ ತಿಳಿಯುವಂತಾಗಬೇಕು ಮತ್ತು

ಪಂಚಾಯಿತಿಗಳ ಚಟುವಟಿಕೆಗಳಲ್ಲಿ ಅವರು ಭಾಗಿಗಳಾಗಬೇಕು. ಈ ಸಂಗತಿ ಕುರಿತಂತೆ ಸಂಬಂಧಿಸಿದವರಿಗೆ ನಿರ್ದೇಶನ ನೀಡಬೇಕು. 'ಜನರ ಸಹಭಾಗಿತ್ವ' ಇಲ್ಲದಿದ್ದರೆ ಪಂಚಾಯಿತಿರಾಜ್ ಸಂಸ್ಥೆಗಳು ತಮ್ಮ 'ಬಲ' ಮತ್ತು 'ಅರ್ಥ'ವನ್ನು ಕಳೆದುಕೊಳ್ಳುತ್ತದೆ.

೧೨) ಪಂಚಾಯತಿ ಸಂಸ್ಥೆಗಳ (೩ ಹಂತಗಳಲ್ಲಿ) ಸಮನ್ವಯನ್ನು ತರುವಂತೆ ಕ್ರಮ ವಹಿಸುವುದು.

೧೩) ಪಂಚಾಯಿತ್ ರಾಜ್ ಸಂಸ್ಥೆಗಳಿಗೆ ಬಿಡುಗಡೆ ಮಾಡುತ್ತಿರುವ ಅನುದಾನದ ಮೇಲೆ ನಿಗಾವಹಿಸುವುದು.

೧೪) ಪ್ರಸ್ತುತ ಹದಿನಾಲ್ಕನೇಯ ಹಣಕಾಸು ಮತ್ತು ನಾಲ್ಕನೇ ರಾಜ್ಯ ಹಣಕಾಸು ಆಯೋಗವು ಗ್ರಾಂ ಪಂಚಾಯಿತಿಗಳಿಗೆ ಹೆಚ್ಚಿನ ಅನುದಾನವನ್ನು ಬಿಡುಗಡೆ ಮಾಡುತ್ತಿದೆ. ಇದರ ಜೊತೆಗೆ ಜಿಲ್ಲಾ ಮತ್ತು ತಾಲೂಕು ಪಂಚಾಯಿತಿಗಳು ಸಮಾನವಾದ ಅನುದಾನ ಬಿಡುಗಡೆ ಮಾಡಬೇಕು.

೧೫)ಪಂಚಾಯಿತಿ ಸಿಬ್ಬಂದಿಗಳು ಸ್ವಯಂ ಪೇರಿತರಾಗಿ ಕಾರ್ಯ ನಿರ್ವಹಿಸಬೇಕಾದರೆ ಅವರುಗಳಿಗೆ ವೇತನ ಪ್ರಮಾಣವು ಏರಿಕೆ ಮಾಡಬೇಕು (೨೦೦೪-೦೫ ರಲ್ಲಿ ಶೇ ೭೭.೦೪ ರಿಂದ ೨೦೧೬-೧೭ ಅದು ಶೇ ೭೧.೧೬ಕ್ಕೆ ಇಳಿಯಿತು ಇದರಿಂದ ಅವುಗಳ ಸ್ವಾಯುತ್ತತೆ ಮೀತಿ ದೊಡ್ಡ ಪರಿಣಾಮ ಬೀರುತ್ತದೆ.

೧೬)ಜಿಲ್ಲಾ ಯೋಜನಾ ಸಮಿತಿಗಳಿಗೆ ಹೆಚ್ಚುವರಿಯಾಗಿ ಅಧಿಕಾರ ಮತ್ತು ಹಕ್ಕುಗಳನ್ನು ನೀಡಿ ಬಲಗೊಳಿಸಬೇಕಾಗಿದೆ.

೧೭)ಜಿಲ್ಲಾ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಗ್ರಾಮಪಂಚಾಯಿತಿಗಳ ಸದಸ್ಯರು, ಅಧ್ಯಕ್ಷರು, ಉಪಾಧ್ಯಕ್ಷರು, ಅಧಿಕಾರಿಗಳು, ಸಮಿತಿಯ ಸಭೆಗಳಿಗೆ ಕಡ್ಡಾಯವಾಗಿ ಹಾಜರಿರಬೇಕೆಂದು ನಿಯಮ ಹೊರಡಿಸುವುದು.

೧೮)ಪಂಚಾಯಿತ್‌ನ ಎಲ್ಲಾ ಹಂತಗಳಲ್ಲಿ ಎಲ್ಲಾ ಅಧಿಕಾರಿಗಳಿಗೆ, ಸದಸ್ಯರುಗಳಿಗೆ ತರಬೇತಿ ಹಾಗೂ ರಾಜಕೀಯ ಪ್ರಜ್ಞೆಯ ಬಗ್ಗೆ ಅರಿವು ಮೂಡಿಸುವುದು.

೧೯) ಮೇಲ್‌ಹಂತದ ಸರ್ಕಾರ ಸಂಸ್ಥೆಗಳಲ್ಲಿ ಸ್ಪರ್ಧಿಸುವ ಜನ ಪ್ರತಿನಿಧಿಗಳಿಗೆ ಶಿಕ್ಷಣ ಅರ್ಹತೆಯನ್ನು ಕಡ್ಡಾಯಗೊಳಿಸುವುದು.

ಅಭಿವೃದ್ಧಿಗೆ ಸಂಬಂಧಿಸಿದಂತೆ ಸೇವಾ ಸೌಲಭ್ಯಗಳನ್ನು ತಳಮಟ್ಟದಲ್ಲಿ ಜನರಿಗೆ ಒದಗಿಸುವ ಕಾರ್ಯದಲ್ಲಿ ಗ್ರಾಮ ಪಂಚಾಯಿತಿಗಳ ಪಾತ್ರ ನಿರ್ಣಾಯಕವಾದುದಾಗಿದೆ. ಜನರಿಗೆ ಸೇವಾ ಸೌಲಭ್ಯಗಳನ್ನು ಪರಿಣಾಮಕಾರಿಯಾಗಿ ಮತ್ತು ಕಾರ್ಯಕ್ಷಮತೆಯಿಂದ ಒದಗಿಸುವ ಬಗ್ಗೆ ಆಡಳಿತ ಪರಿಪಾಲನೆಯನ್ನು ಉತ್ತಮ ಪಡಿಸಬೇಕಾಗಿದೆ. ಗ್ರಾಮ ಪಂಚಾಯಿತಿ ಮಟ್ಟದಲ್ಲಿ

ಆಡಳಿತ ಪರಿಪಾಲನೆಯನ್ನು ಉತ್ತಮಪಡಿಸುವುದರಿಂದ ಆಡಳಿತವು ಜನಪರವಾಗುತ್ತದೆ ಮತ್ತು ಜನಸ್ಪಂದಿಯಾಗುತ್ತದೆ ಮತ್ತು ಸಾರ್ವಜನಿಕ ಪ್ರಾಧಿಕಾರಗಳು ಸಾಮಾನ್ಯ ಜನರ ಒಳಿತಿಗಾಗಿ ಚಟುವಟಿಕೆಗಳನ್ನು ನಡೆಸುವುದು ಸಾಧ್ಯವಾಗುತ್ತದೆ. ಗ್ರಾಮ ಪಂಚಾಯಿತಿಗಳ ಪರಿಣಾಮಕಾರಿ ಕಾರ್ಯಕ್ಷಮತೆಗೆ ಅಗತ್ಯವಾದ ಸಂಗತಿಯೆಂದರೆ ಅಧಿಕಾರ, ಹಣಕಾಸು ಸಂಪನ್ಮೂಲ ಮತ್ತು ಸಿಬ್ಬಂದಿ ಬಗ್ಗೆ ಸಂಪೂರ್ಣ ಅಧಿಕಾರವನ್ನು ವರ್ಗಾಯಿಸಬೇಕಾಗುತ್ತದೆ. ಅಭಿವೃದ್ಧಿ ಯೋಜನೆಗಳನ್ನು ರೂಪಿಸುವುದು, ಅನುಷ್ಠಾನಗೊಳಿಸುವುದು, ಲೆಕ್ಕ ಪರಿಶೋಧನೆಯನ್ನು ಪರಿಶುದ್ಧವಾಗಿ ನಡೆಸುವುದು, ಹಣಕಾಸಿನ ನಿರ್ವಹಣೆಯನ್ನು ಸಮರ್ಪಕವಾಗಿ ನಡೆಸುವುದು ಮತ್ತು ಆಡಳಿತದಲ್ಲಿ ಸುಧಾರಣೆ ತರುವುದು ಮುಂತಾದುವುಗಳಿಗಾಗಿ ಗ್ರಾಮ ಪಂಚಾಯಿತಿಗಳ ಸಾಮರ್ಥ್ಯವನ್ನು ಹೆಚ್ಚಿಸಬೇಕಾಗುತ್ತದೆ.

ನಕ್ಷೆಗಳು :-

೧. ಅನುಬಂಧ ಬಳ್ಳಾರಿ ಜಿಲ್ಲೆ ನಕ್ಷೆ




೨. ಅನುಬಂಧ ೨: ಬಳ್ಳಾರಿ ತಾಲೂಕು ನಕ್ಷೆ



## ಅನುಬಂಧ, ಕೋಷ್ಟಕಗಳು

### ಕೋಷ್ಟಕ ೧ : ಬಳ್ಳಾರಿ ಜಿಲ್ಲೆಯ ಜನಸಂಖ್ಯೆ ಹಾಗೂ ಬೆಳವಣಿಗೆದರ

| ತಾಲೂಕುಗಳು | ೨೦೦೧ | ೨೦೧೧ | ೨೦೦೧-೨೦೧೧ |
|---|---|---|---|
| ಬಳ್ಳಾರಿ | ೬.೨೬ | ೭.೮೮ | ೨೫.೮೭ |
| ಹಡಗಲಿ | ೧.೬೮ | ೨.೦೭ | ೨೩.೨೧ |
| ಹಗರಿಬೊಮ್ಮನಹಳ್ಳಿ | ೧.೬೦ | ೧.೯೮ | ೨೩.೭೫ |
| ಹೊಸಪೇಟೆ | ೩.೭೫ | ೪.೬೮ | ೨೪.೮ |
| ಕೂಡ್ಲಿಗಿ | ೨.೭೨ | ೩.೨೨ | ೧೮.೩೮ |
| ಸೊಂಡೂರು | ೧.೯೧ | ೨.೭೦ | ೪೧.೩೬ |
| ಸಿರುಗುಪ್ಪ | ೨.೩೫ | ೨.೭೯ | ೧೮.೭೨ |
| ಬಳ್ಳಾರಿ ಜಿಲ್ಲೆ | ೨೦.೨೭ | ೨೫.೩೨ | ೨೪.೯೧ |
| ಕರ್ನಾಟಕ ರಾಜ್ಯ | ೫೩೮.೭೦ | ೬೧೧.೩೦ | ೧೨.೫೨ |

### ಕೋಷ್ಠಕ -೨ ಗ್ರಾಮೀಣ -ನಗರ ಜನಸಂಖ್ಯೆ

| ತಾಲೂಕುಗಳು | ೨೦೦೧ | ೨೦೧೧ | ಜನಸಂಖ್ಯೆ | ೨೦೦೧ | ೨೦೧೧ | ಬೆಳವಣಿಗೆ ಧರ |
|---|---|---|---|---|---|---|
| ಬಳ್ಳಾರಿ | ೩.೦೮ | ೩.೭೯ | ೨೩.೦೫ | ೩.೧೭ | ೪.೯೭ | ೫೬.೭೮ |
| ಹಡಗಲಿ | ೧.೪೫ | ೧.೭೯ | ೨೩.೪೫ | ೨೩.೪೧೪ | | ೧೯.೪೦ |
| ಹಗರಿಬೊಮ್ಮನಹಳ್ಳಿ | ೧.೬೦ | ೧.೯೮ | ೨೩.೭೫ | - | - | - |
| ಹೊಸಪೇಟೆ | ೧.೫೩ | ೧.೯೭ | ೨೮.೭೬ | ೨.೨೧ | ೨.೭೧ | ೨೨.೬೨ |
| ಕೂಡ್ಲಿಗಿ | ೨.೨೮ | ೨.೬೯ | ೧೭.೯೮ | ೪೪೫೫೦ | ೫೩.೦೧೫ | ೧೯.೦೦ |
| ಸೊಂಡೂರು | ೧.೬೦ | ೧.೯೧ | ೧೯.೩೭ | ೩೪೧೬೮ | ೭೯೦೪೩ | ೧೩೧.೨೪ |
| ಸಿರುಗುಪ್ಪ | ೧.೬೯ | ೨.೦೦ | ೧೮.೩೪ | ೬೬೫೦೨ | ೭೮೭೮೧ | ೧೮.೪೬ |
| ಬಳ್ಳಾರಿ ಜಿಲ್ಲೆ | ೧೩.೨೦ | ೧೬.೧೩ | ೨೨.೨ | ೭೦೬ | ೯.೧೯ | ೨೦.೧೨ |

## ಬಳ್ಳಾರಿ ಜಿಲ್ಲೆಯ ಮತದಾರರ ಕ್ಷೇತ್ರವಾರು ವಿವರ: ೦೫.೦೧.೨೦೧೫

| ಕ್ರ.ಸಂ | ಸ್ಥಳ | ಪುರುಷ ಮತದಾರರು | ಮಹಿಳಾ ಮತದಾರರು | ಇತರೆ ಮತದಾರರು | ಒಟ್ಟು ಮತದಾರರು |
|---|---|---|---|---|---|
| ೧. | ಬಳ್ಳಾರಿ ನಗರ | ೧೦೪೯೫೮ | ೧೦೫೮೭೭ | ೧೪ | ೨೧೦೮೪೯ |
| ೨. | ಬಳ್ಳಾರಿ | ೯೫೭೭೩ | ೯೭೩೪೦ | ೩೦ | ೧೯೩೧೪೩ |
| ೩. | ಹಡಗಲಿ | ೮೮೧೬೮ | ೮೪೮೦೪ | ೧೦ | ೧೭೨೯೮೨ |
| ೪. | ಹಗರಿಬೊಮ್ಮನಹಳ್ಳಿ | ೧೦೧೧೧೯ | ೯೮೫೨೭ | ೧೯ | ೧೯೯೬೬೫ |
| ೫. | ವಿಜಯನಗರ | ೯೫೯೫೮ | ೯೫೮೪೦ | ೪೩ | ೧೯೧೮೪೧ |
| ೬. | ಕಂಪ್ಲಿ | ೯೭೨೯೭ | ೯೬೯೩೪ | ೧೮ | ೧೯೪೨೪೯ |
| ೭. | ಸಿರುಗುಪ್ಪ | ೯೦೬೪೯ | ೯೨೧೭೭ | ೧೫ | ೧೮೨೮೪೧ |
| ೮. | ಸೊಂಡೂರು | ೯೯೩೨೧ | ೯೫೬೩೯ | ೩೩ | ೧೯೪೯೯೩ |
| ೯. | ಕೂಡ್ಲಿಗಿ | ೯೨೬೨೩ | ೮೮೯೩೨ | ೧೦ | ೧೮೧೫೬೫ |
| ಒಟ್ಟು | | ೮೬೫೮೬೬ | ೮೫೬೦೭೦ | ೧೦೨ | ೧೭೨೨೧೨೮ |
| ಮೂಲ : ರಾಜ್ಯ ಚುನಾವಣೆ ಆಯೋಗ ಅಂಕಿ ಅಂಶಗಳು | | | | | |

## ಬಳ್ಳಾರಿ ಜಿಲ್ಲೆಯ ತಾಲೂಕುವಾರು ಮಾನವ ಅಭಿವೃದ್ಧಿ ಸೂಚ್ಯಂಕ ಮತ್ತು ಅವುಗಳ ಮೂರು ಆಯಾಮಗಳ ಸೂಚ್ಯಂಕಗಳು ೨೦೧೧-೨೦೧೨

| ವೈಯಕ್ತಿಕ ಸೂಚಿಗಳು | ಜೀವನ ಮಟ್ಟ ಸೂಚ್ಯಂಕ | | ಆರೋಗ್ಯ ಸೂಚ್ಯಂಕ | | ಶಿಕ್ಷಣ ಸೂಚ್ಯಂಕ | | ಮಾನವ ಅಭಿವೃದ್ಧಿ ಸೂಚ್ಯಂಕ | |
|---|---|---|---|---|---|---|---|---|
| | ಮೌಲ್ಯ | ಶ್ರೇಣಿ | ಮೌಲ್ಯ | ಶ್ರೇಣಿ | ಮೌಲ್ಯ | ಶ್ರೇಣಿ | ಮೌಲ್ಯ | ಶ್ರೇಣಿ |
| ಬಳ್ಳಾರಿ | ೦.೭೮೩ | ೨ | ೦.೯೧೫ | ೧ | ೦.೫೯೯ | ೬ | ೦.೭೫೪ | ೧ |
| ಹಡಗಲಿ | ೦.೧೨೪ | ೭ | ೦.೭೩೭ | ೨ | ೦.೭೮೭ | ೩ | ೦.೪೧೬ | ೬ |
| ಹಗರಿಬೊಮ್ಮನಹಳ್ಳಿ | ೦.೨೫೯ | ೪ | ೦.೩೯೧ | ೫ | ೦.೮೬೭ | ೨ | ೦.೪೪೪ | ೫ |
| ಹೊಸಪೇಟೆ | ೦.೮೧೧ | ೧ | ೦.೨೧೯ | ೭ | ೦.೬೪೯ | ೫ | ೦.೪೮೬ | ೩ |
| ಕೂಡ್ಲಿಗಿ | ೦.೧೮೧ | ೬ | ೦.೫೫೧ | ೪ | ೦.೯೫೬ | ೧ | ೦.೪೬೧ | ೪ |
| ಸೊಂಡೂರು | ೦.೭೧೮ | ೩ | ೦.೨೯೪ | ೬ | ೦.೬೫೯ | ೪ | ೦.೫೧೮ | ೨ |
| ಸಿರುಗುಪ್ಪ | ೦.೨೦೩ | ೫ | ೦.೬೦೯ | ೩ | ೦.೩೯೨ | ೭ | ೦.೩೬೪ | ೭ |
| ಮೂಲ: ಬಳ್ಳಾರಿ ಜಿಲ್ಲಾ ಪಂಚಾಯತ್ ಕಾರ್ಯಾಲಯ ಮಾನವ ಅಭಿವೃದ್ಧಿ ವರದಿ – ೨೦೧೪ | | | | | | | | |

## ಎ) ಕೂಡ್ಲಿಗಿ ತಾಲೂಕು ಜನಸಂಖ್ಯೆ ಪ್ರಮಾಣ -೨೦೧೧

| | | |
|---|---|---|
| ೧. | ಕುಟುಂಬಗಳ ಸಂಖ್ಯೆ | ೫೯,೩೨೮ |
| ೨. | ಜನಸಂಖ್ಯೆ | ೩,೦೮,೯೦೧ |
| ೩. | ಪುರುಷರು | ೧,೫೭,೪೦೨(೫೦.೯೬%) |
| ೪. | ಮಹಿಳೆಯರು | ೧,೫೧,೪೯೯(೪೯.೦೪%) |
| ೫. | ಮಕ್ಕಳು | ೪೦.೦೨೫ |
| ೬ | ವಿಸ್ತೀರ್ಣ | ವಿಜಯನಗರ |
| ೭ | ಜನಸಂಖ್ಯೆಯ ಪ್ರಮಾಣ ೨.ಕೀ.ಮಿ ಗೆ | ೧೯೪ |
| ೮. | ಲಿಂಗಾನುಪಾತ | ೯೬೨ |
| ೯. | ಸಾಕ್ಷರತೆ ಪ್ರಮಾಣ | ೬೦.೨೬% |
| ೧೦. | ಪುರುಷರ ಸಾಕ್ಷರತೆ | ೬೮.೨೪% |
| ೧೧. | ಮಹಿಳಾ ಸಾಕ್ಷರತೆ | ೫೧.೯೮% |
| ೧೨. | ಪರಿಶಿಷ್ಟ ಪಂಗಡ (%) | ೨೭.೮೭% |
| ೧೩. | ಪರಿಶಿಷ್ಟ ಜಾತಿ (%) | ೨೨.೪೬% |
| ಮೂಲ: ಬಳ್ಳಾರಿ ಜಿಲ್ಲೆಯ ಅಂಕಿ-ಅಂಶಗಳ ನೋಟ-೨೦೧೧ | | |

## ಬಿ) ಕೂಡ್ಲಿಗಿ ತಾಲೂಕಿನ ನಗರ –ಗ್ರಾಮೀಣ ಜನಸಂಖ್ಯೆ ಪ್ರಮಾಣ

| ಕ್ರಸಂ | ಕೂಡ್ಲಿಗಿ ತಾಲೂಕು | ನಗರ ಪ್ರಮಾಣ | ಗ್ರಾಮೀಣ ಪ್ರಮಾಣ |
|---|---|---|---|
| ೧. | ಒಟ್ಟು ಕುಟುಂಬಗಳು | ೧೦೬೮೨ | ೪೮೬೪೬ |
| ೨. | ಜನಸಂಖ್ಯೆ | ೫೨.೯೬೯ | ೨೫೫೯೩೨ |
| ೪. | ಪುರುಷ ಜನಸಂಖ್ಯೆ | ೨೬,೬೧೮ | ೧೩೦೭೮೪ |
| ೫. | ಮಹಿಳೆ ಪ್ರಮಾಣ | ೨೬.೩೫೧ | ೧,೨೫,೧೪೮ |
| ೬. | ಲಿಂಗಾನುಪಾತ | ೯೯೦ | ೯೫೭ |
| ೭. | ಸಾಕ್ಷರತೆ ಪ್ರಮಾಣ | ೭೧.೧೬% | ೫೮% |
| ೮. | ಜನಸಂಖ್ಯೆ ಶೇಕಡವಾರು (%) | ೫೦.೨೫% | ೪೮.೯% |

http://www.ballarideoballary

## ಬಳ್ಳಾರಿ ಗ್ರಾಮಾಂತರ, ಗ್ರಾಮೀಣ ಸ್ಥಳೀಯ ಸರ್ಕಾರಗಳ ಚುನಾವಣೆ -೨೦೧೩

| ಕ್ರ.ಸಂ | ರಾಜಕೀಯ ಪಕ್ಷಗಳು | ಮತಗಳು | ಶೇಕಡವಾರು |
|---|---|---|---|
| ೧. | BSRCP | ೭೪,೮೫೪ | ೫೭.೪೪ |
| ೨. | INC | ೪೧,೫೬೦ | ೩೧.೮೯ |
| ೩. | JDS(S) | ೩,೯೫೮ | ೩೦೪ |
| ೪. | BJP | ೨,೪೭೮ | ೧೯ |
| ೫. | KJP | ೨,೩೪೭ | ೧೮ |
| ೬. | IND | ೧,೦೯೭ | ೦.೮೪ |
| ೭. | IND | ೮೧೫ | ೦.೬೩ |
| ೮. | SUCI | ೭೨೬ | ೦.೫೬ |
| ೯. | BSP | ೫೭೯ | ೦.೪೪ |
| ೧೦. | IND | ೫೨೬ | ೦.೪ |
| ೧೧. | IND | ೪೭೮ | ೦.೩೭ |
| ೧೨. | IND | ೪೫೩ | ೦.೩೫ |
| ೧೩. | AMJP | ೪೪೩ | ೦.೩೪ |

ಬಳ್ಳಾರಿ ಗ್ರಾಮಾಂತರ, ಗ್ರಾಮೀಣ ಸ್ಥಳೀಯ ಸರ್ಕಾರಗಳ ಚುನಾವಣೆ -೨೦೧೮

| ಕ್ರ.ಸಂ | ರಾಜಕೀಯ ಪಕ್ಷಗಳು | ಮತಗಳು | ಶೇಕಡವಾರು |
|---|---|---|---|
| ೧. | BJP | ೬೧,೯೯೧ | ೫೬.೨೩ |
| ೨. | INC | ೩೬,೨೭೫ | ೩೨.೯೧ |
| ೩. | JDS(S) | ೫,೨೦೭ | ೪.೭೨ |
| ೪. | IND | ೨,೫೯೩ | ೨.೩೫ |
| ೫. | IND | ೧,೫೮೦ | ೧.೪೩ |
| ೬. | BSP | ೧,೫೨೨ | ೧.೩೮ |
| ೭. | IND | ೧,೦೭೧ | ೦.೯೭ |

## ರಾಜಕೀಯ ಮತದಾನ ಶೇಕಡವಾರು -೨೦೧೮

| ಕ್ರ.ಸಂ | ರಾಜಕೀಯ ಪಕ್ಷಗಳು | ಮತಗಳು | ಶೇಕಡವಾರು |
|---|---|---|---|
| ೧. | INC | ೭೯೧೮೬ | ೪೮.೫೪% |
| ೨. | BJP | ೭೬೫೦೭ | ೪೬.೯೦% |
| ೩. | JDS(S) | ೩೨೧೨ | ೧.೯೭% |
| ೪. | NOTA | ೧೬೯೫ | ೧.೦೪% |
| ೫. | AIMEP | ೭೬೯ | ೦.೪೭% |
| ೬. | IND | ೬೬೦ | ೦.೪೦% |
| ೭. | IND | ೪೦೧ | ೦.೨೫% |
| ೮. | PPOI | ೩೫೮ | ೦.೨೨% |
| ೯. | IND | ೩೪೦ | ೦.೨೧% |

https:/www/.news 18.com

ಮೂಲ: ಬಳ್ಳಾರಿ ರೂರಲ್ ಸೆಕ್ಷನ್ ಎಲೆಕ್ಷನ್ ರಾಜ್ಯ ಚುನಾವಣಾ ಆಯೋಗ.

## ಪರಾಮರ್ಶನ ಗ್ರಂಥಗಳು

### ಕನ್ನಡ ಕೃತಿಗಳು

೧. ಅಸ್ಲಮ್ ಎಂ., ಭಾರತದಲ್ಲಿ ಪಂಚಾಯತಿ ರಾಜ್ (ಅನುದಾನ) ಈಶ್ವರ ಚಂದ್ರ ಪ್ರಕಾಶಕರು–ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಹೊಸ ದೆಹಲಿ. ೨೦೦೭

೨. ಅಶೋಕ್ ಹೊಸೂರ, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩ ಪ್ರಕಾಶಕರು ಎಂ.ಬಿ.ಸಿ ಪಬ್ಲಿಕೇಷನ್ ಮಂಗಳೂರು. ೨೦೧೨

೩. ಉಮ್ಮನ್ ಎಂ.ಎ, ವಿತ್ತಿಯ ಒಕ್ಕೂಟ ವ್ಯವಸ್ಥೆ: ಯೋಜನಾ ಅಭಿವೃದ್ಧಿ ಮಾಸ ಪತ್ರಿಕೆ ಕೇಂದ್ರೀಯ ಸದನ ಪಬ್ಲಿಷರ್ ಬೆಂಗಳೂರು. ೨೦೧೫

೪ ಕಿಚಿಡಿ ಚನ್ನಪ್ಪ, ಕರ್ನಾಟಕದಲ್ಲಿ ಗ್ರಾಮ ಪಂಚಾಯತಿ ಬೆಳವಣಿಗೆ ಅಂದು–ಇಂದು ಸಂ: ೮ ಸಂ: ೨.ಕನ್ನಡ ವಿಶ್ವವಿದ್ಯಾಲಯ ಹಂಪಿ.೨೦೧೦

೫. ಗಣೇಶ್ ಪ್ರಸಾದ್ ಜಿ.ಎಸ್, ಗ್ರಾಮ ಪಂಚಾಯಿತಿ ಮತ್ತು ಸುಸ್ಥಿತ ಅಭಿವೃದ್ಧಿ ಮದ್ರಾಸ್ ಇನ್‌ಸ್ಟಿಟ್ಯೂಟ್ ಆಫ್ ಡೆವಲಪ್‌ಮೆಂಟ್ ಸ್ಟಡೀಸ್ ಚನ್ನೈ., ೨೦೦೦

೬. ಚಂದ್ರಪೂಜಾರಿ ಎಂ., ದೇಶಿಯತೆ ನೆರಳಲ್ಲಿ ವಿಕೇಂದ್ರೀಕರಣ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೧

೭. ಚಂದ್ರಪೂಜಾರಿ ಎಂ, ಸಮುದಾಯ ಮತ್ತು ಸಹಭಾಗಿತ್ವ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.೨೦೦೨

೮. ಚಂದ್ರಪೂಜಾರಿ ಎಂ., ಜನಾಯೋಜನೆ –ಹೈದರಾಬಾದ್ ಕರ್ನಾಟಕದ ಅನುಭವಗಳು ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ. ೨೦೦೪

೯. ಚಂದ್ರಪೂಜಾರಿ.ಎಂ, ಸಮಾಜ ಸಂಶೋದನೆ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫

೧೦. ಚಂದ್ರಪೂಜಾರಿ.ಎಂ, ಸಂಶೋದನೆ ಏನು? ಏಕೆ? ಹೇಗೆ? ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೯

೧೧. ಚಂದ್ರ ಪೂಜಾರಿ ಎಂ, ಕರ್ನಾಟಕ ಪಂಚವಾರ್ಷಿಕ ಯೋಜನೆಗಳು ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೧೦

೧೨. ಚಂದ್ರಪೂಜಾರಿ ಎಂ., ಕರ್ನಾಟಕ ಪಂಚಾಯತ್ ರಾಜ್ ಸಮಸ್ಯೆ ಮತ್ತು ಪರಿಹಾರಗಳು ಪ್ರಕಾಶನ ಕರ್ನಾಟಕ ರಾಜ್ಯ ಗ್ರಾಮ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು, ಹಾಗೂ ಸದಸ್ಯರ ಒಕ್ಕೂಟ. ಕ್ರೀಯಾ ಪ್ರಕಾಶನ್ ಬೆಂಗಳೂರು. ೨೦೧೧

೧೩. ಚಂದ್ರಶೇಖರ್ .ಕೆ, ಅಭಿವೃದ್ಧಿ ಪಥದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು ೩೨೬.೮ ಸಿ.ಹೆಚ್. ಅಹನ್ ಪಬ್ಲಿಕೇಶನ್ ನಾಗರಭಾವಿ ಬೆಂಗಳೂರು. ೨೦೦೯

೧೪. ಚಂದ್ರಶೇಖರ್ ಟಿ.ಆರ್, ಬಜೆಟ್ ಅಧ್ಯಯನ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೦

೧೫. ಚಂದ್ರಶೇಖರ್ ಟಿ.ಆರ್, ಜನರನ್ನು ಒಳಗೊಳ್ಳುವ ಅಭಿವೃದ್ಧಿ ಹೈದ್ರಾಬಾದ್ ಕರ್ನಾಟಕ ಅಧ್ಯಾಯನ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೯

೧೬. ಜಾರ್ಜ್ ಮ್ಯಾಥ್ಯು, ಕರ್ನಾಟಕದ ಪಂಚಾಯತ್ ಚುನಾವಣೆಗಳು (ಅನುವಾದ ಕನ್ನಡಕ್ಕೆ ಕೆ.ಶುಭ) ಇನ್‌ಸ್ಟಿಟ್ಯೂಟ್ ಆಫ್ ಸೋಶಿಯಲ್ ಸೈನ್ಸ್ ಬೆಂಗಳೂರು. ೧೯೯೫

೧೭. ಡೇವಿಡ್ ಬೆಂಥಮ್, ಚುನಾವಣೆ ಪ್ರಜಾಪ್ರಭುತ್ವ ಲಾ ಪ್ರಶ್ನೆಗಳು ಮತ್ತು ಉತ್ತರಗಳು ಕನ್ನಡಕ್ಕೆ ಅನುವಾದ ಈಶ್ವರ ಚಂದ್ರ ಪ್ರಕಾಶನ ಯುನೇಸ್ಕೋ ಸಹಯೋಗದೊಂದಿಗೆ ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ. ೯೯೭

೧೮. ದಿನೇಶ್ ಎಲ್. ಎಸ್, ೭೩ನೇ ಸಂವಿಧಾನದ ತಿದ್ದುಪಡಿ ಕಾಯ್ದೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸ್ಥಳೀಯ ಸರ್ಕಾರಗಳು ಸ್ಥಾನ–ಮಾನ ಕರ್ನಾಟಕ ವಿಕಾಸ ಪ್ರಕಾಶನ ರೂರಲ್ ಡೆವಲಂಪಮೆಂಟ್ ಆಂಡ್ ಪಂಚಾಯತ್ ರಾಜ್ ಡಿಪಾರ್ಟ್‌ಮೆಂಟ್ ನವೆಂಬರ್ ೨೦೧೫

೧೯. ದೇವಗೌಡ ಟಿ.ಡಿ, ಇಂಡಿಯನ್ ಪಾಲಿಟಿ ಚಂದನಾ ಪ್ರಕಾಶನ್ ಬೆಂಗಳೂರು. ೨೦೦೯

೨೦. ಪ್ರಭಾಕರ ಶಿಶಿಲ. ಬಿ, ಅಭಿವೃದ್ಧಿ ಮತ್ತು ಯೋಜನಾ ೨೦೦೩ ಅರ್ಥಶಾಸ್ತ್ರ, ಕಲಾ ಪ್ರಕಾಶನ ಬೆಂಗಳೂರು. ೨೦೦೩

೨೧. ಬೈರಪ್ಪ .ಕೆ, ಭಾರತದಲ್ಲಿ ಗ್ರಾಮೀಣಾಭಿವೃದ್ಧಿ ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ ಕಲಬುರ್ಗಿ. ೧೯೯೭

೨೨. ಯರ್ರಿಸ್ವಾಮಿ .ಎಂ, ಗ್ರಾಮ ಪಂಚಾಯಿತಿ ಮತ್ತು ಸಬಲೀಕರಣ ಅಭಿವೃದ್ಧಿ ಅಧ್ಯಯನ ವಿಭಾಗ ಸಮಾಜ ವಿಜ್ಞಾನ ಪತ್ರಿಕೆ ಸಂಪುಟ –ಸಂಚಿಕೆ–೨ ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೬

೨೩. ರಾಜಶೇಖರ್, ಎಚ್.ಎಂ, ಭಾರತ ಸರ್ಕಾರ ಮತ್ತು ರಾಜಕೀಯ ಕಿರಾಣ ಪ್ರಕಾಶನ, ಮೈಸೂರು. ೨೦೦೯

೨೪. ಲಕ್ಷ್ಮಣ ಹೆಚ್.ಕೆ. ಹಾಗೂ ದಾನೇಗೌಡ, ಭಾರತದ ಸಂವಿಧಾನ ಶ್ರೀ ಅನ್ನಪೂರ್ಣ ಪ್ರಕಾಶನ ಮತ್ತು ವಿತರಕರು ಬೆಂಗಳೂರು. ೨೦೧೪

೨೫. ವಿಲ್ಪ್ರೆಡ್ ಡಿಸೋಜಾ, ಪ್ರಜಾಪ್ರಭುತ್ವ ಮತ್ತು ವಿಕೇಂದ್ರೀಕರಣ ಸಲಹೆಗಾರರು ಅನುಸಾರಣ ಸಂಸ್ಥೆ ಮೈಸೂರು. ೨೦೧೩

೨೬. ಶಂಕರಪ್ಪ .ಆರ್, ಆಡಳಿತ ವಿಕೇಂದ್ರೀಕರಣ ಮತ್ತು ಗ್ರಾಮೀಣಾಭಿವೃದ್ಧಿ ಅನುಜೆಯ ಪ್ರಕಾಶನ ಬೆಂಗಳೂರು. ೨೦೦೭

೨೭. ಶಂಕರಪ್ಪ .ಆರ್, ಪಂಚಾಯತಿ ಅಭಿವೃದ್ಧಿ ಅಧಿಕಾರಿ (ಪರಿಕ್ಷಾ ಮಾರ್ಗದರ್ಶಿ) ಚೈತ್ರ ಪ್ರಕಾಶನ ಬೆಂಗಳೂರು. ೨೦೧೦

೨೮. ಸಿದ್ದಗಂಗಮ್ಮ, ಅಭಿವೃದ್ಧಿ ಅಧ್ಯಯನ ವಿಭಾಗ ಸಮಾಜ ವಿಜ್ಞಾನಗಳ ಪತ್ರಿಕೆ ಸಂಪಾದಕರು–ಡಾ. ಸಿದ್ದಗಂಗಮ್ಮ ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೧೬

೨೯. ಸುಬ್ರತಾ .ಕೆ ಮೀಶ್ರ, ಪ್ರಜಾತಂತ್ರ ಮತ್ತು ಚುನಾವಣಾ ಸುಧಾರಣೆ (ಕನ್ನಡಕ್ಕೆ ಅನುದಾನ ಕೆ.ಶ್ರೀ ನಿವಾಸನ್) ಯೋಜನಾ ಅಭಿವೃದ್ಧಿ ಮಾಸ ಪತ್ರಿಕೆ. ೨೦೧೪

೩೦. ಶ್ರೀಧರ್.ಎ, ಪಂಚಾಯತ್ ಚುನಾವಣೆಗಳು ಅಭಿವೃದ್ಧಿ ಅಧ್ಯಯನ ವಿಭಾಗ ಸಮಾಜ ವಿಜ್ಞಾನಗಳ ಪತ್ರಿಕೆ ಸಂಪುಟ :೪ ಸಂಚಿಕೆ ೧ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೫

೩೧. ಶ್ರೀಧರ್ .ಎ, ವಿಕೇಂದ್ರೀಕರಣ ಮತ್ತು ಗ್ರಾಮ ಪಂಚಾಯತ್ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.೨೦೦೨

೩೨. ಶ್ರೀಧರ.ಎ, ಕರ್ನಾಟಕದಲ್ಲಿ ಪಂಚಾಯತ್ ರಾಜ್ ಕಾಯ್ದೆಗಳು ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.೨೦೦೦

**ಇಂಗ್ಲೀಷ್ ಕೃತಿಗಳು :**

೩೩. ಅಬ್ದುಲ್ ಅಜೀಜ್, ಡಿಸೆಂಟ್ರೈಲೈಜೇಶನ್ಸ್ ಗವರ್ನನ್ಸ ಇನ್ ಏಷಿಯ ಕಂಟ್ರಿಸ್ ಪ್ರಕಾಶನ–ಸೆಜ್ ಪಬ್ಲಿಕೇಷನ್ ನ್ಯೂ ಡೆಲ್ಲಿ ೧೯೯೬

೩೪. ಅಲಗ್ ವೈ.ಕೆ., ಪಂಚಾಯತ್‌ರಾಜ್ ಆಂಡ್ ಪ್ಲಾನಿಂಗ್ ಇನ್ ಇಂಡಿಯಾ, ಪಾರ್ಟಿಸಿಪೇಟರಿ ಇನ್‌ಸ್ಟಿಟ್ಯೂಟ್ಸ್ ಆಂಡ್ ರೂರಲ್ ರೂಟ್ಸ್, ನ್ಯೂಡೆಲ್ಲಿ ಏಷಿಯನ್ ಇನ್‌ಸ್ಟಿಟ್ಯುಟ್ ಆಫ್ ಟ್ರಾನ್ಸ್‌ಪೋರ್ಟ್ ಡೆವಲಪ್‌ಮೆಂಟ್, ೧೯೯೫

೩೫. ಅಸ್ಲಮ್ ಎಮ್, ಲೋಕಲ್ ಸೆಲ್ಫ್.–ಗವರ್ನ್‌ಮೆಂಟ್ ಇನ್ ಇಂಡಿಯಾ–ಎ ರಿಟ್ರೂಸ್ಪೆಕ್ಸ್ ಅಂಡ್ ಪ್ರಾಸ್ಪಿಕ್ಟ್ ಇನ್ ಫೆಡರಲ್ ಇಂಡಿಯಾ– ಎ ರಿಟ್ರೋಸ್ಪೆಕ್ಸಿ ಅಂಡ್ ಪ್ರಾಸ್ಪೇಕ್ಟ್ ಇನ್ ಫೆಡರಲ್ ಇಂಡಿಯಾ–ಎಡಿಸೈನ್ ಪಾರ್ ಗುಡ್ ಗನವರ್ನನ್ಸ್–ಮಾನಕ ಪಬ್ಲಿಕೇಷನ್ಸ್ ಹೊಸ ದೆಹಲಿ, ೨೦೦೫

೩೬. ಅಶೋಕ ಮೆಹ್ತಾ ಕಮಿಟಿ ಆನ್ ಪಂಚಾಯತ್ ರಾಜ್(೧೯೭೮) ನ್ಯಾಷನಲ್ ಇನ್ಸಿಟ್ಯೂಟ್ ಆಫ್ ರೂರಲ್ ಡೆವಲಪ್‌ಮೆಂಟ್ ಗವರ್ನಮೆಂಟ್ ಆಫ್ ಇಂಡಿಯಾ, ೨೦೦೫

೩೭. ಅಹುಜಾರಾಮ್, ಇಂಡಿಯನ್ ಸೋಷಿಯಲ್ ಸಿಸ್ಟಮ್, ನ್ಯೂಡೆಲ್ಲಿ, ರಾವಂತ್ ಪಬ್ಲಿಕೇಷನ್, ೧೯೯೩

೩೮. ಒಡಯಿರ್ ಡಿ.ಹೆಗ್ಡೆ, ಕರ್ನಾಟಕ, "ರೂರಲ್ ಎಕಾನಮಿ ವಿಲ್ ಗೆಟ್ ಎ ಬೂಸ್ಟ್ ಲಾಂಗ್ ರನ್" ಇನ್ ಕುರುಕ್ಷೇತ್ರ ಜೂನ್. ೧೯೯೨

೩೯. ಕುಮಾರ್ ಗಿರೀಶ್, ಲೋಕಲ್ ಡೆಮಾಕ್ರಸಿ ಇನ್ ಇಂಡಿಯಾ ಇಂಟರ್‌ಪ್ರೆಟಿಂಗ್ ಡಿಸೆಂಟ್ರಲೈಜೇಶನ್ ಸೇಜ್‌ಪಬ್ಲಿಕೇಷನ್ಸ್, ನ್ಯೂ-ಡೆಲ್ಲಿ. ೨೦೦೬

೪೦. ಗೋಷ್ ರತ್ನ, ಪ್ರಮಾನಕ್ ಅಲೋಕ್ ಕುಮಾರ್, ಪಂಚಾಯತ್ ಸಿಸ್ಟಮ್ ಇನ್ ಇಂಡಿಯಾ ಹಿಸ್ಟೋರಿಕಲ್ ಕಾಂಸ್ಟಿಟ್ಯೂಟೇಶನ್ ಅಂಡ್ ಫೈನಾನ್ಸಿಯಲ್ ಅನಾಲಿಸಸ್, ಕನಿಷ್ಕ ಪಬ್ಲಿಕೆಶನ್  ನ್ಯೂ-ಡೆಲ್ಲಿ. ೧೯೯೯

೪೧. ಚಂದ್ರ ಇ., ಸೋಷಿಯಲ್ ಆ್ಯಂಡ್ ಎಕಾನಾಮಿಕ್ ಪ್ರಾಬ್ಲಮ್ಸ್ ಆಫ್ ಇಂಡಿಯಾ (ಇಸ್ಯೂಸ್ ಆ್ಯಂಡ್) ಚಾಲೆಂಜೇಸ್ ಕಾಸ್ ಮಾಸ್ ಪಬ್ಲಿಷರ್ ೨೦೦೫

೪೨. ಚೋಪ್ರಾ ರಿತಿಕಾ, ಎಕ್ಸಿಟ್ ಪೋಲ್ಸ್ ಆ್ಯಂಡ್ ವೆ ದೇ ಆರ್ ರಿಸ್ಟ್ರಿಕ್ಟಡ್ ಬೈ ದ ಪಾನಲ್, ೨೦೧೭

೪೩. ಜಯ ಪ್ರಕಾಶ ನಾರಾಯಣ, ವರ್ಕಿಂಗ್ ಆಫ್ ಗ್ರಾಮ ಸಭಾ ಇನ್ ಕರ್ನಾಟಕ ಇಸ್ ಸ್ಟಡಿಟ್ ಆಟ್ ಮೈಕ್ರೋ ಲೆವಲ್. ಎಸ್.ಟಿ ಭಾರ್ಗವ ವ್ಯಾಲ್ಯುಂ -೧೩ ನಂ ಏಪ್ರಿಲ್ ಜುನ್, ೧೯೯೪

೪೪. ಜಾರ್ಜ್ ಮ್ಯಾಥ್ಯೋ, ಸ್ಟೇಟ್ಸ್ ಆಫ್ ಪಂಚಾಯತಿ ರಾಜ್ ಇನ್ ದಿ ಸ್ಟೇಟ್ಸ್ ಆಫ್ ಇಂಡಿಯಾ ಐ.ಎಸ್.ಎ.ಎಸ್ ಕಾನ್ಸೆಪ್ಟ್ ಪಬ್ಲಿಷಿಂಗ್, ೧೯೯೫

೪೫. ಜೈನ್ ಭಾರತಿ, ನನ್ ಆಫ್ ದೀ ಅಬೌವ್ ಅನ್ ಇ.ವಿ ಎಂ.ಎಸ್. ಟು ಕ್ಯಾರಿ ಇಟ್ಸ್ ಜನ್ ಸಿಂಬಲ್ ಫ್ರಮ್ ಬಿಹಾರ್ ಪೋಲ್ಸ್, ೨೦೧೫

೪೬. ಡೆವಿಡ್ ಅಸ್ಲಿಮ್ಸೆ, ದ ರಿಲೇಷನ್ ಬಿಟ್‌ವಿನ್ ಪಾಲಿಟಿಕಲ್ ಎಕಾನಾಮಿಕ್ ಆ್ಯಂಡ್ ಡೆವಲಂಪ್‌ಮೆಂಟ್ ೨೦೧೫

೪೭. ಡೇ ಎಸ್.ಕೆ., ಪಂಚಾಯತ್ ರಾಜ್ ಇನ್ ಇನ್‌ಡಿಪೆಂಡೆಟ್ ಇಂಡಿಯಾ ಜಾರ್ಜ್ ಮ್ಯಾಥ್ಯೂ (ಇ.ಡಿ) ನ್ಯೂಡೆಲ್ಲಿ ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪನಿ ೧೯೯೬

೪೮. ಡೇ ಎಸ್.ಕೆ, ಪಂಚಾಯತ್ ರಾಜ್ ಇನ್ ಇನ್‌ಡಿಪೆಂಡೆಂಟ್ ಸಮ್ ಪರ್ಸನಲ್ ರಿಫ್ಲೇಕ್ಷನ್ಸ್ ಇನ್ ಜಾರ್ಜ್ ಮ್ಯಾಥ್ಯೂ (ಇಡಿ) ಪಂಚಾಯತ್ ರಾಜ್ ಇನ್ ಕರ್ನಾಟಕ ಟುಡೇ: ಇಟ್ಸ್ ನ್ಯಾಷನಲ್ ಡೈಮನಕ್ಷನ್ಸ್ ನ್ಯೂ-ಡೆಲ್ಲಿ (ಕಾನ್ಸ್‌ಪ್ಟ್, ೧೯೮೬ ಪು.೪೧) ೧೯೮೬

೪೯. ಡೇವಿಡ್ ಈಸ್ಟನ್. ಪೋಲಿಟಿಕಲ್ ಸಿಸ್ಟಂ ನ್ಯೂಯಾರ್ಕ್, ನೋಫ್ ಪಬ್ಲಿಷರ್,೧೯೫೨

೪೯. ಥಾಮಸ್ ಐಸಕ್ ಟಿ.ಎಂ. ಅಂಡ್ ರಿಚರ್ಚ್ ಡಬ್ಲ್ಯೂ ಪ್ರಾಂಕ್, ಲೋಕಲ್ ಡೆಮಕ್ರಸಿ ಅಂಡ್ ಡೆವಲಪ್‌ಮೆಂಟ್ ಪೀಪಲ್ಸ್ ಕ್ಯಾಪೈನ್ ಡಿಸೆಂಟ್ರಲೈಸ್ಡ್ ಪ್ಲಾನ್ನಿಂಗ್ ಇನ್ ಕೇರಳ ನ್ಯೂ ಡೆಲ್ಲಿ, ೨೦೦೦

